# ಶಾಲಗ್ರಾಮ ಸಂಪುಟ



ಸಂಪಾದಕರು
ಪಡುಪೇಟೆ ಸತೀಶ್ ಕುಮಾರ್



ಪ್ರಧಾನ ಸಂಪಾದಕರು: ರಾಜಾ ಎಸ್. ರಾಜಗೋಪಾಲ ಆಚಾರ್ಯ

ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು

# ಶಾಲಗ್ರಾಮ ಸಂಪುಟ

ಪ್ರಧಾನ ಸಂಪಾದಕರು
**ರಾಜಾ ಎಸ್. ರಾಜಗೋಪಾಲ ಆಚಾರ್ಯ**
ಶ್ರೀಗಳವರ ಆಪ್ತಕಾರ್ಯದರ್ಶಿಗಳು
ಶ್ರೀ ರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

ಸಂಪಾದಕರು
**ಪಡುಪೇಟೆ ಸತೀಶ ಕುಮಾರ್**
ಪರ್ಕಳ, ಉಡುಪಿ



**ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ (ರಿ.)**
ನಂಜನಗೂಡು

## Sālagrāma Samputa

A Collection of informations about 'Salagrama' the Holy and Divine Pebbles worshipped by the Hindus.

Described by : P. Sathish Kumar, 'Krishna', Friend's Colony, Market Road, Parkala, Udupi-576107. Mob. 9481267240

Published by : Sri Sushamindra Seva Pratishtana, Nanjanagudu.

First Impression : January 2010 (1000 copies)
Second Impression : August 2010 (2500 copies)



Pages : xvi+128+104 (Picture Pages)

Price : **Rs. 300/-**

*DTP by* : 'Sri Navadurga Lasertech',
C/o. Dr. K. Padmanabha Kekunnaya, Udupi-576102. [Mob.: 9342438727]

*Cover Design* : T. Ganesh Pai, Bharath Press, Kalsanka, Udupi - 2
Mobile: 99725 20452

*Printed at* : Bharath Press, Kalsanka, Udupi - 576102.

## ಶ್ರೀ ರಾಘವೇಂದ್ರ ಸ್ವಾಮಿಗಳವರ ಮೂಲ ವೃಂದಾವನ – ಮಂತ್ರಾಲಯ





ಪರಮಪೂಜ್ಯ ಶ್ರೀ ಶ್ರೀ ೧೦೦೮

**ಶ್ರೀ ಸುಶಮೀಂದ್ರತೀರ್ಥ ಸ್ವಾಮೀಜಿಗಳವರು**

ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ



ಪರಮಪೂಜ್ಯ ಶ್ರೀ ಶ್ರೀ ೧೦೦೮

**ಶ್ರೀ ಸುಯತೀಂದ್ರತೀರ್ಥ ಸ್ವಾಮೀಜಿಗಳವರು**

ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ

# Sālagrāma Sampuṭa

A Collection of informations about 'Salagrama' the Holy and Divine Pebbles worshipped by the Hindus.

Described by : P. Sathish Kumar, 'Krishna', Friend's Colony, Market Road, Parkala, Udupi-576107. Mob. 9481267240

Published by : Sri Sushamindra Seva Pratishtana, Nanjanagudu.

First Impression : January 2010 (1000 copies)
Second Impression : August 2010 (2500 copies)



Pages : xvi+128+104 (Picture Pages)

Price : **Rs. 300/-**

*DTP by* : 'Sri Navadurga Lasertech', C/o. Dr. K. Padmanabha Kekunnaya, Udupi-576102. [Mob.: 9342438727]

*Cover Design* : T. Ganesh Pai, Bharath Press, Kalsanka, Udupi - 2 Mobile: 99725 20452

*Printed at* : Bharath Press, Kalsanka, Udupi - 576102.

# ಶ್ರೀ ರಾಘವೇಂದ್ರ ಸ್ವಾಮಿಗಳವರ ಮೂಲ ವೃಂದಾವನ – ಮಂತ್ರಾಲಯ





ಪರಮಪೂಜ್ಯ ಶ್ರೀ ಶ್ರೀ ೧೦೦೮
**ಶ್ರೀ ಸುಶಮೀಂದ್ರತೀರ್ಥ ಸ್ವಾಮೀಜಿಗಳವರು**
ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ



ಪರಮಪೂಜ್ಯ ಶ್ರೀ ಶ್ರೀ ೧೦೦೮
**ಶ್ರೀ ಸುಯತೀಂದ್ರತೀರ್ಥ ಸ್ವಾಮೀಜಿಗಳವರು**
ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ





**ಶ್ರೀ ರಾಜಾ ಎಸ್. ರಾಜಗೋಪಾಲ ಆಚಾರ್ಯರು**

ಶ್ರೀಗಳವರ ಆಪ್ತ ಕಾರ್ಯದರ್ಶಿ

ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ

# ಪ್ರಕಾಶಕೀಯ

ಶಾಲಗ್ರಾಮವು ಹಿಂದೂಧರ್ಮೀಯರಿಗೆ ಪರಮಪವಿತ್ರವಾದ ಶಿಲೆ. ನಮ್ಮ ಮನದ ಭಾವನೆಗಳು ಧನಾತ್ಮಕವಾಗಿರುವಾಗ ಶಾಲಗ್ರಾಮಶಿಲೆಯಿಂದ ಧನಾತ್ಮಕವಾದ ಪ್ರತಿಕ್ರಿಯೆ ಬರುತ್ತದೆ. ಮಾತನಾಡದ ಆ ಶಿಲೆ ಪ್ರಾರ್ಥನೆಯ ಮನಕ್ಕೆ ಒಲಿಯುತ್ತದೆ. ಭಕ್ತಿಯ ಕೇಂದ್ರೀಕರಣದ ಉತ್ಕಟ ಸ್ಥಿತಿಯಲ್ಲಿ ಈ ಕ್ರಿಯೆ ಜರಗುತ್ತದೆ. ಮಿಕ್ಕಿದ್ದು ಸಸ್ಯರಾಶಿಯಲ್ಲಿಯೇ ಅಪೂರ್ವವಾದ ತುಳಸಿ, ಶ್ರೀಗಂಧ, ವಿವಿಧ ಪುಷ್ಪಗಳಿಂದ ದೊರಕುತ್ತದೆ. ಜ್ಯೋತಿಃಶಾಸ್ತ್ರವು ಹೇಳುವ ಪೂರ್ಣಿಮೆಯ ದಿನಗಳಲ್ಲಿ ಸಾಗರದಲ್ಲಿ ಆಗುವ ಅಬ್ಬರದ ಪರಿಣಾಮಗಳನ್ನು ಈಗಿನ ವಿಜ್ಞಾನ ಅನುಮೋದಿಸುತ್ತದೆ. ಅಮಾವಾಸ್ಯೆಯ ಮೊದಲು ಮತ್ತು ಆ ದಿನ ಆಗುವ ಬದಲಾವಣೆಗಳು ಈಗಿನ ವಿಜ್ಞಾನಕ್ಕೂ ಅರ್ಥವಾಗುತ್ತಿದೆ.

5535 ರೂಪಗಳುಳ್ಳ ಶಾಲಗ್ರಾಮವು ಎಂದಿಗೂ ಶಾಂತ. ಶ್ರೀ ಜಗನ್ನಾಥ ದಾಸರು ಹೇಳಿದಂತೆ, ಶಾಲಗ್ರಾಮಸನ್ನಿಹಿತನಾದ ಮಹಾವಿಷ್ಣುವು ಶ್ರೀಭೂದೇವಿಯರ ಅಭಿಮಾನಿ. ಉತ್ತಮ ಮಾನವರ ಕಣ್ಮಣಿ. ಭಾಗವತೋತ್ತಮರ ಶಿರೋಮಣಿ. ಶ್ರೀ ಪುರಂದರದಾಸರು ಹೇಳಿದಂತೆ ಸಕಲ ತೀರ್ಥಗಳಲ್ಲಿ ಶಾಲಗ್ರಾಮತೀರ್ಥ ಪರಮಪವಿತ್ರ – ಸಕಲ ವೃಕ್ಷಗಳಿಗಿಂತ ತುಳಸಿ ಹೇಗೋ ಹಾಗೆ. ಶಾಲಗ್ರಾಮ ಯಥಾರ್ಥವಾಗಿ ಆಗತಾನೇ ಹುಟ್ಟಿದ ಮಗುವಿನಂತೆ; ಅದಾಗಷ್ಟೇ ಅರಳುತ್ತಿರುವ ಹೂವಿನಂತೆ. ಅಂತಹ ಹೂವಿನ ಮಾಲೆಯನ್ನು ನಮ್ಮ ಪಡುಪೇಟೆ ಶ್ರೀ ಸತೀಶ ಕುಮಾರರು ಶ್ರೀಕೃಷ್ಣನಿಗೆ ತೊಡಿಸುತ್ತಿದ್ದಾರೆ. ಶಾಲಗ್ರಾಮದ ಬಗೆಗೆ ಇರುವ ಅನೇಕ ಮೂಢನಂಬಿಕೆಗಳು ಇವರ ಸಂಶೋಧನೆಯಿಂದ ದೂರವಾಗಿದೆ. ಶಾಲಗ್ರಾಮ ಎಂದಿನಂತೆ ಪ್ರಜ್ವಲವಾಗಿ, ಜಾಜ್ವಲ್ಯಮಾನವಾಗಿ ಶ್ರೀ ಸತೀಶರ ಹಸ್ತದಲ್ಲಿ ಕಂಗೊಳಿಸುತ್ತಿದೆ.

ಬಹಳ ವರ್ಷಗಳಿಂದ ಕಷ್ಟಪಟ್ಟು ಸ್ವತಃ ನೇಪಾಲರಾಷ್ಟ್ರಕ್ಕೆ ತೆರಳಿ, ಆ ಹಿಮದ ತಪ್ಪಲಿನಲ್ಲಿರುವ ಸಾಧುಸಂತರನ್ನು, ಋಷಿಸದೃಶರನ್ನು ವಿಚಾರಿಸಿ, ಬಹಳ ಶ್ರಮವಹಿಸಿ ಸಿದ್ಧಪಡಿಸಿದ ದ್ರಾಕ್ಷಾಪಾಕವಿದು. ಇವರ ಶ್ರಮಪೂರ್ಣ ಸಾಧನೆ ವಿಶೇಷವಾದುದು. ಕನ್ನಡ ವಾಙ್ಮಯ ಮಾತ್ರವಲ್ಲ, ಸಂಸ್ಕೃತ, ಆಂಗ್ಲ, ಹಿಂದೀ ಭಾಷೆಗಳಲ್ಲಿಯೂ ಕೂಡ ಇಂತಹದೊಂದು ಸಚಿತ್ರ ಸಂಪುಟ ಇದುವರೆಗೆ ಬಂದುದು ನಮ್ಮ ಗಮನಕ್ಕೆ ಬಂದಿಲ್ಲ. ಕನ್ನಡದಲ್ಲಿ ಪ್ರಕಟಗೊಂಡ ಶಾಲಗ್ರಾಮದ ಕುರಿತ ಈ ಮೇರುಕೃತಿ ಅಂತಹ ಕೊರತೆಯನ್ನು ಸ್ವಲ್ಪಮಟ್ಟಿಗೆ ನೀಗಿಸಿದೆ. ಮುಂದೆ ಶಾಲಗ್ರಾಮದ ಬಗೆಗೆ ಅಧ್ಯಯನ ಮಾಡುವವರಿಗೆ ಇದೊಂದು ದಾರಿದೀಪವಾಗಲಿ.

ನಮ್ಮ ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನವು ಉಜ್ವಲವಾಗಿ ಬೆಳೆಯಲು ಆಶೀರ್ವದಿಸಿದಂತಹ ಶ್ರೀ ಸುಯತೀಂದ್ರತೀರ್ಥ ಸ್ವಾಮೀಜಿಗಳವರು, ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು, ಶ್ರೀವಿದ್ಯಾಸಾಗರತೀರ್ಥ ಶ್ರೀಪಾದಂಗಳವರು, ಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರು, ಶ್ರೀಸುಗುಣೇಂದ್ರತೀರ್ಥ ಶ್ರೀಪಾದಂಗಳವರು, ಶ್ರೀಲಕ್ಷ್ಮೀವರತೀರ್ಥ ಶ್ರೀಪಾದಂಗಳವರು, ಶ್ರೀ ವಿದ್ಯಾವಲ್ಲಭ ತೀರ್ಥ ಶ್ರೀಪಾದಂಗಳವರು, ಶ್ರೀವಿಬುಧೇಶತೀರ್ಥ ಶ್ರೀಪಾದಂಗಳವರಿಗೆ ಅನಂತ ನಮಸ್ಕಾರಗಳು. ಈ ಸಂಸ್ಥೆ ಬೆಳೆಯಲು ಸಹಾಯಮಾಡಿದಂತಹ ನನ್ನ ತಮ್ಮ ಶ್ರೀ ಸುಯಮೀಂದ್ರನಿಗೆ ಪ್ರೀತಿಪೂರ್ವಕ ಆಶೀರ್ವಾದಗಳು.

ಶ್ರೀ ಸತೀಶ ಕುಮಾರರ ಶ್ರಮಕ್ಕೆ ನಮ್ಮ ನಮನ. ಅವರಿಗೆ ಶ್ರೀ ರಾಯರ ದಿವ್ಯಾನುಗ್ರಹ ಸದಾ ಇರಲಿ.

ಇತಿ ಶುಭಾಶಂಸನೆಗಳೊಂದಿಗೆ,

**ರಾಜಾ ಎಸ್. ರಾಜಗೋಪಾಲಾಚಾರ್ಯ**

ಶ್ರೀ ಸ್ವಾಮಿಗಳವರ ಆಪ್ತಕಾರ್ಯದರ್ಶಿಗಳು

ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ.





**ಶ್ರೀಶ್ರೀವಿದ್ಯಾಸಾಗರತೀರ್ಥಶ್ರೀಪಾದಂಗಳವರು**

ಶ್ರೀಕೃಷ್ಣಾಪುರ ಮಠ,

ರಥಬೀದಿ, ಉಡುಪಿ-೫೭೬೧೦೧

# ಅನುಗ್ರಹಸಂದೇಶ

ಪಡುಪೇಟೆ ದಿ। ವೆಂಕಟಕೃಷ್ಣ ಉಪಾಧ್ಯಾಯರ ಮಗ ಪಡುಪೇಟೆ ಸತೀಶಕುಮಾರ ಇವರು ಬರೆದು ಸಂಗ್ರಹಿಸಿರುವ ಶಾಲಗ್ರಾಮಶಿಲೆಗಳ ಬಗ್ಗೆ ಅಪೂರ್ವ ಮಾಹಿತಿ ಹಾಗೂ ಛಾಯಾಚಿತ್ರಗಳಿರುವ ಪುಸ್ತಕ ಒಂದು ಶ್ರೀಶ್ರೀಶ್ರೀ ಸುಶಮೀಂದ್ರತೀರ್ಥಶ್ರೀಪಾದಂಗಳವರ ಸೇವಾ ಪ್ರತಿಷ್ಠಾನ, ನಂಜನಗೂಡು ಇದರ ವತಿಯಿಂದ ಪ್ರಕಟವಾಗಲಿರುವ ವಿಚಾರ ತಿಳಿದು ಸಂತೋಷವಾಯಿತು. ಉತ್ತಮ ದರ್ಜೆಯ ಶಾಲಗ್ರಾಮಗಳು ದುರ್ಲಭವಾಗಿರುವ ಹಾಗೂ ಕೃತಕ ಶಾಲಗ್ರಾಮಗಳು ಯಥೇಚ್ಛವಾಗಿ ದೊರೆಯುವ ಈ ಸಂದರ್ಭದಲ್ಲಿ, ಅವುಗಳ ಬಗ್ಗೆ ಪ್ರಮಾಣಸಹಿತ ಮಾಹಿತಿ ಕೊಟ್ಟಿರುವುದಲ್ಲದೆ, ಅನೇಕ ಛಾಯಾಚಿತ್ರಗಳನ್ನೂ ಸಂಗ್ರಹಿಸಿಕೊಟ್ಟಿರುವುದರಿಂದ ಜಿಜ್ಞಾಸುಗಳಿಗೆ ಒಂದೇ ಮೂರ್ತಿಯ ಶಾಲಗ್ರಾಮಗಳಲ್ಲಿರುವ ಅವಾಂತರಭೇದವನ್ನು ತಿಳಿಯಲು ಬಹಳಷ್ಟು ಉಪಕಾರ ಮಾಡಿದಂತಾಗಿದೆ. ಲೇಖಕರು ತುಂಬ ಶ್ರಮವಹಿಸಿ ಸಂಪಾದಿಸಿದ ಈ ಗ್ರಂಥವನ್ನು ಶ್ರೀಶ್ರೀಶ್ರೀ ಸುಶಮೀಂದ್ರತೀರ್ಥಶ್ರೀಪಾದಂಗಳವರ ಸೇವಾ ಪ್ರತಿಷ್ಠಾನ, ನಂಜನಗೂಡು ಇವರು ಪ್ರಕಟಿಸಿ ಒಂದು ಉತ್ತಮ ಕೆಲಸ ಮಾಡಿದ್ದಾರೆ. ದೇವರ ಸ್ವಯಂ ವ್ಯಕ್ತ ಪ್ರತಿಮೆಗಳೆನಿಸಿರುವ ಶಾಲಗ್ರಾಮಗಳ ಬಗ್ಗೆ ಮಾಹಿತಿ ನೀಡಿದ್ದರಿಂದ ದೇವರ ಸೇವೆಯ ಜೊತೆಗೆ ಜಿಜ್ಞಾಸುಗಳಿಗೂ ಹೊಸ ವಿಚಾರಗಳನ್ನು ಸಂಗ್ರಹಿಸಿ ನೀಡಿದ್ದರಿಂದ ಅವರ ಜ್ಞಾನದಾಹವನ್ನು ತಣಿಸುವ (ವಿದ್ಯಾದಾನ ಮಾಡಿದ) ಜನಸೇವೆ ಕೂಡ ಮಾಡಿದಂತಾಗಿದೆ. ಅಭೂತಪೂರ್ವವಾದ ಈ ಗ್ರಂಥದ ಸಂಪಾದನೆ ಮಾಡಿದ ಪಡುಪೇಟೆ ಸತೀಶಕುಮಾರ ಇವರಿಗೆ ಹಾಗೂ ಇದನ್ನು ಪ್ರಕಟಿಸಲಿರುವ ಶ್ರೀಶ್ರೀಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಸೇವಾ ಪ್ರತಿಷ್ಠಾನ ನಂಜನಗೂಡು ಇದರ ಪದಾಧಿಕಾರಿಗಳಿಗೂ ಕಾಲಿಯಮರ್ದನ ಶ್ರೀಕೃಷ್ಣದೇವರು ವಿಶೇಷಾನುಗ್ರಹ ಮಾಡಲಿ. ಜಿಜ್ಞಾಸುಗಳು ಈ ಗ್ರಂಥವನ್ನು ಕೊಂಡು ಓದಿ ಲೇಖಕರನ್ನು ಹಾಗೂ ಪ್ರಕಾಶಕರನ್ನು ಪ್ರೋತ್ಸಾಹಿಸಲಿ ಎಂದು ನಮ್ಮ ಆರಾಧ್ಯಮೂರ್ತಿ ಶ್ರೀನೃಸಿಂಹ ಕಾಲಿಯಮರ್ದನ ಕೃಷ್ಣ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣಸ್ಮರಣೆಗಳು

ಸಹಿ/-

(ಶ್ರೀಶ್ರೀವಿದ್ಯಾಸಾಗರತೀರ್ಥಶ್ರೀಪಾದಂಗಳವರು)



# ಅನುಗ್ರಹಸಂದೇಶ




**ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು**

ಶ್ರೀಪಲಿಮಾರು ಹೃಷೀಕೇಶ ಮಠ,

ರಥಬೀದಿ, ಉಡುಪಿ-೫೭೬೧೦೧.


॥ ಶ್ರೀ ರಾಮ ಶ್ರೀಃ ॥

ಪೂಜೆಯ ಪ್ರಧಾನಾಂಗ ಶಾಲಗ್ರಾಮ. ತೀರ್ಥ ಆಗಬೇಕಾದರೆ ಶಾಲಗ್ರಾಮ ಇರಲೇಬೇಕು. ಪ್ರತಿಯೊಂದು ದೇವಾಲಯದಲ್ಲೂ ಶಾಲಗ್ರಾಮವಿದ್ದೇ ಇರುತ್ತದೆ. ಶಾಲಗ್ರಾಮ ಶುದ್ಧತೆಯ ಪ್ರತೀಕ. ದೇವರ ವಿಚಿತ್ರ ಸೃಷ್ಟಿ. ಶಾಲಗ್ರಾಮಶಿಲೆಯೇ ಆಕರ್ಷಣೆಯ ಸೆಲೆ. ಅತ್ಯಂತ ನುಣುಪಾದುದು. ಚಿಕ್ಕ ಬಿಲ. ಅದರೊಳಗೆ ಮನೋಜ್ಞರೇಖೋಪರೇಖೆಗಳು. ಸುಂದರ ಸುದರ್ಶನಗಳು. ಒಂದು ಶಾಲಗ್ರಾಮದಲ್ಲಿ ಅದೆಷ್ಟು ಬಿಲಗಳು! ಒಂದು ಬಿಲದೊಳಗೆ ಅದೆಷ್ಟು ಸುದರ್ಶನಗಳು! ನೀರು ನೀಡುವ ಶಾಲಗ್ರಾಮ, ಬಂಗಾರವೀಯುವ ಶಾಲಗ್ರಾಮ – ಹೀಗೆ ಚಿತ್ರವಿಚಿತ್ರ ಶಾಲಗ್ರಾಮಗಳ ಸೊಬಗು ಅನ್ಯಾದೃಶ. "ಬಹುಚಿತ್ರ ಜಗದ್ಬಹುಧಾ ಕರಣಾತ್ ಪರಶಕ್ತಿರನಂತಗುಣಃ ಪರಮಃ" ಎಂಬ ಮಧ್ವಾಚಾರ್ಯರ ದ್ವಾದಶಸ್ತೋತ್ರದ ವಾಕ್ಯ ನೆನಪಿಗೆ ಬರುತ್ತದೆ. ಇಂತಹ ನಾಜೂಕಾದ ಕಾರ್ಯ ನಡೆಯಬೇಕಾದರೆ ಭಗವಂತನ ಅಚಿಂತ್ಯಾದ್ಭುತ ಶಕ್ತಿ ಇರಲೇಬೇಕು ತಾನೇ? ಶಾಲಗ್ರಾಮದಲ್ಲಿ ಭಗವಂತನ ನಿತ್ಯ ಸನ್ನಿಧಾನ. ಇಂತಹ ಶಾಲಗ್ರಾಮ ನಿತ್ಯಸ್ಪರ್ಶ ಮಾಡುವವನ ಹಸ್ತ ಅದೆಷ್ಟು ಪವಿತ್ರ, ಇಂದ್ರಾದಿ ದೇವತೆಗಳೂ ಆತನ ಹಸ್ತಲಾಘವಕ್ಕಾಗಿ ಹಾತೊರೆಯುತ್ತಾರೆ.

**ಶಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದ್ವಿಜೋತ್ತಮಾಃ ।**
**ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ ॥**

ಈ ಶಾಲಗ್ರಾಮಗಳಲ್ಲಿ ನಾಮ, ರೂಪ, ಗಾತ್ರ, ರೇಖೆಗಳಿಂದ ಭಗವಂತನ ಮತ್ಸ್ಯಾದಿ ನಾನಾವಿಧ ಪ್ರತೀಕಗಳನ್ನು ಗುರುತಿಸಿದ್ದಾರೆ.

ಇಂತಹ ಶಾಲಗ್ರಾಮಗಳ ಚಿತ್ರ-ಲಕ್ಷಣಸಹಿತವಾದ ಸಮಗ್ರ ಮಾಹಿತಿಯ ಅಪೂರ್ವವಾದ ಪುಸ್ತಕದ ಕೊಡುಗೆ ನೀಡಿರುವ "ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ"ವನ್ನು ತುಂಬುಹೃದಯದಿಂದ ಅಭಿನಂದಿಸುತ್ತೇವೆ. ಚೊಚ್ಚಲ ಪ್ರಕಾಶನದ ವೈಭವವೇ ಹೀಗಿದ್ದರೆ, ಮುಂದಿನದ್ದು ವರ್ಣನಾತೀತವೇ ಸರಿ. ಏಕಕಾಲದಲ್ಲಿ ನೂರಾರು ಕೃತಿರತ್ನಗಳನ್ನು ಲೋಕಾರ್ಪಣೆಗೈದು ಪ್ರಖ್ಯಾತರಾದ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರರ ರೂವಾರಿಯಲ್ಲಿ ಪ್ರಾರಂಭಗೊಳ್ಳುವ ಈ ಪ್ರಕಾಶನ ಸಂಸ್ಥೆಗೂ ಕೃತಿರತ್ನಕ್ಕೂ ಶುಭ ಹಾರೈಸುತ್ತೇವೆ. ಅಷ್ಟೊಂದು ಶಾಲಗ್ರಾಮಗಳ ಭಾವಚಿತ್ರಗಳನ್ನೂ ಸಂಗ್ರಹಿಸಿ ಹರಸಾಹಸಗೈದ ಇದರ ಸಂಪಾದಕರಾದ ಶ್ರೀ ಪಡುಪೇಟೆ ಸತೀಶ ಕುಮಾರ ಉಪಾಧ್ಯಾಯರಿಗೂ ತುಂಬುಹೃದಯದ ಅಭಿನಂದನೆಗಳು.

ಮುಂದಿನ ಕೃತಿಗಳಿಗೂ ಇದು ಸ್ಫೂರ್ತಿಯ ಸೆಲೆಯಾಗಲಿ ಎಂದು ನಮ್ಮ ಆರಾಧ್ಯಮೂರ್ತಿಗಳಾದ ರಾಮ-ಕೃಷ್ಣ-ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣಸ್ಮರಣೆಗಳು

ಸಹಿ/-

(ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು)





**ಶ್ರೀಶ್ರೀಸುಗುಣೇಂದ್ರತೀರ್ಥಶ್ರೀಪಾದರು**
ಶ್ರೀಪುತ್ತಿಗೆ ಮಠ,
ರಥಬೀದಿ, ಉಡುಪಿ-೫೭೬೧೦೧.

# ಅನುಗ್ರಹಸಂದೇಶ

ನಮ್ಮ ಸಂಸ್ಥಾನದ ಮುಖ್ಯಾಭಿಮಾನಿಗಳಾದ ಶ್ರೀಯುತ ರಾಜಾ ಎಸ್. ರಾಜಗೋಪಾಲಾಚಾರ್ಯ ಇವರಿಗೆ ಮಾಡುವ ಶ್ರೀಮನ್ನಾರಾಯಣ ಸ್ಮರಣೆಗಳು.

ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನದ ವತಿಯಿಂದ ಧಾರ್ಮಿಕ ಹೊತ್ತಗೆಗಳನ್ನು ತರುತ್ತಿರುವ ವಿಷಯ ತಿಳಿದು ಸಂತೋಷವಾಗಿದೆ. ಶಾಲಗ್ರಾಮದ ಲಕ್ಷಣ ಮತ್ತು ಮಹತ್ತ್ವವನ್ನು ತಿಳಿಸುವ ಈ ಪುಸ್ತಕ ಹೊರಬರುತ್ತಿರುವುದು ಬಹಳ ಸ್ತುತ್ಯರ್ಹ.

**ಶಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದ್ವಿಜೋತ್ತಮಾಃ।**
**ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ॥**

ಶಾಲಗ್ರಾಮವನ್ನು ದಿನವೂ ಮುಟ್ಟಿ ಯಾರು ಪೂಜಿಸುವರೋ ಅಂತಹವರ ಕರಸ್ಪರ್ಶವನ್ನು ಇಂದ್ರನೂ ದೇವತೆಗಳ ಜತೆ ನಿತ್ಯವೂ ಬಯಸುತ್ತಾನೆ.

ಶಾಲಗ್ರಾಮ, ಚಕ್ರಾಂಕಿತ ನಿತ್ಯವೂ ಎಲ್ಲಿ ಸನ್ನಿಹಿತವಾಗಿದೆಯೋ ಅಲ್ಲಿ ಮೂರು ಯೋಜನ ಸುತ್ತಲೂ ನನ್ನ ವಿಶೇಷ ಸನ್ನಿಧಾನವಿರುವುದು. ಹೀಗೆ ಪುರಾಣಗಳಲ್ಲಿ ಪ್ರಶಂಸಿಸಿರುವ ಶಾಲಗ್ರಾಮದ ಬಗ್ಗೆ ಲಕ್ಷಣಸಹಿತ ಸಚಿತ್ರವಾಗಿ ಈ ಹೊತ್ತಗೆ ಬರುತ್ತಿರುವುದು ಹರಿಗೆ ಪ್ರಿಯವಾಗಿರುವ ಕಾರ್ಯ.

ನಿತ್ಯವೂ ದೇವಪೂಜಾ ಸಂದರ್ಭದಲ್ಲಿ ಭಗವಂತನ ವಿಶೇಷ ಅನುಸಂಧಾನಕ್ಕೆ ಈ ಪುಸ್ತಕ ಉಪಯುಕ್ತವಾಗಲಿ. ಹೀಗೆ ಅನೇಕ ಧಾರ್ಮಿಕ ಕೃತಿಗಳು ಈ ಪ್ರತಿಷ್ಠಾನದಿಂದ ಹೊರಬರುತ್ತಿರಲಿ ಎಂದು ಆರಾಧ್ಯದೇವ ಶ್ರೀ ವಿಟ್ಠಲ ಕೃಷ್ಣ ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ.

ಕೃತಿರಚನೆಯನ್ನೂ, ಅವಶ್ಯ ವಿಷಯಗಳನ್ನೂ ಸಂಗ್ರಹಿಸಿರುವ ನಮ್ಮ ಪ್ರೀತಿಯ ಶ್ರೀ ಪಡುಪೇಟೆ ಸತೀಶಕುಮಾರ್ ಅವರಿಗೂ ಶ್ರೀ ಜಯತೀರ್ಥಾಚಾರ್ಯರಿಗೂ ಹರಿವಾಯುಗಳು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣಸ್ಮರಣೆಗಳು

ಸಹಿ/-
(ಶ್ರೀಶ್ರೀಸುಗುಣೇಂದ್ರತೀರ್ಥಶ್ರೀಪಾದಂಗಳವರು)



ಶ್ರೀ ರಾಘವೇಂದ್ರ ಸ್ವಾಮಿಗಳವರ
ಮೃತ್ತಿಕಾ ವೃಂದಾವನ, ಉಡುಪಿ



## ಶ್ರೀ ಜಯತೀರ್ಥ ಆಚಾರ್ಯರು

ಪ್ರಬಂಧಕರು
ನಂಜನಗೂಡು ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಉಡುಪಿ.

ನಾನು ಪ್ರತಿನಿತ್ಯ ನೋಡುತ್ತಿದ್ದೇನೆ– ಜನರಿಗೆ ನಾನಾ ರೀತಿಯ ರತ್ನಗಳ ಬಗ್ಗೆ ಇರುವ ಹುಚ್ಚು. ಯಾಕೆಂದರೆ ಅವರಿಗೆ ಅದರಲ್ಲಿ ನಂಬಿಕೆ ಇದೆ. ಇಂತಹ ರತ್ನ ಧರಿಸುವುದರಿಂದ ನನಗೆ ಅನುಕೂಲವಾಗಲಿದೆ, ರಕ್ಷೆ ಸಿಕ್ಕಲಿದೆ, ಅದೃಷ್ಟ ಬರಲಿದೆ ಹಾಗಾಗಿ ಅದಕ್ಕೆ ಎಷ್ಟೇ ಬೆಲೆ ಇದ್ದರೂ ಅದನ್ನು ಖರೀದಿಸುತ್ತಾರೆ. ಆದರೆ ಅದೇ ನಂಬಿಕೆ ಯಾಕಿಲ್ಲ ಶಾಲಗ್ರಾಮದಲ್ಲಿ?

ಪ್ರಪಂಚದಲ್ಲಿ ಇರುವ ಭೂಗರ್ಭ ಸಂಪತ್ತು ಅದ್ಭುತ. ಅದನ್ನು ಯಾರೂ ನಿರೀಕ್ಷಿಸಲಿಕ್ಕೆ ಸಾಧ್ಯವಿಲ್ಲ. ಎಲ್ಲಾ ರೀತಿಯ ವಸ್ತುಗಳಿಗೆ ಅಧಿಪತಿ ಭಗವಂತನೇ. ಸೃಷ್ಟಿ, ಸ್ಥಿತಿ, ಸಂಹಾರಕರ್ತ ಭಗವಂತನೇ. ಪ್ರಕೃತಿಯಿಂದ ಸಿಕ್ಕುವ ಒಂದೊಂದು ವಸ್ತುವಿಗೆ ನಾನಾ ರೀತಿಯ ಶಕ್ತಿ ಇದೆ. ನಾನಾ ರೀತಿ ಅರ್ಥವಿದೆ. ಆದರೆ ನಾವು ಅದನ್ನು ತಿಳಿಯುವುದರಲ್ಲಿ ಹಿಮ್ಮುಖರಾಗಿದ್ದೇವೆ. ಇದನ್ನು ಪೂರ್ವಜರು ಅರಿತಿದ್ದರೋ ಏನೋ. ಹಾಗಾಗಿ ಅವರು ಮನೆಯಲ್ಲಿ, ಮಂದಿರದಲ್ಲಿ ಈ ಪ್ರಕೃತಿಯಿಂದ ಸಿಕ್ಕುವ ಅದ್ಭುತ ವಸ್ತುಗಳನ್ನು ಸಂಗ್ರಹಿಸಿ ಇಡುತ್ತಿದ್ದರು. ಅದನ್ನು ನಂಬಿ ಅದರಿಂದ ಉತ್ತಮ ಫಲ ಅನುಭವಿಸುತ್ತಿದ್ದರು. ಹೀಗೆ ಉತ್ತಮ ಫಲವನ್ನು ಕೊಡುವಂತಹವುಗಳಲ್ಲಿ ಸಾಲಿಗ್ರಾಮದ ಸ್ಥಾನ ಅತ್ಯುನ್ನತ, ಉತ್ಕೃಷ್ಟ. ಜ್ಯೋತಿಷಶಾಸ್ತ್ರದಲ್ಲಿ ನಾನಾ ರತ್ನಗಳ ಬಗ್ಗೆ ಉಲ್ಲೇಖ ಇದೆ. ಶಾಲಗ್ರಾಮದ ಬಗ್ಗೆಯೂ ಚಿಂತನೆ ಇದೆ. ಹಸಿರುಕಲ್ಲು, ಮರಕತ, ಪಚ್ಚೆ ಇತ್ಯಾದಿ ಕಲ್ಲುಗಳನ್ನು ಬುಧನಿಂದ ಚಿಂತಿಸಬೇಕು ಎಂದಿದ್ದಾರೆ. ಹಾಗೇ, ಶಾಲಗ್ರಾಮವನ್ನೂ ಬುಧನಿಂದಲೇ ಚಿಂತಿಸಬೇಕು. ಹಸಿರುಕಲ್ಲನ್ನು ನಾವು ಧರಿಸಿ ಉತ್ತಮ ಅದೃಷ್ಟವನ್ನು ಹೊಂದುವುದಾದರೆ ಶಾಲಗ್ರಾಮದಿಂದ ಸಾಧ್ಯವಿಲ್ಲವೇ. ಖಂಡಿತ ಸಾಧ್ಯ. ಶಾಲಗ್ರಾಮವನ್ನು ಗೃಹದಲ್ಲಿ ಇಟ್ಟುಕೊಳ್ಳುವುದರಿಂದ, ಪೂಜಿಸುವುದರಿಂದ ಸರ್ವರೀತಿಯ ಮನೋರಥ ಪಡೆಯಲು ಸಾಧ್ಯ. ಶಾಲಗ್ರಾಮಕ್ಕೆ ಅಭಿಷೇಕ ಮಾಡಿದ ನೀರನ್ನು ಸೇವಿಸುವುದರಿಂದ ಆರೋಗ್ಯವೃದ್ಧಿಯಾಗುವುದು ಖಂಡಿತ.

ಪಾಶ್ಚಾತ್ಯರು ಶಾಲಗ್ರಾಮವನ್ನು ಧರಿಸುವುದಿದೆ. ಅವರಿಗೆ ಅದು ಒಂದು ರೀತಿಯ ರತ್ನ. ಆದರೆ ಹಿಂದುಗಳಿಗೆ ಅದೇ ದೇವರು. ದೇವರ ಸೃಷ್ಟಿ ಅದ್ಭುತ. ಶಾಲಗ್ರಾಮದ ಒಳಗೆ ಇರುವ ಚಕ್ರ ಅದ್ಭುತ. ಪ್ರತಿಯೊಂದು ರಂಧ್ರಗಳಲ್ಲೂ ಭಗವಂತನ ಚಿಹ್ನೆ ಇದೆ. ಈ ಚಿಹ್ನೆಯಿಂದಲೇ ಭಗವಂತನ ರೂಪಚಿಂತನೆ. ಈ ಚಿಂತನೆಯನ್ನು ಸೂಕ್ಷ್ಮವಾಗಿ ಚಿಂತಿಸಲು ನಮಗೆಲ್ಲ ಬಹು ಉಪಕಾರ ಮಾಡಿದ್ದಾರೆ ಪರಮಪೂಜ್ಯ ಶ್ರೀಶ್ರೀ 108ಶ್ರೀ ಸುಶಮೀಂದ್ರತೀರ್ಥಶ್ರೀಪಾದರ ಪೂರ್ವಾಶ್ರಮದ ಜ್ಯೇಷ್ಠಪುತ್ರರಾದ ಶ್ರೀ ರಾಜಾ ಎಸ್. ರಾಜಗೋಪಾಲ ಆಚಾರ್ಯರ ಮಾರ್ಗದರ್ಶನದಲ್ಲಿ ಶ್ರೀ ಪಡುಪೇಟೆ ಸತೀಶ ಉಪಾಧ್ಯಾಯರು.

ಶಾಲಗ್ರಾಮಕ್ಕೆ ವಿಶೇಷ ಶಕ್ತಿ ಇದೆ ಎಂದು ಉದಾಹರಿಸಲು ನಾನು ಒಂದು ದೃಷ್ಟಾಂತ ಹೇಳಬಯಸುತ್ತೇನೆ. ಈ ದೃಷ್ಟಾಂತಕ್ಕೆ ರಾಯರೇ ಸಾಕ್ಷಿ. ಈ ಪುಸ್ತಕವು ಬರೆದು ಮುಗಿಯುವ ಹಂತಕ್ಕೆ ಬಂದಿದೆಯೆಂಬುದು ಸತೀಶ ಉಪಾಧ್ಯಾಯರು ನನ್ನ ಬಳಿ ಹೇಳಿದರು. ಅವರಿಗೆ ನಾನು ಏನಾದರೂ ಕೊಡಬೇಕು ಎಂದು ನಿಶ್ಚಯಿಸಿದೆ. ಆಶ್ಚರ್ಯವೆಂದರೆ, ನನ್ನ ಇನ್ನೋರ್ವ ಮಿತ್ರರಾದ ಸುಧೀಂದ್ರ ನೇಪಾಳಯಾತ್ರೆ ಮುಗಿಸಿ ಬಂದಿದ್ದೆನೆಂದು ತಿಳಿಸಿ ನನಗೆ 25 ಶಾಲಗ್ರಾಮಗಳನ್ನು, 112 ಸುದರ್ಶನಗಳನ್ನು ಹಾಗೂ ಶಾಲಗ್ರಾಮದಲ್ಲಿ ಕೆತ್ತಿದ ಲಕ್ಷ್ಮೀನರಸಿಂಹ ವಿಗ್ರಹವನ್ನು ದಾನವಾಗಿ ನೀಡಿದರು. ಮೈ ರೋಮಾಂಚನವಾಯಿತು, ಸಂತೋಷವಾಯಿತು. ರಾಯರ ಇಚ್ಛೆ ಇದು ಎಂದು ತಿಳಿದೆ. 24 ಶಾಲಗ್ರಾಮಗಳನ್ನು ಹಾಗೂ 108 ಸುದರ್ಶನಗಳನ್ನು ರಾಯರಿಗೆ ಸರ ಮಾಡಿ ಅರ್ಪಿಸಿದೆ. ಬಾಲ್ಯದಿಂದಲೇ ರಾಯರ ಪರಮಭಕ್ತರಾದ ಶ್ರೀ ಸತೀಶ ಉಪಾಧ್ಯಾಯರಿಗೆ ಒಂದು ಲಕ್ಷ್ಮೀನರಸಿಂಹ ಶಾಲಗ್ರಾಮ ಮತ್ತು ಶಾಲಗ್ರಾಮಶಿಲಾನಿರ್ಮಿತ ಲಕ್ಷ್ಮೀನರಸಿಂಹ ವಿಗ್ರಹವನ್ನು ನೀಡಿದೆ. ಯಾಕೆಂದರೆ ರಾಯರಿಗೆ ಶಾಲಗ್ರಾಮ ಎಂದರೆ ಅತಿ ಪ್ರೀತಿ. ಅವರ ಪೂರ್ವಜನ್ಮದಲ್ಲಿ ವ್ಯಾಸರಾಯರಾಗಿದ್ದಾಗ ದೇವರ ಪೂಜೆ ಮಾಡುವ ಸಂದರ್ಭದಲ್ಲಿ ಶಾಲಗ್ರಾಮವನ್ನೇ ತಾಳವಾಗಿ ಬಳಸಿದ್ದರು. ವೃಂದಾವನ ಪ್ರವೇಶಿಸುವಾಗ 700 ಲಕ್ಷ್ಮೀನಾರಾಯಣ ಶಾಲಗ್ರಾಮಗಳನ್ನು ರಾಯರು ಧರಿಸಿದ್ದರು. ಈ ಚಿಂತನೆ ನನಗೆ ಹೊಳೆಯಿತು. ಉಡುಪಿಯಲ್ಲಿಯೂ ರಾಯರು ನೆಲೆಸಿ ಕೃಷ್ಣನನ್ನು ಪೂಜಿಸಿ, ಚಿನ್ನದ ಕೃಷ್ಣನ ವಿಗ್ರಹವನ್ನು ತಾವೇ ನಿರ್ಮಿಸಿ ಶಾಸ್ತ್ರ ರಚಿಸಿ ಏಕಮಾತ್ರ ಕೀರ್ತನೆ ರಚಿಸಿ ಹಾಡಿದ ಸ್ಥಳವೇ ನಮ್ಮ ಉಡುಪಿ ಶಾಖಾಮಠ.

ಈ ಗ್ರಂಥದ ಸಂಪಾದಕ ಸತೀಶ ಉಪಾಧ್ಯಾಯರು ತಮ್ಮ ಮಗನಿಗೋಸ್ಕರ ಪುಸ್ತಕ ಬರೆಯಲು ಹೊರಟಿದ್ದರೂ ಅದು ಎಲ್ಲರಿಗೂ ಮುಟ್ಟಬೇಕೆಂಬ ನನ್ನ ಸಲಹೆಗೆ ಮನ್ನಣೆಯಿತ್ತು ಆ ಪುಸ್ತಕವು ಶ್ರೀ ಸುಶಮೀಂದ್ರತೀರ್ಥಶ್ರೀಪಾದರ ಸೇವಾ ಪ್ರತಿಷ್ಠಾನದ ಮೂಲಕ 'ಶಾಲಗ್ರಾಮ ಸಂಪುಟ' ಎಂಬ ನಾಮಧೇಯದಲ್ಲಿ ಲೋಕಾರ್ಪಣೆಗೊಳ್ಳುತ್ತಿದೆ.

ರಾಯರ ಮನಸ್ಸೇ ಗೆದ್ದ ಮೇಲೆ ಜನರ ಮನಸ್ಸು ಗೆಲ್ಲದಿರುವುದೇ? ಖಂಡಿತ ಗೆಲ್ಲುತ್ತದೆ ಎಂಬ ವಿಶ್ವಾಸ ನಮ್ಮದು.ಸ

ಹೃತ್ಪೂರ್ವಕ ಶುಭಾಶಯಗಳೊಂದಿಗೆ,

ಜಯತೀರ್ಥ ಆಚಾರ್ಯ
ಶ್ರೀರಾಘವೇಂದ್ರ ಮಠ, ಉಡುಪಿ.

# ಪೂರ್ವೋಕ್ತಿ

"**ಶಾಲಗ್ರಾಮಸಂಪುಟ**"ಗ್ರಂಥವನ್ನು ಮಂತ್ರಾಲಯ ಶ್ರೀರಾಘವೇಂದ್ರ ಸ್ವಾಮಿಗಳ ಮಠಾಧೀಶರಾದ ಶ್ರೀಶ್ರೀ ಸುಶಮೀಂದ್ರತೀರ್ಥಶ್ರೀಪಾದರು ಹಾಗೂ ಶ್ರೀಶ್ರೀ ಸುಯತೀಂದ್ರತೀರ್ಥಶ್ರೀಪಾದಂಗಳವರ ಅನುಜ್ಞೆಯಂತೆ, ಶ್ರೀ ಧೀರೇಂದ್ರತೀರ್ಥಶ್ರೀಪಾದಂಗಳವರ ೨೨೪ನೆಯ ಆರಾಧನಾಮಹೋತ್ಸವಕಾಲದಲ್ಲಿ ಹಾವೇರಿಯ ಹೊಸರಿತ್ತಿಯಲ್ಲಿ ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರು ಅನಾವರಣಗೊಳಿಸಿದರು. ಈ ಸಂಪುಟವು ಶ್ರೀಶ್ರೀಸುಶಮೀಂದ್ರಸೇವಾ ಪ್ರತಿಷ್ಠಾನದ ಕೊಡುಗೆಯಾಗಿದೆ.

ಉಡುಪಿಯ ಶ್ರೀರಾಘವೇಂದ್ರಮಠದ ಸ್ಥಳವು ಸುಮಾರು ಐದು ಶತಮಾನಗಳ ಹಿಂದೆ ಸೋದೆಮಠದ ಶ್ರೀ ವಾದಿರಾಜಗುರುಸಾರ್ವಭೌಮರು (೧೪೮೦–೧೬೦೦) ತಮ್ಮ ಸಹಾಧ್ಯಾಯಿಗಳೂ ಆಪ್ತಮಿತ್ರರೂ ಆದ ಕುಂಭಕೋಣದಲ್ಲಿದ್ದ ಶ್ರೀ ವಿಜಯೀಂದ್ರತೀರ್ಥರು (೧೫೧೪–೧೫೯೫) [ಶ್ರೀ ರಾಘವೇಂದ್ರಸ್ವಾಮಿಗಳವರ ಪರಮಗುರುಗಳು] ಉಡುಪಿಗೆ ಬಂದಾಗ ಫಲಿಮಾರು, ಕೃಷ್ಣಾಪುರ ಮಠಗಳ ನಡುವೆ ಪ್ರತ್ಯೇಕ ಮಠವನ್ನು ಕಲ್ಪಿಸಿಕೊಟ್ಟರು.

ಶ್ರೀರಾಘವೇಂದ್ರ ಸ್ವಾಮಿಗಳು ಅನೇಕ ಬಾರಿ ಉಡುಪಿಗೆ ಆಗಮಿಸಿ, ಶ್ರೀಕೃಷ್ಣಮುಖ್ಯಪ್ರಾಣರ ದರ್ಶನ ಪಡೆದದ್ದಲ್ಲದೆ, ಇಲ್ಲಿಯೇ ಇದ್ದು ವ್ಯಾಸರಾಜರಿಂದ ರಚಿತವಾದ '**ಚಂದ್ರಿಕಾ**' ಗ್ರಂಥದ ಮಂಗಳವನ್ನು ಹತ್ತು ಬಾರಿ ಮಾಡಿ, ಅನಂತರ ಗ್ರಂಥಕ್ಕೆ '**ಪ್ರಕಾಶ**' ಎಂಬ ವ್ಯಾಖ್ಯಾನ ರಚಿಸಿದ್ದಾರೆ. ಶ್ರೀಕೃಷ್ಣನನ್ನು ನೆನೆದು '**ಇಂದು ಎನಗೆ ಗೋವಿಂದ, ನಿನ್ನಯ ಪಾದಾರ ವಿಂದವ ತೋರೋ ಮುಕುಂದನೇ**' ಎನ್ನುವ ಕೀರ್ತನೆಯನ್ನು ರಚಿಸಿದ್ದಾರೆ. ಮಧ್ವಶಾಸ್ತ್ರಕ್ಕೆ ಟಿಪ್ಪಣಿ ಸಹ ಬರೆದಿದ್ದಾರೆ. ಅವರು ಮಂತ್ರಾಲಯಕ್ಕೆ ನಿರ್ಗಮಿಸುವ ಸಮಯದಲ್ಲಿ ನಿರಂತರ ಪೂಜೆಗಾಗಿ ಉಡುಪಿ ಕಡೆಗೋಲು ಶ್ರೀಕೃಷ್ಣನ ಚಿನ್ನದ ಪ್ರತಿಮೆಯನ್ನು ತಾವೇ ನಿರ್ಮಾಣ ಮಾಡಿ ಪೂಜಿಸಿದರು. ಇಂದಿಗೂ ಮಂತ್ರಾಲಯ ಪೀಠಾಧೀಶರಿಂದ ಈ ಪ್ರತಿಮೆ ಪೂಜೆಗೊಳ್ಳುತ್ತಿದೆ.

೧೯೨೬ರಲ್ಲಿ (ಬುಧವಾರ) ಮಂತ್ರಾಲಯದ ಶ್ರೀಶ್ರೀ ಸುಶೀಲೇಂದ್ರತೀರ್ಥರು ಶ್ರೀಕೃಷ್ಣ ಮತ್ತು ರಾಘವೇಂದ್ರಗುರುಗಳ ನಂಟನ್ನು ಶಾಶ್ವತಗೊಳಿಸಲು, ಶ್ರೀರಾಘವೇಂದ್ರ ಸ್ವಾಮಿಗಳ ಮೃತ್ತಿಕಾ ವೃಂದಾವನವನ್ನು ಪ್ರತಿಷ್ಠಾಪಿಸಲು ಮುಂದಾದಾಗ, ಆಗಿನ ಪರ್ಯಾಯಪೀಠಾಧೀಶರಾದ ಅದಮಾರು ಮಠದ ಶ್ರೀವಿಬುಧಪ್ರಿಯ ಶ್ರೀಪಾದರು ತಮ್ಮ ಮಠದ ತುಳಸಿಕಟ್ಟೆಯನ್ನು ನೀಡಿ ಸಹಕರಿಸಿದರು. ಶ್ರೀ ಸೋದೆಮಠದ ಶ್ರೀವಿಶ್ವೇಂದ್ರತೀರ್ಥ ಶ್ರೀಪಾದರು, ಶ್ರೀ ಕಾಣಿಯೂರುಮಠದ ಶ್ರೀ ವಿದ್ಯಾಸಮುದ್ರ ಶ್ರೀಪಾದರು, ಶ್ರೀ ಪೇಜಾವರಮಠದ ಶ್ರೀವಿಶ್ವಮಾನ್ಯತೀರ್ಥಶ್ರೀಪಾದರು ಹಾಗೂ ಶ್ರೀ ಪುತ್ತಿಗೆಮಠದ ಶ್ರೀ ಸುಜ್ಞಾನೇಂದ್ರತೀರ್ಥಶ್ರೀಪಾದರ ಸಮ್ಮುಖದಲ್ಲಿ ಶ್ರೀರಾಘವೇಂದ್ರಗುರುಗಳ ಮೃತ್ತಿಕಾವೃಂದಾವನವನ್ನು ಪ್ರತಿಷ್ಠಾಪಿಸಲಾಯಿತು. ಈಗ ೮೦ ಸಂವತ್ಸರಗಳು ಕಳೆದ ಬಳಿಕ ಅದಮಾರುಮಠದ ಪರ್ಯಾಯ ಹಾಗೂ ಕೃಷ್ಣಾಪುರ ಮಠದ ಪರ್ಯಾಯ ಪೂರ್ವಭಾವಿ ಕಾರ್ಯಕ್ರಮಗಳ ಸಿದ್ಧತೆಗಳ ಸಡಗರದ ಮಧ್ಯೆ ಈ ಎರಡು ಮಠದ ಪೀಠಾಧಿಪತಿಗಳಿಂದಲೇ ಮೂರು ಕೋಟಿ ರೂಪಾಯಿ ವೆಚ್ಚದಲ್ಲಿ ಜೀರ್ಣೋದ್ಧಾರ ಕಾರ್ಯಕ್ರಮ ಆರಂಭಗೊಂಡುದು ಅಪೂರ್ವ ಯೋಗವೇ ಸರಿ.

ಶ್ರೀರಾಘವೇಂದ್ರ ಸ್ವಾಮಿಗಳ ಈಗಿನ ಮಠಾಧೀಶರಾದ ಶ್ರೀಶ್ರೀ ಸುಶಮೀಂದ್ರತೀರ್ಥ ಶ್ರೀಪಾದರು ಮತ್ತು ಶ್ರೀಶ್ರೀ ಸುಯತೀಂದ್ರತೀರ್ಥ ಶ್ರೀಪಾದರ ಅನುಜ್ಞೆಯಂತೆ ಅವರ ಆಪ್ತ ಕಾರ್ಯದರ್ಶಿ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯರ ಉತ್ತಮ ಮಾರ್ಗದರ್ಶನದಲ್ಲಿ ಉಡುಪಿಯ ಅಷ್ಟಮಠಾಧೀಶರು,

ಗಣ್ಯರೂ ಸೇರಿದಂತೆ, ಶ್ರೀ ಜಯತೀರ್ಥ ಆಚಾರ್ಯರ ಅದ್ಭುತ ಕಾರ್ಯದಕ್ಷತೆ ಮತ್ತು ಮುಂದಾಳುತನದಲ್ಲಿ ಮಠದ ಜೀರ್ಣೋದ್ಧಾರ ಕಾರ್ಯಕ್ರಮಗಳು ಸಂಪೂರ್ಣಗೊಂಡು ಇದರ ಉದ್ಘಾಟನಸಮಾರಂಭದ ಸಡಗರದಲ್ಲಿವೆ.

ಸಣ್ಣ ಪ್ರಾಯದ, ನಮ್ಮೊಂದಿಗೆ ನಲಿದಾಡಿದ, ಚಿಗುರುಮೀಸೆಯ ಓರ್ವ ಯುವಕ ೫೦೦ ವರ್ಷಗಳ ಮಂತ್ರಾಲಯ ಮಠದ ಇತಿಹಾಸದಲ್ಲಿಯೇ ಮಠದ ನವೀಕರಣದ ಏಕವ್ಯಕ್ತಿಯಾಗಿ ಸಾಧಿಸಿ ತೋರಿಸಿದ್ದಲ್ಲದೆ, ಮಠಕ್ಕೆ ಬೇಕಾದ ವಸ್ತುಗಳ ಪೂರೈಕೆಗಾಗಿ, ಶ್ರೀ ರಾಜಗೋಪಾಲಾಚಾರ್ಯರ ಮಾರ್ಗದರ್ಶನದಂತೆ ಸ್ಥಳ ಖರೀದಿಸಿ, ಉತ್ತಮ ಭಕ್ತರನ್ನು ಶ್ರೀಮಠಕ್ಕೆ ಸಂಪಾದಿಸಿ, ಜನಾನುರಾಗಿಯಾಗಿ ಉತ್ತಮ ಹಾಗೂ ದಕ್ಷ ಆಡಳಿತಗಾರನಾಗಿದ್ದಾನೆಂದರೆ ಅತಿಶಯೋಕ್ತಿಯಾಗಲಾರದು. ಇಷ್ಟೆಲ್ಲಕ್ಕೂ ಶ್ರೀರಾಜಗೋಪಾಲಾಚಾರ್ಯರೇ ಮಾರ್ಗದರ್ಶನ. ಓರ್ವ ಯುವಕನ ಪ್ರತಿಭೆಯನ್ನು ಗುರುತಿಸಿ, ಆತನನ್ನು ಹುರಿದುಂಬಿಸಿ ಆತನಿಂದ ರಾಘವೇಂದ್ರ ಸ್ವಾಮಿಗಳಿಗೆ ಉತ್ತಮ ಮಠವನ್ನು ಮಾಡಿಸಿ ಇಂದು ಉಡುಪಿ ಮಠವು ಮಂತ್ರಾಲಯದ ಎಲ್ಲ ಶಾಖೆಗಳಿಗೂ ಮಾರ್ಗದರ್ಶಿಯಂತೆ ಮಾಡಿದವರೇ ಆಚಾರ್ಯರು. ಸುಮಾರು ಮೂವತ್ತು ಲಕ್ಷ ರೂಪಾಯಿ ವೆಚ್ಚದಲ್ಲಿ ರಾಯರಿಗೆ ಮಾಡಿಸಿದ ರಜತ ರಥವಂತೂ ಜಯತೀರ್ಥ ಆಚಾರ್ಯರ ಸಾಧನಾಮಕುಟಕ್ಕೆ ಒಂದು ಗರಿ. ಇವರ ಮಾರ್ಗದರ್ಶನದಂತೆಯೇ ಈ ಸುಸಂದರ್ಭದಲ್ಲಿ ಈ ಶಾಲಗ್ರಾಮಸಂಪುಟವು ಆಸ್ತಿಕಬಂಧುಗಳಿಗೆ ಸದುಪಯೋಗವಾಗುವಂತೆ ಸಹಕರಿಸಿದ್ದಾರೆ. ಈ ಸಂಗ್ರಹವು ಹಲವಾರು ಗ್ರಂಥಗಳ ಅಧ್ಯಯನ ನಡೆಸಿ, ಅನಂತರ ರಚಿಸಿದ ಗ್ರಂಥ.

ಶಾಲಗ್ರಾಮದ ಬಗ್ಗೆ ಕರ್ನಾಟಕರಾಜ್ಯದಲ್ಲಿಯ ಕಲ್ಪತರು ರಿಸರ್ಚ್ ಎಕಾಡೆಮಿಯ ಪ್ರೊ। ಎಸ್. ಕೆ. ರಾಮಚಂದ್ರ ರಾವ್ ಬರೆದಂತಹ 'ಶಾಲಗ್ರಾಮಕೋಶ ಭಾಗ ೧ ಮತ್ತು ೨'ರಲ್ಲಿ ತಿಳಿಸಿರುವ ಮಾಹಿತಿ ಪ್ರಾಯಶಃ ಇಡೀ ದೇಶದಲ್ಲಿಯೇ ಯಾರೂ ಹೊರತರಲಿಲ್ಲ ಎಂದರೆ ಅತಿಶಯೋಕ್ತಿ ಆಗಲಾರದು. ಅವರ ಸಾಧನೆ ನಿಜವಾಗಿಯೂ ಅತ್ಯದ್ಭುತ ಹಾಗೂ ಅಸಾಧಾರಣ. ಈ ಗ್ರಂಥವು ಕೇವಲ ಧಾರ್ಮಿಕ ದೃಷ್ಟಿಯಿಂದ ಧಾರ್ಮಿಕಪ್ರಚಾರಕ್ಕಾಗಿಯೇ ಪ್ರಕಟಿಸಲ್ಪಟ್ಟಿದೆ ವಿನಾ ಲಾಭದ ದೃಷ್ಟಿಯಿಂದ ಇದನ್ನು ಮುದ್ರಿತಗೊಳಿಸಿರುವುದಲ್ಲ..

ಶಾಲಗ್ರಾಮಶಿಲೆಯು ಮಹಾವಿಷ್ಣುದೇವರ ಪ್ರತೀಕವಾದ, ರಾಷ್ಟ್ರದ ಪ್ರತಿಯೊಬ್ಬ ಹಿಂದೂಬಾಂಧವರಿಂದ ಪೂಜಿಸಲ್ಪಡುವ ಪ್ರಾಕೃತಿಕವಾದ ವಿಶಿಷ್ಟ ಶಿಲೆ. ಇದು ನಮ್ಮ ಹಿಂದೂರಾಷ್ಟ್ರದ ಧಾರ್ಮಿಕಜೀವನದಲ್ಲಿ ಮಹತ್ತರ ಪಾತ್ರ ವಹಿಸಿದೆ. ಇದು ನೇಪಾಳರಾಷ್ಟ್ರದ ಕಾಲೀಗಂಡಕೀನದಿಯಲ್ಲಿ ದೊರಕುತ್ತಿದ್ದು, ಪುರಾಣಗಳಲ್ಲಿ, ಶಾಸ್ತ್ರಗಳಲ್ಲಿ ಇದರ ಲಕ್ಷಣ, ಗುರುತಿಸುವಿಕೆ, ಪರೀಕ್ಷಣಾದಿಗಳ ಬಗ್ಗೆ ತಿಳಿಸಿರುತ್ತಾರೆ. ಇವೆಲ್ಲಾ ದೇವನಾಗರೀಲಿಪಿಯಲ್ಲಿದ್ದು, ಸಂಸ್ಕೃತ ಗೊತ್ತಿಲ್ಲದವರಿಗೆ ಅರ್ಥೈಸುವುದು ಕ್ಲಿಷ್ಟಕರ.

ಉಡುಪಿ ರಾಘವೇಂದ್ರಮಠದ ಉದ್ಘಾಟನೆಯ ಈ ಸುಸಂದರ್ಭದಲ್ಲಿ, ಮಂತ್ರಾಲಯದ ಶ್ರೀಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞೆಯ ಮೇರೆಗೆ, ಬೇರೆಬೇರೆ ಗ್ರಂಥಗಳನ್ನು ಕಲೆ ಹಾಕಿ, ಸಂಗ್ರಹಿಸಿ ಅದನ್ನು ಶ್ರೀಮಠಕ್ಕೆ ಅರ್ಪಿಸುತ್ತಿದ್ದೇನೆ. ಶಾಲಗ್ರಾಮಶಿಲೆಗಳ ಬಗ್ಗೆ ಕೆಲವರಲ್ಲಿ ತಪ್ಪು ಅಭಿಪ್ರಾಯಗಳಿದ್ದು, ಇನ್ನು ಹಲವರು ಶಿಲೆಗಳನ್ನು ನೋಡದೇ ಇರುವರು. ಇನ್ನು ಹಲವರು ಅದರ ಮಹತ್ತ್ವಗಳನ್ನು ತಿಳಿಯದೇ ಯಾರೋ ಅಲ್ಪಸ್ವಲ್ಪ ಗೊತ್ತಿದ್ದವರ ಮಾತು ಕೇಳಿ ಬಾವಿಗೋ, ನದಿಗೋ, ಸಮುದ್ರಕ್ಕೋ ಎಸೆಯುತ್ತಾರೆ. ಅಥವಾ, ದೇವಸ್ಥಾನಗಳಿಗೆ ಒಪ್ಪಿಸುತ್ತಾರೆ. ಇತರ ಹಲವಾರು ಜನರಿಗೆ ತಮ್ಮ ಪೂರ್ವಜರಿಂದ ದೊರೆತಿದ್ದ ಅತ್ಯಮೂಲ್ಯ ಶಾಲಗ್ರಾಮಗಳನ್ನೂ/ಮೂರ್ತಿಗಳನ್ನೂ ಹತ್ತಿರದ ದೇವಸ್ಥಾನಗಳಿಗೆ ಒಪ್ಪಿಸಿ ನಗರಗಳಲ್ಲಿ ವಾಸಿಸಲು ಇಚ್ಛಿಸು ತ್ತಾರೆ. ಹಾಗೆಯೇ, ಒಪ್ಪಿಸಿರುವ ಶಾಲಗ್ರಾಮಗಳೂ/ಮೂರ್ತಿಗಳೂ

ದೇವಸ್ಥಾನದ ಗರ್ಭಗುಡಿಯ ಅಟ್ಟವನ್ನು ಸೇರುವ ಪ್ರಮೇಯವೂ ಇದೆ. ಇನ್ನು ಹಲವಾರು ಮಂದಿ ತಮಗೆ ಗೊತ್ತಿದ್ದುದನ್ನು ಇತರರಿಗೆ ತಿಳಿಸಿದಲ್ಲಿ, ತಮಗೇನೋ ನಷ್ಟವಾಗಬಹುದು/ಕೇಳಿಸಿಕೊಂಡವನಿಗೆ ಒಳಿತಾಗ ಬಹುದು ಎಂಬ ಭ್ರಮೆಯಿಂದ ಅದರ ಮಾಹಿತಿಯನ್ನು ಇನ್ನೊಬ್ಬರಿಗೆ ತಿಳಿಸದೆ ಗೌಪ್ಯವಾಗಿಟ್ಟು, ಈ ಅಪೂರ್ವ ಸಂಪತ್ತಿನ ಬಗ್ಗೆ ಭಿನ್ನಾಭಿಪ್ರಾಯ/ತಪ್ಪು ತಿಳಿವಳಿಕೆಯಿಂದಿದ್ದು, ಕಾಲಕ್ರಮದಲ್ಲಿ ಅದರ ಬಗ್ಗೆ ನಿರಾಸಕ್ತಿ ತಾಳಬಹುದು. ಪುರಾತನಕಾಲದಿಂದ/ತಲೆಮಾರಿ ನಿಂದ ಈ ಸಂಪತ್ತನ್ನು ಕಳೆದುಕೊಂಡು ಅನಂತರ ಅದಕ್ಕಾಗಿ ಪಶ್ಚಾತ್ತಾಪಪಟ್ಟು, ಅನಂತರ ಲಕ್ಷಗಟ್ಟಲೆ ಹಣ ತೆತ್ತು, ನಕಲಿ ಮೂರ್ತಿಗಳನ್ನು ಕೊಂಡುಕೊಂಡು ಕೊನೆಗೆ ಪರಿತಪಿಸುತ್ತಾರೆ. ಶಾಲಗ್ರಾಮ ಶಿಲೆಗಳ ಸಾಮಾನ್ಯ ಲಕ್ಷಣಗಳು, ಪರಿಜ್ಞಾನವಿಲ್ಲದೇ ಅಮೂಲ್ಯ ಶಾಲಗ್ರಾಮಗಳನ್ನು ಕಳಕೊಳ್ಳುವ ಪ್ರಸಂಗ ಬಂದೊದಗಬಹುದು. ಆದುದರಿಂದ, ಶಾಲಗ್ರಾಮವನ್ನು ಪೂಜಿಸುವವರೂ ಹಾಗೂ ಪೂಜಿಸದವರೂ ಇದರ ಬಗ್ಗೆ ಮಾಹಿತಿ ಪಡೆದುಕೊಳ್ಳುವುದು ಸೂಕ್ತ. ಇನ್ನು ಹಲವರಿಗೆ ಅವರು ಪೂಜಿಸುವ ಮೂರ್ತಿಯ ಗುಣಲಕ್ಷಣಗಳು ತಿಳಿಯದೆ, ಅವರು ಮಾಡುವ ಪೂಜೆ ಆ ಮೂರ್ತಿಗೆ ಸಲ್ಲುವುದೋ ಇಲ್ಲವೋ ಎಂಬ ಸಂಶಯ ಸಹ ಕಾಡುತ್ತಿರುತ್ತದೆ. ಇನ್ನು ಕೆಲವರು ಒಟ್ಟಾರೆ ಪೂಜೆ ಮಾಡಿದರಾಯಿತು; ತಲೆಮಾರಿನಿಂದ ಬಂದದ್ದು, ಅದಕ್ಕೆ ಹರಕೆ ಸಂದಾಯ ಮಾಡುವುದು ಎಂದು ತಪ್ಪಾಗಿ ತಿಳಿದು ಅನಂತರ ಕಷ್ಟಕ್ಕೊಳಗಾದಾಗ ಜ್ಯೋತಿಷಚಿಂತನೆ(ಪ್ರಶ್ನೆ)ಗೆ ಮರೆಹೋಗಿ ಸಾವಿರಗಟ್ಟಲೆ ಹಣ ಹಾಳು ಮಾಡುತ್ತಾರೆ. ಕೇವಲ ನೀರು ಹಾಕಿ, ಮುಟ್ಟಿ, ತುಳಸೀದಳಗಳನ್ನಿಟ್ಟು ಅದರ ನೀರನ್ನು ಪ್ರಾಶನ ಮಾಡುವುದರಿಂದ ವಿವಿಧ ರೀತಿಯ ಫಲವನ್ನು ಪಡೆಯುವ ಬಗ್ಗೆ ಮಾಹಿತಿ ಇಲ್ಲದವರು ಇದರ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕು. ತಪ್ಪು ತಿಳಿವಳಿಕೆಯನ್ನು ಮನಸ್ಸಿನಿಂದ ಹೋಗಲಾಡಿಸಿ, ಮೂಢನಂಬಿಕೆಯಿಂದ ಹೊರಬರಬೇಕು.

೨೦೦೬ರಲ್ಲಿ ಗಯಾ, ಕಾಶಿ, ಅಲಹಾಬಾದ್, ಅಯೋಧ್ಯಾ, ಘೋರಖಪುರ, ಸುನಾಲಿ ಮೂಲಕ ನೇಪಾಳ ದರ್ಶನ ಮಾಡಿದ ನಾನು ಕುಟುಂಬಸಮೇತ ನೇಪಾಳವೆಲ್ಲಾ ಸುತ್ತಾಡಿ ಶಾಲಗ್ರಾಮದ ಬಗ್ಗೆ ಹುಡುಕಾಟ ನಡೆಸಿದ್ದೇನೆ. ದುರದೃಷ್ಟವಶಾತ್ ಶಾಲಗ್ರಾಮಗಳ ದರ್ಶನವಾದರೂ ೨೬ ದಿನಗಳ ಹರತಾಳದಿಂದಾಗಿ ಶಾಲಗ್ರಾಮಕ್ಷೇತ್ರ-ದಾಮೋದರ ಕುಂಡ, ಜೋಮ್ಸಮ್‌ಗೆ ಹೋಗಲು ಸಾಧ್ಯವಾಗಲಿಲ್ಲ. ನಿಷೇಧಾಜ್ಞೆ ಇರುವಾಗಲೆಲ್ಲಾ ನನ್ನ ಮಗು ಮತ್ತು ಹೆಂಡತಿಯೊಂದಿಗೆ ನೇಪಾಳದ ಕಾಠ್ಮಂಡೋ ದರ್ಬಾರ್ ಚೌಕ, ಭಕ್ತಪುರ, ಪಠಾನ್, ಬುಡಾನೀಲಕನಾಥ, ನಾಗರಕೋಟ್, ನಾರಾಯಣಹಿತಿ ಅರಮನೆ, ಪಶುಪತಿ ನಾಥ, ಬುದ್ಧನಾಥ, ಸ್ವಯಂಭೂನಾಥವೇ ಮೊದಲಾದ ಸ್ಥಳಗಳಿಗೆ ಭೇಟಿ ನೀಡಿದ್ದೇನೆ. ಆದರೆ ಮಗು ದೊಂದು ಬಾರಿ ಶಾಲಗ್ರಾಮಕ್ಷೇತ್ರದರ್ಶನ ಮಾಡಬೇಕೆಂಬ ಆಸೆ ಈ ಲೇಖಕನದಲ್ಲಿದೆ.

ಪಾಶ್ಚಾತ್ಯರು ನಮ್ಮ ಹಿಂದೂಗಳಿಗಿಂತಲೂ ಹೆಚ್ಚಾಗಿ ಈ ಶಿಲೆಯ ಬಗ್ಗೆ ಮಾಹಿತಿ ಹೊಂದಿದ್ದು, ಅದರ ಬಗ್ಗೆ ಅಧ್ಯಯನ ಮಾಡಿ, ಅಪಾರ ಸಂಖ್ಯೆಯಲ್ಲಿ ಈ ಕ್ಷೇತ್ರವನ್ನು ಸಂದರ್ಶಿಸಿ ತಮ್ಮ ಭಂಡಾರದಲ್ಲಿ ಅತ್ಯಮೂಲ್ಯ ಸಂಗ್ರಹಗಳನ್ನು ಮಾಡಿರುತ್ತಾರೆ. ಹರೇ ರಾಮ ಹರೇ ಕೃಷ್ಣ ಪಂಥಕ್ಕೆ ಸೇರಿದ ಇವರು ಇಂಟರ್ ನೆಟ್ ಮೂಲಕ ತಮ್ಮ ಪ್ರವಾಸಾದಿ ಕಥೆಗಳನ್ನು ಹೇಳಿಕೊಂಡು ಹೊರಗಿನ ಪ್ರಪಂಚಕ್ಕೆ ಸಚಿತ್ರವಾದ ಮಾರ್ಗ ದರ್ಶನ ನೀಡುತ್ತಿದ್ದಾರೆ. ಇದು ಪ್ರತಿಯೊಬ್ಬ ಹಿಂದುವೂ, ವಿಶೇಷವಾಗಿ ಮಠಸಂಸ್ಥಾನದವರು ಮುಂದಿನ ಪೀಳಿಗೆಗೆ ಮಾಹಿತಿಯನ್ನಿತ್ತು, ಅವರನ್ನು ಈ ದೇವರ ವಿಶೇಷ ಭಕ್ತಿ ಹಾಗೂ ಅನುಗ್ರಹಕ್ಕೆ ತಂದಾಗ ಲೋಕಕಲ್ಯಾಣವಾಗುವುದರಲ್ಲಿ ಸಂಶಯವಿಲ್ಲ. ಎಲ್ಲರೂ ಆಸ್ತಿಕರಾದರೆಂದರೆ ಯಾವ ಕಾಯಿದೆ ಕಾನೂನುಗಳ ಆವಶ್ಯಕತೆ ಬರುವುದಿಲ್ಲ. ಇದರ ಬಗ್ಗೆ ಇನ್ನೂ ಹೆಚ್ಚುಹೆಚ್ಚು ಅಧ್ಯಯನಗಳನ್ನು ನಡೆಸಿ,

ಜನರಿಗೆ ತಿಳಿಯಪಡಿಸ ಬೇಕೆಂಬುದೇ ಈ ಲೇಖಕನ ಆಸೆ. ಇದರ ಬಗ್ಗೆ ಮಾಹಿತಿಯನ್ನು ಪರಸ್ಪರ ಹಂಚಿಕೊಂಡು ನಾಸ್ತಿಕರನ್ನೂ ಆಸ್ತಿಕರನ್ನಾಗಿಸಬೇಕು.

ಈ ಸಂಪುಟದಲ್ಲಿ ಬರುವ ಆಯಾ ಅಧ್ಯಾಯಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಗ್ರಂಥದ ಕೊನೆಯಲ್ಲಿ ಅಧ್ಯಾಯಗಳ ಕ್ರಮಸಂಖ್ಯೆಗಳೊಂದಿಗೆ ಪ್ರಕಟಿಸಲಾಗಿದೆ. ಓದುಗರು ಸಂದರ್ಭಾನುಸಾರ ನೋಡಿಕೊಳ್ಳ ಬಹುದು.

ಕೇವಲ ಜ್ಞಾನಾರ್ಜನೆಗಾಗಿ, ಧರ್ಮಪ್ರಚಾರಕ್ಕಾಗಿ ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ (ರಿ.), ನಂಜನ ಗೂಡು ಅವರು ಈ ಗ್ರಂಥವನ್ನು ಹೊರತಂದಿರುತ್ತಾರೆ. ಇನ್ನು ಮುಂದೆ ಇದರ ಸಂಪೂರ್ಣ ಹಕ್ಕುಗಳು ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನ (ರಿ.), ನಂಜನಗೂಡು ಇವರ ಸ್ವಾಮ್ಯಕ್ಕೆ ಒಳಪಟ್ಟಿರುತ್ತದೆ. ಈ ಶಾಲಗ್ರಾಮಸಂಪುಟದಲ್ಲಿರುವ ಶಾಲಗ್ರಾಮ ಮತ್ತು ಇತರ ಮೂರ್ತಿಲಕ್ಷಣಗಳು ಸಂಪಾದಕನು ಪ್ರಯತ್ನಪಟ್ಟು ಸಂಗ್ರಹಿಸಿದ ಚಿತ್ರಗಳು. ಆಸ್ತಿಕಬಾಂಧವರಲ್ಲಿ ಹೆಚ್ಚಿನ ಮಾಹಿತಿ ಮತ್ತು ಸಂಗ್ರಹಗಳಿದ್ದಲ್ಲಿ ಹಾಗೂ ಮುಂದೆ ಸಹಕಾರ ದೊರೆತಲ್ಲಿ ಸಂಪುಟದ ಎರಡನೆಯ ಭಾಗವನ್ನು ಹೊರತರುವಲ್ಲಿ ಚಿಂತಿಸ ಬಹುದು.

**ಶಾಲಗ್ರಾಮಸಂಪುಟ** ಹೊರಬರಲು ಮಾರ್ಗದರ್ಶನವಿತ್ತ ಮಂತ್ರಾಲಯ ಶ್ರೀರಾಘವೇಂದ್ರ ಸ್ವಾಮಿಗಳ ಮಠಾಧೀಶರಾದ ಶ್ರೀಶ್ರೀ ಸುಶಮಿಂದ್ರತೀರ್ಥ ಶ್ರೀಪಾದರು ಮತ್ತು ಶ್ರೀಶ್ರೀ ಸುಯತೀಂದ್ರತೀರ್ಥ ಶ್ರೀಪಾದರಿಗೆ ಭಕ್ತಿಪೂರ್ವಕ ಪ್ರಣಾಮಗಳು. ಈ ಸಂಪುಟ ಹೊರಬರಲು ಬೆಂಬಲಿಸಿದ ರಾಜಾ ಎಸ್. ರಾಜ ಗೋಪಾಲಾಚಾರ್ಯ, ಆಪ್ತಕಾರ್ಯದರ್ಶಿಗಳು, ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ ಹಾಗೂ ಎಸ್. ಸುಯಮೀಂದ್ರಾಚಾರ್ಯ, ಸಹಾಯಕ ಆಪ್ತಕಾರ್ಯದರ್ಶಿಗಳು, ಶ್ರೀರಾಘವೇಂದ್ರಸ್ವಾಮಿ ಗಳವರ ಮಠ, ಮಂತ್ರಾಲಯ ಇವರುಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಈ ಗ್ರಂಥವನ್ನು ನನ್ನ ಗುರುಗಳಾದ ಸಂಸ್ಕೃತ ವಿದ್ವಾನ್ ದಿ। ಶ್ರೀ ಪಾಡಿಗಾರು ಕೇಶವ ಆಚಾರ್ಯರ ಸುಪುತ್ರ ವಿದ್ವಾನ್ (ಸಂಸ್ಕೃತ ಮತ್ತು ಕನ್ನಡ) ಶ್ರೀ ಮುರಳೀಧರ ಆಚಾರ್ಯರ ಮಾರ್ಗದರ್ಶನದಂತೆ ಬರೆದಿದ್ದೇನೆ. ಉಡುಪಿಯ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರಾದ ಡಾ। ಸುರೇಶ ಆಚಾರ್ಯರು ಮಾರ್ಗದರ್ಶನವನ್ನಿತ್ತು, ಕರಡುಪ್ರತಿಯನ್ನು ತಿದ್ದಿ ಸಹಕರಿಸಿದ್ದಾರೆ. ಹಾಗೂ ಇನ್ನೋರ್ವ ಗುರುಗಳಾದ ದಿ। ಬಿ. ಕೃಷ್ಣಯ್ಯ ಅವರ ಸುಪುತ್ರ ಶ್ರೀ ಬಿ. ಕೆ. ನಾರಾಯಣ ಅವರು ಕರಡುಪ್ರತಿಯನ್ನು ತಿದ್ದಿ ಸಹಕರಿಸಿ ದ್ದಾರೆ. ಬಹುಶಃ ನಾನು ೨೬ ಸಂವತ್ಸರಗಳ ಕಾಲ ಶ್ರೀ ರಾಘವೇಂದ್ರಸ್ವಾಮಿಗಳ ಸೇವೆ ಮಾಡಿದ್ದರಿಂದ ನನಗೆ ಈ ಶಾಲಗ್ರಾಮ ಸಂಗ್ರಹವನ್ನು ಮಾಡುವ ಅವಕಾಶ ಒದಗಿ ಬಂದಿದ್ದು ಶ್ರೀಗುರುರಾಯರ ಪಾದಕಮಲ ಗಳಿಗೆ ಅರ್ಪಣೆ ಮಾಡುವ ಸುಯೋಗವನ್ನು ನನ್ನ ಗುರುಗಳೂ ಸ್ನೇಹಿತರೂ ಆದ ಪೂಜ್ಯ ಶ್ರೀ ಜಯತೀರ್ಥ ಆಚಾರ್ಯರು ಒದಗಿಸಿಕೊಟ್ಟಿದ್ದಾರೆ. ಇವರಿಗೆ ನಾನು ಚಿರಋಣಿಯಾಗಿದ್ದೇನೆ.

ಧರ್ಮಪ್ರಚಾರಕ್ಕಾಗಿ ಈ ಗ್ರಂಥವನ್ನು ಹೊರತರುವಲ್ಲಿ ಸಹಕರಿಸಿದ ಊರ-ಪರವೂರ, ರಾಜ್ಯ-ಅಂತಾರಾಜ್ಯ ದೇಶ-ವಿದೇಶಗಳ ದೇವಸ್ಥಾನ, ವಸ್ತುಸಂಗ್ರಹಾಲಯ, ವೆಬ್‌ಸೈಟುಗಳು, ಪುರವಣಿಗಳು, ಗ್ರಂಥಗಳೇ ಮೊದಲಾದವುಗಳನ್ನು ಒದಗಿಸಿದಂತಹ ಲೇಖಕರು, ಗ್ರಂಥಕಾರರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ತಂದೆಯವರಾದ ದಿ। ಪಡುಪೇಟೆ ವೆಂಕಟಕೃಷ್ಣ ಉಪಾಧ್ಯಾಯರಿಗೆ ಹಾಗೂ ಮಾತೃಶ್ರೀಗಳಾದ ಶ್ರೀಮತಿ ಜಲಜಾಕ್ಷಿ ಅವರಿಗೆ ಗುರು ರಾಘವೇಂದ್ರಸ್ವಾಮಿಗಳವರ ಸಂಪೂರ್ಣ ಕೃಪಾಕಟಾಕ್ಷವಿರಲಿ. ಕಳೆದ

ಎರಡು ವರ್ಷಗಳಿಂದ ನನ್ನ ಈ ಸಂಪುಟದ ರಚನೆಗೆ ಸಹಕರಿಸಿದ ನನ್ನ ಧರ್ಮಪತ್ನಿಯಾದ ಶ್ರೀಮತಿ ಚೇತನಾ ಮತ್ತು ಸುಪುತ್ರ ಚಿ। ಅರ್ಜುನ ಉಪಾಧ್ಯಾಯನಿಗೆ ರಾಘವೇಂದ್ರ ಸ್ವಾಮಿಗಳ ಅನುಗ್ರಹ ಸದಾ ಇರಲಿ. ಈ ಸಂಪುಟಕ್ಕೆ ಮೂಲ ಕಾರಣಕರ್ತರಾದಂತಹ (ಬೀಜಪ್ರಸಾರಕರು) ಶ್ರೀಮಠದ ಶ್ರೀ ಮೋಹನ ದೇಶಪಾಂಡೆ ಹಾಗೂ ಶ್ರೀ ಆನಂದತೀರ್ಥ ಆಚಾರ್ಯರಿಗೂ ನಾನು ಕೃತಜ್ಞನಾಗಿರುತ್ತೇನೆ. ಈ ಸಂಪುಟಕ್ಕೆ ಸಹಕಾರವಿತ್ತ ಶ್ರೀಯುತರಾದ ಅನಿಲ್ ಆಚಾರ್ಯ, ಜಿ. ವರದರಾಜ ಭಟ್, ಸದಾನಂದ, ಕನರಾಡಿ ಹರಿದಾಸ ಭಟ್, ಗಿರೀಶ್, ಶಂಕರನಾರಾಯಣ ಐತಾಳ, ಶ್ರೀಕೃಷ್ಣ ಭಟ್ ಮುಂಬೈ –ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದು ಅವರಿಗೂ ಶ್ರೀರಾಘವೇಂದ್ರಸ್ವಾಮಿಗಳು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ಸಂಪುಟದ ಅಕ್ಷರಸಂಯೋಜಕರಾದ ಶ್ರೀಮತಿ ಸ್ವರ್ಣಲತಾ ಮತ್ತು ಡಾ। ಪದ್ಮನಾಭ ಕೇಕುಣ್ಣಾಯ ದಂಪತಿಗಳಿಗೂ, ಮುದ್ರಣ ಮಾಡಿಕೊಟ್ಟ ಮೆ। ಭಾರತ್ ಪ್ರೆಸ್‌ನ ಶ್ರೀ ಗಣೇಶ ಪೈ ಅವರಿಗೂ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಸಕಲ ಭಾಗ್ಯಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ.

ಉಡುಪಿ

**– ಪಡುಪೇಟೆ ಸತೀಶಕುಮಾರ**
(ದಿ। ವೆಂಕಟಕೃಷ್ಣ ಉಪಾಧ್ಯಾಯರ ಮಗ)

ಶ್ರೀ ರಾಘವೇಂದ್ರ ಸ್ವಾಮಿಗಳವರ ಉಡುಪಿ ಮಠದ ನವೀಕರಣದ ಕಾಮಗಾರಿಯನ್ನು ವೀಕ್ಷಿಸುತ್ತಿರುವ
ಪರಮ ಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ಸುಶಮೀಂದ್ರತೀರ್ಥ ಸ್ವಾಮೀಜಿಗಳವರು









ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಉಡುಪಿ – ನವೀಕರಣದ ಆನಂತರ



ಶ್ರೀ ರಾಘವೇಂದ್ರ ಸ್ವಾಮಿಗಳವರ ಉಡುಪಿ ಮಠದ ನೂತನ ಬೆಳ್ಳಿ ರಥದ ಸಮರ್ಪಣೆಯನ್ನು
ಪರ್ಯಾಯ ಶ್ರೀ ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದಂಗಳವರ ಮೂಲಕ ನೆರವೇರಿಸಲಾಯಿತು.

ಹಾವೇರಿಯ ಹೊಸರಿತ್ತಿಯಲ್ಲಿ ಶಾಲಗ್ರಾಮ ಸಂಪುಟವನ್ನು ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು; ಶ್ರೀ ಧೀರೇಂದ್ರ ಸ್ವಾಮಿಗಳವರ ೨೨೪ನೇ ಆರಾಧನಾ ಮಹೋತ್ಸವ ಕಾಲದಲ್ಲಿ ಬಿಡುಗಡೆ ಮಾಡಿದರು.







ಮಂತ್ರಾಲಯ ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠದ ಶ್ರೀ ಶ್ರೀ ಸುಯತೀಂದ್ರ ಶ್ರೀಪಾದಂಗಳವರು ಸಂಪಾದಕ ಪಡುಪೇಟೆ ಶ್ರೀ ಸತೀಶ ಕುಮಾರರನ್ನು ಫಲಮಂತ್ರಾಕ್ಷತೆಯನ್ನು ನೀಡಿ ಹರಸಿದರು.

# ವಿಷಯಾನುಕ್ರಮಣಿಕೆ



॥ ಶುಭಮಸ್ತು ॥

॥ ಶ್ರೀಮೂಲರಾಮೋ ವಿಜಯತೇ ॥

॥ ಶ್ರೀಆದಿಜನಾರ್ದನಾಯ ನಮಃ ॥

॥ ಶ್ರೀಗಣೇಶಾಯ ನಮಃ ॥

॥ ಶ್ರೀಗುರುಭ್ಯೋ ನಮಃ ॥

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥
॥ ಶ್ರೀರಾಘವೇಂದ್ರಪೂಜ್ಯ ಗುರುಭ್ಯೋ ನಮಃ ॥

# ಶಾಲಗ್ರಾಮಸಂಪುಟ

# I

## 1. ಶಾಲಗ್ರಾಮ

ಶಾಲಗ್ರಾಮ ಅಥವಾ ಸಾಲಿಗ್ರಾಮ ಪ್ರಕೃತಿದತ್ತವಾದ ವಿಶಿಷ್ಟ ಜಾತಿಯ ಒಂದು ಶಿಲೆ. ಇದು ಪ್ರಕೃತಿದತ್ತ ವಾಗಿರುವುದರಿಂದಲೇ ಮಾನವನಿರ್ಮಿತ ವಿಗ್ರಹಕ್ಕಿಂತಲೂ ಶ್ರೇಷ್ಠವಾಗಿದೆ. ದೇವಾಲಯಗಳಲ್ಲಿ ಮೂಲ ಮೂರ್ತಿಯ ಜೊತೆಗೆ ಉತ್ಸವಮೂರ್ತಿಯಲ್ಲದೆ ಅನೇಕ ಶಾಲಗ್ರಾಮಗಳನ್ನೂ ಪೂಜಿಸುವುದು ಅನಾದಿಕಾಲದಿಂದ ಬಂದ ಆಗಮರೀತಿ, ಪದ್ಧತಿ ಎಂದ ಮೇಲೆ ಶಾಲಗ್ರಾಮಪೂಜೆ ಅನಾದಿ ಎಂದಾಗುತ್ತದೆ. ಇದಕ್ಕೆ ಇತಿಹಾಸ, ಪುರಾಣಗಳೇ ಪ್ರಮಾಣ.

ಮಹಾವಿಷ್ಣುವು ತ್ರಿಮತಸ್ಥರಿಗೂ ಪೂಜ್ಯನಾಗಿರುವುದರಿಂದ ವಿಷ್ಣುವಿನ ಪ್ರತೀಕವಾದ ಶಾಲಗ್ರಾಮವನ್ನು ಎಲ್ಲರೂ ಪೂಜಿಸುತ್ತಾರೆ. ದೇವಸ್ಥಾನಗಳಲ್ಲಿ, ಮನೆಗಳಲ್ಲಿ ಹಾಗೂ ಸಂನ್ಯಾಸಿಗಳಿಂದ ಪೂಜಿಸಲ್ಪಡುವ ಈ ಶಾಲಗ್ರಾಮವನ್ನು ಪುರಾಣಗಳು ಅನೇಕ ಕುತೂಹಲಕರ ರೀತಿಗಳಲ್ಲಿ ವರ್ಣಿಸಿವೆ.

ನೋಡಲು ಕಪ್ಪಾದ ಕಲ್ಲು. ಅದರಲ್ಲೊಂದು ತೂತು. ಈ ತೂತಿನ ಒಳಗಡೆ ಅಥವಾ ಹೊರಗಡೆ ಚಕ್ರಗಳ ಗುರುತು– ಶಂಖ, ಚಕ್ರ, ಗದಾ, ಪದ್ಮ ಇತ್ಯಾದಿ ಲಾಂಛನಗಳಿಂದ ಕೂಡಿದ್ದು ವಿಷ್ಣುವಿನ ಪ್ರತೀಕ ಎಂದು ಗುರುತಿಸಲ್ಪಡುತ್ತದೆ. ಕೆಲವೊಂದು ಪಾರದರ್ಶಕವಾಗಿದ್ದು, ಇನ್ನು ಕೆಲವು ಮಿರುಗುತ್ತವೆ. ಅಲ್ಲಲ್ಲಿ ಹಳದಿ ಗೆರೆಯನ್ನು ಸಹ ಹೊಂದಿರುತ್ತವೆ. ಕೇವಲ ತುಳಸೀದಳವನ್ನು ಇಟ್ಟು ಪೂಜಿಸಿದರೆ ಸಕಲ ಅಭೀಷ್ಟಗಳನ್ನು ಈಡೇರಿಸುವಂತಹ ಈ ಶಾಲಗ್ರಾಮವು ಮನುಷ್ಯನ ಜನ್ಮಜನ್ಮಾಂತರದ ದುಷ್ಕೃತಗಳಿಂದ ಅವನನ್ನು ಮುಕ್ತ ಗೊಳಿಸಿ ಮೋಕ್ಷವನ್ನು ಕರುಣಿಸಬಲ್ಲದು ಎಂಬುದು ಪೂಜಿಸುವವರ ಆತ್ಮವಿಶ್ವಾಸ. ಈ ಕಾರಣ ಇದನ್ನು ಗೃಹಸ್ಥರು ತಮ್ಮ ಮನೆಯಲ್ಲಿಟ್ಟು ಶ್ರದ್ಧೆಯಿಂದ ಪೂಜಿಸುತ್ತಾರೆ. ಗೃಹಸ್ಥರಿಗೆ ಮಾತ್ರವಲ್ಲ ಇದು ಸಂನ್ಯಾಸಿ ಗಳಿಗೂ ಪರಮ ಪೂಜ್ಯವಾಗಿದೆ. ಗೃಹಪ್ರವೇಶ, ಮದುವೆ ಸಮಾರಂಭ ದೇವರ್ಷಿಪಿತೃಯಜ್ಞಗಳಲ್ಲಿಯೂ ಇದಕ್ಕೆ ಸ್ಥಾನ–ಮಾನವಿದೆ.

ಉಡುಪಿಯ ಕಡೆಗೋಲು ಕೃಷ್ಣ, ಪಂಡರಾಪುರದ ಶ್ರೀವಿಟ್ಠಲ ಹಾಗೂ ಬದರಿಕಾಶ್ರಮದ ಶ್ರೀಬದರೀ ನಾಥನ ವಿಗ್ರಹ ಇವು ಶಾಲಗ್ರಾಮಶಿಲೆಯಿಂದ ಕೆತ್ತಲ್ಪಟ್ಟಿವೆ ಎಂದು ಹಿರಿಯರು ಹೇಳುತ್ತಾರೆ. ಉಡುಪಿಯ ಚಕ್ರಾಂಕಿತವಾದ ಶಾಲಗ್ರಾಮ ಶಿಲಾನಿರ್ಮಿತವಾದ ಕಡೆಗೋಲು ಶ್ರೀಕೃಷ್ಣನನ್ನು ರುಗ್ಮಿಣೀ ದೇವಿಯು ಸ್ವಯಂ ಪೂಜಿಸುತ್ತಿದ್ದು, ಅದು ಶ್ರೀಮನ್ಮಧ್ವಾಚಾರ್ಯರಿಗೆ ಉಡುಪಿಯ ಬಳಿ ಒಡಭಾಂಡೇಶ್ವರದಲ್ಲಿ ದೊಡ್ಡ ಗೋಪೀಚಂದನದಲ್ಲಿ ದೊರೆತು, ಪ್ರತಿಷ್ಠಾಪಿಸಿದರೆಂಬ ಐತಿಹ್ಯವಿದೆ.

ಬದರಿಕಾಶ್ರಮದ ಶ್ರೀಮನ್ನಾರಾಯಣನ ಮೂರ್ತಿಯನ್ನು ಹಿಂದೆ ಬೌದ್ಧರು ಕಿತ್ತು, ದೇವಾಲಯದ ಮುಂದಿರುವ ಅಲಕಾನದಿಯ ಗರುಡಕುಂಡದಲ್ಲಿ ಕೆಡವಿದಾಗ ಪೂಜೆ ಇಲ್ಲದೇ ಇದ್ದು ಮತ್ತೆ ಆದಿಶ್ರೀಶಂಕರಾ ಚಾರ್ಯರು ಆ ಮೂರ್ತಿಯನ್ನು ಪತ್ತೆ ಹಚ್ಚಿ ಪ್ರತಿಷ್ಠಾಪಿಸಿದರೆಂದೂ, ಇಂತಹದ್ದೇ ತೊಂದರೆ ಮತ್ತೆಮತ್ತೆ ಆದಾಗ ಶ್ರೀರಾಮಾನುಜಾಚಾರ್ಯರು ಅದೇ ಮೂರ್ತಿಯನ್ನು ಮತ್ತೆ ಪ್ರತಿಷ್ಠಾಪಿಸಿದರೆಂದೂ, ಸ್ಥಳಪುರಾಣ ಗಳಲ್ಲಿ ಹೇಳಿದೆ.

ಒರಿಸ್ಸಾ ರಾಜ್ಯದಲ್ಲಿರುವ ಪುರಿ ಜಗನ್ನಾಥಕ್ಷೇತ್ರದಲ್ಲಿ ನವಕಳೇವರ ಸಮಾರಂಭದಲ್ಲಿ ಶಾಲಗ್ರಾಮ ಶಿಲೆಯನ್ನು ಶ್ರೀಜಗನ್ನಾಥದೇವರ ಮರದ ಮೂರ್ತಿ(ಹೃದಯಭಾಗದಲ್ಲಿಟ್ಟು)ಯೊಳಗಿಟ್ಟು ಮೂರ್ತಿಯನ್ನು ಮಾಡಲಾಗುತ್ತದೆ.

ದೇವಾಂಶಸಂಭೂತರಾದ ಪ್ರಹ್ಲಾದ ದೇವರ ಅವತಾರರಾದ, ಮಧ್ವಶಾಸ್ತ್ರಕ್ಕೆ ಟಿಪ್ಪಣಿ ಬರೆದ, ಸುಧಾ ಪರಿಮಳವೇ ಮೊದಲಾದ ಸುಮಾರು ೪೮ ಕೃತಿಗಳನ್ನು ರಚಿಸಿದ **ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರು**, ೧೬೭೧ರಲ್ಲಿ ಮಂಚಾಲೆ(ಈಗಿನ ಮಂತ್ರಾಲಯ)ದಲ್ಲಿ ಸಶರೀರರಾಗಿ ಬೃಂದಾವನ ಪ್ರವೇಶಮಾಡಿ (ವಿರೋಧಿ ಕೃತ್ ಸಂವತ್ಸರದ ಶ್ರಾವಣ ಕೃಷ್ಣ ದ್ವಿತೀಯಾದಿನದಂದು) ಅದರೊಳಗೆ ಕುಳಿತಿರಲು ೭೦೦ ಲಕ್ಷ್ಮೀನಾರಾಯಣ ಶಾಲಗ್ರಾಮಗಳನ್ನಿಟ್ಟು ಅವರ ಬೃಂದಾವನ ಮಾಡಲಾಯಿತು. ೧೬೨೧ರಲ್ಲಿ ಶ್ರೀ ಸುಧೀಂದ್ರತೀರ್ಥರಿಂದ **ಸಂನ್ಯಾಸಾಶ್ರಮ** ಪಡೆದ ಇವರು, **ಸಂನ್ಯಾಸಪೂರ್ವ**ದಲ್ಲಿ ತಿಮ್ಮಣ್ಣ ಭಟ್ಟರು ಮತ್ತು ಗೋಪಿಬಾಯಿದಂಪತಿಗಳ ಸುಪುತ್ರರಾಗಿ ವೆಂಕಟಭಟ್ಟ ಎಂಬ ನಾಮಾಂಕಿತರಾಗಿದ್ದರು. ದೇವಾಂಶಸಂಭೂತರಾದ ಶ್ರೀಗುರುರಾಜರನ್ನು ಅವರ ಶಿಷ್ಯರಾದ ಅಪ್ಪಣ್ಣಾಚಾರ್ಯರು **"ಅಪೇಕ್ಷಿತ ಪ್ರದಾತಾನ್ಯೋ ರಾಘವೇಂದ್ರಾನ್ನ ವಿದ್ಯತೇ"** ಎಂದರೆ ಬಯಸಿದ್ದನ್ನೆಲ್ಲ ಕೊಡತಕ್ಕ ವಿಷಯದಲ್ಲಿ ಶ್ರೀರಾಘವೇಂದ್ರ ಗುರುಸಾರ್ವಭೌಮರನ್ನು ಬಿಟ್ಟರೆ ಮತ್ತೊಬ್ಬರಿಲ್ಲ ಎಂದು ಸ್ತೋತ್ರಮಾಡಲು ಈ ವಾಕ್ಯ ಸತ್ಯವಾದ್ದರಿಂದಲೇ **"ಸಾಕ್ಷೀ ಹಯಾಸ್ಯೋತ್ರ ಹಿ"** (ಇದಕ್ಕೆ ಹಯಗ್ರೀವ ದೇವರು ಸಾಕ್ಷಿ) ಎಂದು ವೃಂದಾವನದೊಳಗಿದ್ದ ಗುರುಗಳು ಹೇಳುತ್ತಾರೆ. ಆದ್ದರಿಂದ ಶ್ರೀರಾಘವೇಂದ್ರ ಗುರು ಸಾರ್ವಭೌಮರು ತಮ್ಮ ಆಶ್ರಿತರಿಗೆ ಮುಕ್ತಿಯನ್ನು ಕೊಡಿಸುವ ಮಹಿಮಾನ್ವಿತರೇ ಸರಿ.

ಉಪಾಸನೆಯಲ್ಲಿ ಎರಡು ಪ್ರಕಾರಗಳಿವೆ. ಮೊದಲನೆಯದು ವಿಗ್ರಹ ಆರಾಧನೆ; ಇನ್ನೊಂದು ಅವಿಗ್ರಹ ಆರಾಧನೆ. ಭಗವಂತನ ವಿಗ್ರಹವಲ್ಲದ, ಈ ಶಾಲಗ್ರಾಮವೇ ಮಹಾವಿಷ್ಣುವಿನ ಪ್ರತೀಕ; ಅವಿಗ್ರಹರೂಪ. ಶಿವನ ಪ್ರತೀಕವಾದ ಶಿವಲಿಂಗದಲ್ಲೂ ಸ್ವಯಂಭೂ ಮತ್ತು ಮಾನುಷ ಎಂಬ ಎರಡು ವರ್ಗಗಳಿವೆ. ಗೋಮಯ, ಮಣ್ಣು, ಮರಳು, ಪುಷ್ಪ, ಶಿಲೆ ಮೊದಲಾದವುಗಳಿಂದ ನಿರ್ಮಿಸಲ್ಪಡುವುದೇ ಮಾನುಷ. ಆದರೆ ನರ್ಮದಾನದಿಯಲ್ಲಿ ದೊರಕುವ ಸ್ಫಟಿಕ/ಬಾಣಲಿಂಗಗಳನ್ನು ಸ್ವಯಂಭೂಲಿಂಗಗಳೆಂದು ಕರೆಯುತ್ತಾರೆ. ಆದರೆ ಶಾಲಗ್ರಾಮಗಳಲ್ಲಿ ಈ ರೀತಿಯ ಪ್ರಭೇದಗಳಿಲ್ಲ. ಈ ಶಾಲಗ್ರಾಮಗಳು ನೇಪಾಲದಿಂದ ಹರಿದುಬರುವ ಗಂಡಕೀನದಿಯಲ್ಲಿ ಮಾತ್ರ ಇದು ಲಭ್ಯವಾಗುತ್ತವೆ. ಪ್ರಕೃತಿದತ್ತವಾದ, ಪೂಜನೀಯ ಗಂಡಕೀನದಿಯಲ್ಲಿ

ಸಿಕ್ಕುವ, ಸಾಕ್ಷಾತ್ ವಿಷ್ಣುವಿನ ಪ್ರತೀಕಗಳಾದ ಈ ಶಿಲೆಯನ್ನು, ರಾಮ, ಕೃಷ್ಣ, ನೃಸಿಂಹ, ವರಾಹ, ಕೇಶವ, ವಾಸುದೇವ, ಹಯಗ್ರೀವ, ಮತ್ಸ್ಯ, ಕೂರ್ಮ, ವಾಮನ ಎಂದು ವರ್ಗೀಕರಿಸಲಾಗುತ್ತದೆ.

ಶಾಲಗ್ರಾಮವು ಎಷ್ಟು ಪ್ರಾಚೀನಕಾಲದಿಂದ ಉಪಾಸನೆಗೊಳ್ಳುತ್ತಿತ್ತು ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಕ್ರಿಸ್ತಪೂರ್ವ ೨ನೆಯ ಶತಮಾನದ ಶಾಸನವೊಂದರಲ್ಲಿ ವಾಸುದೇವ (ಕೃಷ್ಣ) ಮತ್ತು ಸಂಕರ್ಷಣ (ಬಲರಾಮ) ಎಂಬ ಅವಳಿ ದೇವರುಗಳು ಶಾಲಗ್ರಾಮಶಿಲಾರೂಪದಲ್ಲಿ ಪೂಜಿಸಲ್ಪಡುತ್ತಿದ್ದರು ಎಂಬ ಶಿಲಾ ಶಾಸನ ರಾಜಸ್ಥಾನದ ಘೋಸುಂದಿ ನಗರದಲ್ಲಿ ಇದೆ. [ಮೇವಾರ- 'ಎಪಿಗ್ರಾಫಿಯಾ ಇಂದಿಕಾ, ಸಂ. ೨೨, ಪು. ೨೦೪.] ಪರಾಶರಗೋತ್ರದ, ಗಜಾಯನ ವಂಶಸ್ಥನಾದ ಸರ್ವತಾತ ಎಂಬ ರಾಜನು ಈ ದೇವಾಲಯದ ಸುತ್ತಲೂ ಕಲ್ಲಿನ ಗೋಡೆಯನ್ನು (ಪೂಜಾ ಶಿಲಾಪ್ರಕಾರ) ಕಟ್ಟಿಸಿದ್ದನು. ಅದನ್ನು ನಾರಾಯಣ ವಾಟಿಕಾ ಎಂದು ಹೇಳುತ್ತಾರೆ.

**ಕಾರಿತೋಽಯಂ ರಾಜ್ಞಾ ಭಾಗವತೇನ ಗಾಜಾಯನೇನ ಪಾರಾಶರೀಪುತ್ರೇಣ ಸರ್ವತಾತೇನ ಅಶ್ವಮೇಧ ಯಾಜಿನಾ ಭಗವದ್ಭ್ಯಾಂ ಸಂಕರ್ಷಣವಾಸುದೇವಾಭ್ಯಾಂ ಆನಿಹಿತಾಭ್ಯಾಂ ಸರ್ವೇಶ್ವರಾಭ್ಯಾಂ ಪೂಜಾಶಿಲಾ ಪ್ರಾಕಾರೋ ನಾರಾಯಣ ವಾಟಕಾ......... ॥**

ಗುಪ್ತ ಸಮ್ರಾಟರ ಸಾಮಂತನಾಗಿದ್ದ ಮಹಾರಾಜ ನರವರ್ಮನ ಮಾಂಡಸೋರ್ ಶಿಲಾಶಾಸನವು ಕ್ರಿ. ಶ. ೪೦೪ ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭಗೊಳ್ಳುತ್ತದೆ.

**ಸಹಸ್ರ ಶಿರಸೇ ತಸ್ಮೈ ಪುರುಷಯಾಮಿತಾತ್ಮನೇ ।**
**ಚತುಃಸಮುದ್ರಪರ್ಯಂಕ ನಿದ್ರಾಲವೇ ನಮಃ ॥**

ಈ ಮೇಲಿನ ಶ್ಲೋಕದಿಂದಾಗಿ, ಶ್ರೀಮಹಾವಿಷ್ಣುವನ್ನು ಶಾಲಗ್ರಾಮಶಿಲೆಗಳಲ್ಲಿ ಪೂಜಿಸಲಾಗುತ್ತಿತ್ತು ಎಂಬುದು ತಿಳಿಯುವುದು.

ಹಿಂದಿನ ಕಾಲದಲ್ಲಿ ವಿಷ್ಣು ದೇವರನ್ನು ವಿಗ್ರಹರೂಪದಲ್ಲಿಯೂ ಆರಾಧಿಸಲಾಗುತ್ತಿತ್ತು ಎಂಬುದಕ್ಕೆ ಮಧ್ಯ ಪ್ರದೇಶದ ಬಿಲಾಸಪುರದ ಬಂದೀಖಾರ್‌ನಲ್ಲಿ ಲಭಿಸಿರುವ ಒಂದೇ ಸಾಲಿನ ಬ್ರಾಹ್ಮೀಲಿಪಿಯ ಶಾಸನ (ಕ್ರಿ.ಪೂ. ಒಂದನೆಯ ಶತಮಾನ) ಸಾಕ್ಷಿಯಾಗಿದ್ದರೂ, ವಿಷ್ಣುವನ್ನು ಅವಿಗ್ರಹರೂಪವಾದ ಶಾಲಗ್ರಾಮರೂಪ ದಲ್ಲಿ ಪೂಜಿಸಲಾಗುತ್ತಿತ್ತು ಎಂಬುದಕ್ಕೆ ಈ ಮೇಲೆ ಹೇಳಿದ ಶಾಸನವು ಸಾಕ್ಷಿಯಾಗಿದೆ.

ಇದಕ್ಕಿಂತಲೂ ಸ್ಪಷ್ಟವಾದ ಪುರಾವೆಯನ್ನು ನೀಡುವ ಶಾಸನವು ಮಥುರಾ ಸಮೀಪದ ಮೋರಾ ಎಂಬಲ್ಲಿದೆ. ಇದರಲ್ಲಿ ಯಾದವ ವಂಶದ ಐದು ಪೂಜ್ಯ ವೀರರನ್ನು ಅವರ ಐದು ಪ್ರಜ್ವಲವಾದ ಶಿಲಾರೂಪ ಗಳಲ್ಲಿ ಪೂಜಿಸಲಾಗುತ್ತಿತ್ತು ಎಂದು ಹೇಳಲಾಗಿದೆ. ವಿಷ್ಣುವಿನ ಎಲ್ಲ ರೂಪಗಳನ್ನೂ ಪ್ರತಿನಿಧಿಸುವ ಪ್ರತ್ಯೇಕ ಪ್ರತ್ಯೇಕ ಶಾಲಗ್ರಾಮಶಿಲೆಗಳೂ ಇವೆ.

ಶಂಕರಾಚಾರ್ಯರ ಪಂಚಾಯತನ ಪೂಜಾಪದ್ಧತಿಯಲ್ಲಿ ವಿಷ್ಣು, ಶಿವ, ದೇವಿ, ಸೂರ್ಯ ಮತ್ತು ಗಣೇಶ –ಈ ಐವರನ್ನು ವಿಗ್ರಹರೂಪದಲ್ಲಿ ಪೂಜಿಸುವುದೇ ವೈಶಿಷ್ಟ್ಯ. ಮುಂದೆ ಈ ಪದ್ಧತಿ ಮುಂದುವರಿದು, ವಿಷ್ಣುವಿಗೆ ಶಾಲಗ್ರಾಮ, ಶಿವನಿಗೆ ಲಿಂಗ, ದೇವಿಗೆ ಯಂತ್ರ, ಧಾತುಪತ್ರ, ಸೂರ್ಯನಿಗೆ ಸ್ಫಟಿಕ ಹಾಗೂ ಗಣೇಶನಿಗೆ ಶೋಣಶಿಲೆ (ಕೆಂಪು ಕಲ್ಲು) ಪ್ರತೀಕಗಳಾಗಿ ಸ್ಕಂದೋಪಾಸನೆ ಇದರೊಂದಿಗೆ ಸೇರಿತು (ಕ್ರಿ. ಶ. ಎಂಟನೇ ಶತಮಾನ). ಈ ಐದು ದೇವರುಗಳನ್ನು ಅವರವರ ಪೂಜಾಪದ್ಧತಿಯಂತೆ ವಿಭಾಗೀಕರಿಸಲಾಯಿತು. ವೈಷ್ಣವರು ಶಾಲಗ್ರಾಮವನ್ನು ಮಧ್ಯದಲ್ಲಿಟ್ಟು ಉಳಿದ ನಾಲ್ಕು ದೇವರುಗಳನ್ನು ಸುತ್ತಲೂ ಇಟ್ಟು ಪೂಜೆ

ಮಾಡುತ್ತಿದ್ದರು. ಶೈವರು ಬಾಣಲಿಂಗವನ್ನು ಮಧ್ಯದಲ್ಲಿಟ್ಟು ಉಳಿದ ನಾಲ್ಕು ದೇವರುಗಳನ್ನು ಸುತ್ತಲೂ ಇಟ್ಟು ಪೂಜೆ ಮಾಡುತ್ತಿದ್ದರು. ಹಾಗೆಯೇ ಇತರರು ಅವರವರ ಪದ್ಧತಿಗನುಸಾರವಾಗಿ ಪೂಜೆ ಮಾಡುತ್ತಿದ್ದರು.

| ಗಣೇಶಃ | | ವಿಷ್ಣುಃ | | ಶಿವಃ | | ಸೂರ್ಯಃ | | ದೇವೀ | |
|---|---|---|---|---|---|---|---|---|---|
| ವಿಷ್ಣುಃ | ಶಂಕರಃ | ಶಂಕರಃ | ಗಣೇ. | ವಿಷ್ಣುಃ | ರವಿಃ | ಶಂಕರಃ | ಗಣೇ. | ವಿಷ್ಣುಃ | ಶಂಕರಃ |
| ೨ | ೩ | ೨ | ೩ | ೨ | ೩ | ೨ | ೩ | ೨ | ೩ |
| ಗಣೇಶಃ ೧ | | ವಿಷ್ಣುಃ ೧ | | ಶಂಕರಃ ೧ | | ರವಿಃ ೧ | | ದೇವೀ ೧ | |
| ದೇವೀ | ರವಿಃ | ದೇವೀ | ರವಿಃ | ದೇವೀ | ಗಣೇ. | ದೇವೀ | ವಿಷ್ಣುಃ | ರವಿಃ | ಗಣೇ. |
| ೫ | ೪ | ೫ | ೪ | ೫ | ೪ | ೫ | ೪ | ೫ | ೪ |

ಈ ಮೂರ್ತಿಗಳಿಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳನ್ನು ಪಂಚಲೋಹದ ಹರಿವಾಣದಲ್ಲಿಟ್ಟು, ಅದರ ಮೇಲೆ ತುಳಸಿ, ಬಿಲ್ವಪತ್ರೆಗಳನ್ನು ಅರ್ಚನೆ ಮಾಡುತ್ತಿದ್ದರು ಹಾಗೂ ಎಲ್ಲಾ ಐದು ದೇವತೆಗಳನ್ನೂ ಪೂಜಿಸುತ್ತಿದ್ದರು. ಇದನ್ನು ಷೋಡಶೋಪಚಾರಗಳಿಂದ ಪೂಜಿಸುತ್ತಿದ್ದರು. ಈ ಐದು ದೇವತೆಗಳು ಪ್ರಪಂಚದ ಐದು ವಸ್ತುಗಳಿಗೆ ಅಧಿದೇವತೆಗಳಾದರು. (ವಿಷ್ಣುವು ಆಕಾಶಕ್ಕೂ ಶಿವನು ಭೂಮಿಗೂ, ದೇವಿಯು ಬೆಂಕಿಗೂ, ಸೂರ್ಯನು ಗಾಳಿಗೂ, ಗಣೇಶನು ನೀರಿಗೂ ಅಧಿದೇವತೆಗಳು.)

ಶ್ರೀಶಂಕರಾಚಾರ್ಯರು ತಮ್ಮ ವೇದಾಂತಸೂತ್ರಭಾಷ್ಯದಲ್ಲಿ (ಕ್ರಿ. ಶ. ೬೩೨-೬೬೪) ವಿಷ್ಣುವಿನ ಉಪಾಸನೆ ಯನ್ನು, ಅದರಲ್ಲಿಯೂ ಶಾಲಗ್ರಾಮದ ಉಪಾಸನೆಯನ್ನು ಉಲ್ಲೇಖಿಸಿದ್ದಾರೆ. ಒಂದೆಡೆ– '**ಯಥಾ ಶಾಲ ಗ್ರಾಮೇ ಹರಿಃ** ।' (ಶಾಲಗ್ರಾಮದಲ್ಲಿ ಹರಿಯು ಇರುವಂತೆ) ಎಂದೂ, ಇನ್ನೊಂದೆಡೆ– "ಶಾಲಗ್ರಾಮ ಇವ ವಿಷ್ಣೋಃ ।' (ವಿಷ್ಣುವಿನ ಶಾಲ ಗ್ರಾಮದಂತೆ) ಎಂದೂ, ಮತ್ತೊಂದರಲ್ಲಿ– '**ಯಥಾ ಶಾಲಗ್ರಾಮೇ ವಿಷ್ಣುಃ ಸನ್ನಿಹಿತಃ ತದ್ವತ್** ।' (ಹೇಗೆ ಶಾಲಗ್ರಾಮದಲ್ಲಿ ವಿಷ್ಣುವು ಸನ್ನಿಹಿತನಾಗಿರುವನೋ ಹಾಗೆಯೇ) ಎಂದೂ ಉಲ್ಲೇಖಿಸಿರುತ್ತಾರೆ. ವಿಷ್ಣುವಿನ ವಿಗ್ರಹಾರಾಧನೆಯನ್ನು ಅವರು ಎಲ್ಲಿಯೂ ಉಲ್ಲೇಖಿಸಿಲ್ಲ. ಆದರೆ ಅವರ ಕಾಲದಲ್ಲಿ ವಿಗ್ರಹಾರಾಧನೆ ಇರಲಿಲ್ಲ ಎಂಬುದಿದರ ಅರ್ಥವಲ್ಲ. ವಿಷ್ಣುವಿನ ಉಪಾಸನೆಯಲ್ಲಿ ಶಾಲಗ್ರಾಮಕ್ಕೇ ಹೆಚ್ಚಿನ ಮಹತ್ವ ಎಂಬುದನ್ನು ಇದರಿಂದ ತಿಳಿದುಕೊಳ್ಳಬಹುದು. ಈ ಕಾರಣದಿಂದಾಗಿ ವೈಷ್ಣವ ದೇವಸ್ಥಾನಗಳಲ್ಲಿ ಮುಖ್ಯದೇವರ ಪಾದಮೂಲದಲ್ಲಿ ಶಾಲಗ್ರಾಮವನ್ನಿಟ್ಟು ಶಾಲಗ್ರಾಮಗಳ ಮಾಲೆ ಮಾಡಿ ಆ ಶಾಲಗ್ರಾಮವನ್ನೇ ಮುಖ್ಯವಾಗಿ ಪೂಜಿಸಲಾಗುತ್ತದೆ. ತಿರುಪತಿ ತಿರುಮಲೆಯ ಶ್ರೀನಿವಾಸನ ಗರ್ಭಗುಡಿಯಲ್ಲಿ ಶಾಲಗ್ರಾಮವನ್ನು ದೇವರ ಕಾಲಬುಡದಲ್ಲಿಟ್ಟು ಪೂಜಿಸುತ್ತಾರೆ.

ಶಾಲಗ್ರಾಮಪೂಜೆ ಅನೇಕ ವಿಧಗಳಲ್ಲಿ ವಿಗ್ರಹಪೂಜೆಗಳಿಂದ ಸುಲಭವಾಗಿದೆ. ಮನುಷ್ಯನಿರ್ಮಿತ ವಿಗ್ರಹವನ್ನು ಮೊದಲು ಶುದ್ಧೀಕರಿಸಿ, ಅನಂತರ ಪ್ರಾಣಪ್ರತಿಷ್ಠೆ ಮಾಡಬೇಕು. ಶಾಲಗ್ರಾಮಕ್ಕೆ ಈ ಯಾವುದೇ ಕ್ರಮಗಳಿಲ್ಲದೆಯೇ, ನೇರವಾಗಿ ಪೂಜೆ ಮಾಡಬಹುದು.

**ನೋಪಚಾರಾಪಚಾರಾಶ್ಚ ವಿದ್ಯಂತೇ ವೈ ಖಗಾಧಿಪ ।**
**ಮೂರ್ತ್ಯಂತರೇಷು ಬಿಂಬೇಷು ನ ಯಷ್ಪವ್ಯಂ ತದೇವ ತತ್ ॥**

ಶಾಲಗ್ರಾಮಪೂಜೆಯಲ್ಲಿ ಧ್ಯಾನ ಆವಾಹನಾದ್ಯುಪಚಾರಗಳು ವ್ಯತ್ಯಾಸವಾದರೂ ದೋಷವಿಲ್ಲ. ಆದರೆ ಶಾಲಗ್ರಾಮವಲ್ಲದ ಬೇರೆ ಮೂರ್ತಿಯಲ್ಲಿ ಶಾಲಗ್ರಾಮದಲ್ಲಿ ನಡೆಸಿದಂತೆ ಪೂಜಿಸಬಾರದು. ಏಕೆಂದರೆ ಶಾಲಗ್ರಾಮ ಸಾಕ್ಷಾತ್ ಭಗವತ್‌ಸನ್ನಿಧಾನಯುಕ್ತ.

ಶಾಲಗ್ರಾಮವನ್ನು ಪೂಜಿಸಲು ವಿಶೇಷವಾಗಿ ಉಪದೇಶ, ಮಂತ್ರ, ಪೂಜಾವಿಧಾನ ಯಾವುದೂ ಬೇಕಾಗಿಲ್ಲ. ಪುರೋಹಿತರ ಅಗತ್ಯವೂ ಇರುವುದಿಲ್ಲ. ಇದನ್ನು ಯಾವ ರೀತಿ ಪೂಜಿಸಿದರೂ ತಪ್ಪಿಲ್ಲ. ಆದರೆ ಎಲ್ಲ ರೀತಿಯ ವಿಧಿವಿಧಾನಗಳೊಂದಿಗೆ ಶಾಸ್ತ್ರೋಕ್ತವಾಗಿ ಪೂಜಿಸಿದಾಗ ಹೆಚ್ಚು ಲಾಭವಾಗುತ್ತದೆ.

**ಗಂಧಮಾಲ್ಯಾರ್ಚನನೈವೇದ್ಯೈಃ ಪುಷ್ಪಧೂಪಾನುಲೇಪನೈಃ ।**
**ಅರ್ಚಯೇನ್ಮಾನವೋ ಯಸ್ತು ಕಲೌ ಭಕ್ತಿಪರಾಯಣಃ ॥**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ವಸೇಚ್ಚಿರಮ್ ॥**

ಎಂದು ಶಾಸ್ತ್ರ ಹೇಳುತ್ತದೆ. ಯಾರಿಗೆ ಅನುಕೂಲ ಇದೆಯೋ ಅಂತಹವರು ವಿಧಿಪ್ರಕಾರ ಪೂಜಿಸ ಬಹುದು. ಯಾರಿಗೆ ಅನನುಕೂಲವಿರುವುದೋ ಅಂತಹವರು ಪೂಜೆ ಮಾಡಲು ಹಿಂಜರಿಯಬೇಕಾಗಿರು ವುದಿಲ್ಲ. ಅವರವರ ಪೂಜಾಪದ್ಧತಿಯಲ್ಲಿ ಮಾಡಬಹುದು. ಮಂತ್ರಾಸನ, ಯೋಗಾಸನ, ಆರತಿ, ನಿರ್ಮಾಲ್ಯ ವಿಸರ್ಜನೆ, ಅರ್ಘ್ಯ, ಪಾದ್ಯ, ಆಚಮನೀಯ ಸಮರ್ಪಣೆ, ಸ್ನಾನಾಸನ, ಧೂಪ, ದೀಪ, ಅಭಿಷೇಕ, ಅಲಂಕಾರಾಸನ, ಗಂಧ ತುಳಸೀ ಪುಷ್ಪ ಸಮರ್ಪಣೆ, ಮಂತ್ರ, ಪುಷ್ಪ, ಅವಧಾನ ಅರ್ಚನೆ, (ದ್ವಾದಶ ನಾಮಾರ್ಚನೆ, ಅಷ್ಟೋತ್ತರ ಶತ/ಸಹಸ್ರ ನಾಮಾರ್ಚನೆ, ಯಾವುದಾದರೂ ಸರಿ ಕಾಲಾವಕಾಶ, ಶಕ್ತ್ಯನುಸಾರ ನಡೆಸಬಹುದು.), ಭೋಜ್ಯಾಸನ, ನೈವೇದ್ಯ ಸಮರ್ಪಣೆ, ಪುನಃ ಅರ್ಘ್ಯಪಾದ್ಯಾಚಮನೀಯ, ಮಂಗಳಾರತಿ, ಸ್ತೋತ್ರಪಠನ, ಉಪಚಾರ, ಸಮರ್ಪಣೆ, ಕೊನೆಯ ನೀರಾಜನ ಸಮರ್ಪಿಸಿ, ಯೋಗನಿದ್ರಾಸನದಲ್ಲಿ ಸಂಪುಷ್ಪ ಮುಚ್ಚಿ ನಮಸ್ಕರಿಸಿ ಏಳಬೇಕು. ಈ ಎಲ್ಲಕ್ಕೂ ವೈದಿಕಮಂತ್ರಗಳು, ತಾಂತ್ರಿಕವಿಧಿಗಳು, ಸ್ಮೃತಿಗ್ರಂಥ ಗಳಲ್ಲಿ ಉಕ್ತಶ್ಲೋಕಗಳೂ ಇವೆ. ಆಯಾ ಮೂರ್ತಿ ವಿಶೇಷ ವೈಭವ ಕೊಂಡಾಟದ ಹಾಡು, ಸ್ತೋತ್ರ, ಮಂತ್ರ, ಸ್ತುತಿಗಳನ್ನು ಜಪಿಸುತ್ತಾ ಮುಕ್ಕಾಲು ಗಂಟೆ ನಡೆಸಲೂಬಹುದು ಅಥವಾ ಹತ್ತೇ ನಿಮಿಷದಲ್ಲಿ ಮುಗಿಸಲೂಬಹುದು. ಯಾವ ಮಂತ್ರ, ತಂತ್ರ ಗೊತ್ತಿಲ್ಲದವರು ಕೇವಲ ನಾರಾಯಣ ಅಷ್ಟಾಕ್ಷರದ ಅಥವಾ ವಾಸುದೇವ ತ್ರಯೋದಶಾಕ್ಷರದ ಅಥವಾ ವಿಷ್ಣು ಷಡಕ್ಷರೀಯ ಮಹಾಮಂತ್ರವನ್ನೇ ಉದ್ದಕ್ಕೂ ಜಪಿಸುತ್ತಾ ಈ ಎಲ್ಲಾ ಪೂಜೆ, ಆಸನ, ಆರತಿ, ನೈವೇದ್ಯ, ಅರ್ಚನೆಗಳನ್ನು ಸಮರ್ಪಿಸಬಹುದು. ಶ್ರೀಮದ್ಭಗವದ್ಗೀತೆ ಯಲ್ಲಿ ಶ್ರೀಕೃಷ್ಣನು ಹೇಳಿದಂತೆ–

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥**

ಶಾಲಗ್ರಾಮಗಳಲ್ಲಿ ಭಗವಂತನ ನಿತ್ಯವಾಸವಿರುವುದರಿಂದ, ವಿಗ್ರಹ ಆರಾಧನೆಗಳಲ್ಲಿನಂತೆ ಆವಾಹನೆ, ವಿಸರ್ಜನೆಗೆ ಅವಕಾಶವೇ ಇಲ್ಲ. ವಿಗ್ರಹವೇನಾದರೂ ಊನವಾಯಿತೆಂದರೆ ವಿಸರ್ಜನೆ ಮಾಡಬೇಕೆಂಬ ನಿಯಮವಿದೆ. ಆದರೆ ಶಾಲಗ್ರಾಮಕ್ಕೆ ಈ ನಿಯಮಗಳಿರುವುದಿಲ್ಲ. ಕೈತಪ್ಪಿ ಬಿದ್ದು ಒಡೆದರೂ, ಎರಡಾಗಿ ಪೂಜಿಸಬಹುದು. ನೈವೇದ್ಯಕ್ಕೆ ಹಾಲು, ಹಣ್ಣು, ಯಾವುದಾದರೂ ಸರಿ, ಅಡುಗೆಯಾದರೆ ಮಡಿಯಲ್ಲಿ ಮಾಡಿ ಸಮರ್ಪಿಸಬೇಕು. ಪರಸ್ಥಳಕ್ಕೆ ಹೋದಾಗ ನೈವೇದ್ಯ ಹಾಗೂ ಪೂಜೆಗೆ ಅವಕಾಶವಿಲ್ಲದಿದ್ದಲ್ಲಿ, ಸಕ್ಕರೆ, ಶುದ್ಧತೀರ್ಥ ಎದುರಿಗಿಟ್ಟು ಕೈಮುಗಿದು "ನಾನು ಬರುವವರೆಗೆ ಇವನ್ನೇ ಕೃಪೆಯಿಂದ ಸ್ವೀಕರಿಸು" ಎಂದು ಪ್ರಾರ್ಥಿಸಿದರೂ ಸಾಕು. ಅನ್ನ, ಪರಮಾನ್ನ ಮತ್ತು ಹಾಲನ್ನು ತುಪ್ಪ ಮತ್ತು ಸಕ್ಕರೆಯೊಂದಿಗೆ ಸೇರಿಸಿ

ನೈವೇದ್ಯ ಮಾಡಿದಲ್ಲಿ ವಿಶೇಷ ಅನುಗ್ರಹವನ್ನು ಪೂಜಿಸುವವನು ಪಡೆಯುತ್ತಾನೆ. ತಾಡವೋಲೆ ಪೆಟ್ಟಿಗೆಯಲ್ಲೋ, ಬುಟ್ಟಿಯಲ್ಲೋ, ಬೆತ್ತದ ಪೆಟ್ಟಿಗೆಯಲ್ಲೋ, ಮರದ ಸಂಪುಟ, ತಾಮ್ರದ ಭರಣಿ ಇಂತಹವುಗಳಲ್ಲೋ ಇಟ್ಟು ಒಂದೇ ಶಾಲಗ್ರಾಮವನ್ನು ಪರಸ್ಥಳಕ್ಕೆ ಒಯ್ದು ಅಲ್ಲೂ ಪೂಜೆ ಮಾಡಬಹುದು. ಅನುಕೂಲವಿಲ್ಲದ ಜಾಗದಲ್ಲಿ, ದೈವದ್ವೇಷಿಗಳು ತಾವಾಗಿಯೇ ಬಿಟ್ಟುಹೋಗುತ್ತವೆ. ದುಷ್ಟವರ್ಜನವೇ ಇದು ಕೊಡುವ ಮೊದಲ ಫಲ. ರೇಶ್ಮೆಪಟ್ಟೆಯಲ್ಲಿ ಸುತ್ತಿಯೂ ಕೊಂಡೊಯ್ಯಬಹುದಾದ ಈ ಶಾಲಗ್ರಾಮಕ್ಕೆ ಕಾಲು ತಾಗದಂತೆ ರಕ್ಷಿಸಿದರೆ ಸಾಕು.

**ಶಾಲಗ್ರಾಮಶಿಲಾಂ ಪ್ರಾಪ್ಯ ಗಂಗಾಯಾಂ ಸ್ನಾನಮಾಚರೇತ್ ।**
**ನಶ್ಯಂತಿ ಸರ್ವಪಾಪಾನಿ ಬ್ರಹ್ಮಹತ್ಯಾಯುತಾನಿ ಚ ॥**

ಶಾಲಗ್ರಾಮಶಿಲೆಯನ್ನಿಟ್ಟುಕೊಂಡು ಗಂಗಾಸ್ನಾನ ಮಾಡಿದಾಗ, ಸರ್ವಪಾಪಗಳೂ, ಹತ್ತುಹಲವು ಬ್ರಹ್ಮಹತ್ಯಾದೋಷಗಳೂ ಪರಿಹಾರವಾಗುತ್ತವೆ.

**ಸ್ನಾತ್ವಾ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ ಧಾರಯೇತ್ ।**
**ಸರ್ವಪಾಪವಿನಿರ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್ ॥** – ಸರ್ವಮೂಲಗ್ರಂಥ.

ಶ್ರೀಹರಿಗೆ ಅಭಿಷಿಕ್ತ ಪಾದೋದಕವನ್ನು ಕುಡಿಯುವ ಹಾಗೂ ತಲೆಯಲ್ಲಿ ಧರಿಸುವ ವ್ಯಕ್ತಿಯು ಎಲ್ಲಾ ಪಾಪಗಳನ್ನು ಕಳೆದುಕೊಂಡು ಪರಮಾತ್ಮನ ಸಿದ್ಧಿ/ಜ್ಞಾನವನ್ನು ಹೊಂದುವನು.

(ಈ ಲೇಖಕನು ಶಾಲಗ್ರಾಮದೊಂದಿಗೆ ಹರಿದ್ವಾರ, ಹೃಷೀಕೇಶ, ಯಮುನೋತ್ರಿ, ಗಂಗೋತ್ರಿ, ಕೇದಾರನಾಥ, ಬದರೀನಾಥ, ಗಯಾ, ವಾರಣಾಸಿ, ಅಲಹಾಬಾದ್, ಅಯೋಧ್ಯಾ, ಘೋರಖಪುರ, ನೇಪಾಳ, ವೈಷ್ಣವೀದೇವಿ, ಜಮ್ಮು, ಶ್ರೀನಗರ, ಬೈದ್ಯನಾಥ, ಕುಲು, ಮನಾಲಿ, ಶಿಮ್ಲಾ, ಕೊಲ್ಲಾಪುರ, ಪಂಡರಾಪುರ, ಶನಿಶಂಗನಾಪುರ, ನಾಸಿಕ್, ಗ್ರಿಷ್ಮೇಶ್ವರ, ತ್ರ್ಯಂಬಕೇಶ್ವರ ಮೊದಲಾದ ಉತ್ತರ ಭಾರತದ ತೀರ್ಥಯಾತ್ರೆ ಕೈಗೊಂಡು ಪಿತೃಕಾರ್ಯಗಳಲ್ಲಿ ಎಷ್ಟು ಸಾಧ್ಯವೋ ಅಷ್ಟು ಪೂಜೆ ಮಾಡಿರುತ್ತಾನೆ. ಅನಂತರದ ದಿನಗಳಲ್ಲಿ ಕೊರಳಿನ ಮಾಲೆಯಲ್ಲಿ ಪೂಜಾಸಮಯದಲ್ಲಿ ಧರಿಸುವ ಕ್ರಮವಿಟ್ಟುಕೊಂಡಿರುತ್ತಾನೆ.)

# 2. ಶಾಲಗ್ರಾಮಶಿಲೆಗಳ ಹುಟ್ಟು ಮತ್ತು ಅವುಗಳ ಉಗಮಸ್ಥಾನ

ಶಾಲಗ್ರಾಮಗಳು ಹಿಮಾಲಯ ಪರ್ವತದಿಂದ ಕೆಳಗಿಳಿದು ಹರಿಯುವ ಗಂಡಕೀ ಎಂಬ ನದಿಯಲ್ಲಿ ಮಾತ್ರ ಸಿಗುತ್ತವೆ. ಇದನ್ನು ನಾರಾಯಣೀ, ಶಾಲಗ್ರಾಮೀ, ಹಿರಣ್ವತೀ ಮತ್ತು ಹಿರಣ್ಯವತೀ ಎಂಬ ಹೆಸರಿನ ಈ ನದಿ ಪರಮಪವಿತ್ರವಾದುದು ಎಂದು ಮಹಾಭಾರತದ (ಭೀಷ್ಮಪರ್ವ) ಸಹಿತ ಅನೇಕ ಪ್ರಾಚೀನ ಗ್ರಂಥಗಳಲ್ಲಿ ಹೇಳಲಾಗಿದೆ. ಈ ನದಿಯ ನೀರು ಎಲ್ಲ ಪವಿತ್ರ ನದಿಗಳ ನೀರನ್ನು ಹೊಂದಿದೆ. ಆದುದರಿಂದ ಅಗ್ನಿದೇವರಿಗಿಂತಲೂ ಶ್ರೇಷ್ಠ ಎನ್ನಲಾಗಿದೆ (ವನಪರ್ವ- ೮೪, ೧೧೩). ಸಾಕ್ಷಾತ್ ದೇವರುಗಳೇ ಈ ನದಿಯಲ್ಲಿ ಇರುವುದರಿಂದ ಪುರಾಣಗಳು ಈ ನದಿಯನ್ನು ಬಹಳ ಪವಿತ್ರವಾದ ನದಿ ಎಂದು ವರ್ಣಿಸುತ್ತವೆ. ಯಾವನು ಈ ನದಿಯಲ್ಲಿ ಸ್ನಾನ ಮಾಡುತ್ತಾನೋ ಅಂತಹವನು ಜನ್ಮ ಮತ್ತು ಮೃತ್ಯುವಿನಿಂದ ಪಾರಾಗುತ್ತಾನೆ ಪಾಪಿಷ್ಠನೂ ಸಹ ತನ್ನ ಎಲ್ಲ ಪಾಪಕರ್ಮಗಳಿಂದ ಮುಕ್ತಿಯನ್ನು ಹೊಂದುವವನಾಗುತ್ತಾನೆ.

ಶಾಲಗ್ರಾಮಗಳು ಗಂಡಕೀನದಿಯಲ್ಲಿ ರೂಪುಗೊಂಡಂತಹ ಪಳೆಯುಳಿಕೆ ಶಿಲೆಗಳು ಹಾಗೂ ವಿಷ್ಣುದೇವರ ಪ್ರತೀಕವಾದ ಚಕ್ರದ ಚಿಹ್ನೆಗಳನ್ನು ಹೊಂದಿರುತ್ತದೆ. '**ಗಂಡಕೀ ಉದ್ಭವ ವಜ್ರಕೀಟಕೃತ ಚಕ್ರ ಸಮಾಯುಕ್ತ ಶಿಲಾ**' ಗಂಡಕೀನದಿಯ ಹುಟ್ಟು ಮತ್ತು ಈ ನದಿಯಲ್ಲಿ ಶಾಲಗ್ರಾಮಗಳು ಹೇಗೆ ಉಂಟಾಗುತ್ತವೆ ಎಂಬುದರ ಕಥೆಯ ಪ್ರಕಾರ, ಓರ್ವ ಸಾತ್ವಿಕಸ್ತ್ರೀಯು ಬಹಳ ವರ್ಷ ಕಠಿನ ತಪಸ್ಸನ್ನು ಆಚರಿಸಿ, ಅವಳ ಹೊಟ್ಟೆಯಲ್ಲಿ ವಿಷ್ಣು ಮಗುವಾಗಿ ಹುಟ್ಟುವಂತೆ ವಿಷ್ಣುವಿನಿಂದ ವರ ಪಡೆದು, ಗಂಡಕೀನದಿಯಲ್ಲಿ ವಿಷ್ಣುವು ಶಾಲಗ್ರಾಮ ರೂಪದಲ್ಲಿ ಜನಿಸುತ್ತಾನೆ. ಶಾಲಗ್ರಾಮದಲ್ಲಿರುವ ದೇವರ ಈ ಅಸ್ತಿತ್ವ, ಭಕ್ತರನ್ನು ಉದ್ಧಾರ ಮಾಡುವಂತಹದ್ದು.

ಈ ಕಾರಣದಿಂದಲೇ ಈ ಗಂಡಕೀನದಿಯು ಉಳಿದ ಎಲ್ಲ ನದಿಗಳಿಗಿಂತಲೂ ಅತ್ಯಂತ ಶ್ರೇಷ್ಠ ಎಂದೆನಿಸಿದೆ. ಈ ನದಿಯನ್ನು ನೋಡಿದ ಮಾತ್ರಕ್ಕೇ, ಮನಸ್ಸಿನ ಕ್ಲೇಶ ನಾಶವಾಗುವುದು; ಮುಟ್ಟಿದ ಮಾತ್ರಕ್ಕೇ ಅಥವಾ ಅದರಲ್ಲಿ ಸ್ನಾನ ಮಾಡುವುದರಿಂದ ಅಥವಾ ಸ್ವಲ್ಪ ನೀರನ್ನು ಕುಡಿಯುವುದರಿಂದಾಗಿ ಮನುಷ್ಯನ ಪಾಪಗಳೆಲ್ಲವೂ ನಾಶವಾಗುವವು. ಸ್ವತಃ ದೇವರೇ ಆಗಿರುವ ಶಾಲಗ್ರಾಮಗಳು ಇರುವುದರಿಂದ ಗಂಡಕೀನದಿ ಪವಿತ್ರ ಎಂದು ಪುರಾಣಗಳು ಹೇಳುತ್ತವೆ:

**ತಸ್ಯಾಂ ಭವಾ ಯೇ ಚಾತ್ಮನಃ ಚಕ್ರಚಿಹ್ನೈರಲಂಕೃತಾಃ ।**
**ತೇ ಸಾಕ್ಷಾತ್ ಭಗವಂತೋ ಹಿ ಸ್ವ ಸ್ವರೂಪಧರಾಸ್ತರಾಃ ॥**

**ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ವೈ ।**
**ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ॥**

– ಸರ್ವಮೂಲಗ್ರಂಥಗಳು.

ಬ್ರಹ್ಮಾಂಡದೊಳಗೆ ಯಾವ ತೀರ್ಥಗಳಿವೆಯೋ ಅವು ಯಾವುವೂ ಶ್ರೀಹರಿಪಾದೋದಕದ ೧೬ನೆಯ ಒಂದಂಶಕ್ಕೂ ಸಾಟಿಯಿಲ್ಲ. ಭೂಮಂಡಲದಲ್ಲಿರುವ ತೀರ್ಥಕ್ಷೇತ್ರಗಳು ಮಾತ್ರವಲ್ಲ, ಬ್ರಹ್ಮಾಂಡದಲ್ಲಿರುವ ಯಾವುದೇ ತೀರ್ಥವು ಶಾಲಗ್ರಾಮಮಹಾತ್ಮೆಗೆ ಸ್ವಲ್ಪವೂ ಸಮವಲ್ಲ.

ಶಾಸ್ತ್ರಗಳು ಹೇಳುವ ಪ್ರಕಾರ ಗಂಡಕೀನದಿಯು ಹಿಮಾಲಯಪರ್ವತಶ್ರೇಣಿಯ ದಕ್ಷಿಣಭಾಗದಲ್ಲಿ ಸುಮಾರು ೧೦ ಯೋಜನ (ಸು. ೮೦ ಕಿ.ಮೀ.) ವ್ಯಾಪ್ತಿಯಲ್ಲಿದ್ದು ಈ ಎಲ್ಲ ಪ್ರದೇಶವನ್ನೂ ಚಕ್ರತೀರ್ಥ ಎಂದು ಕರೆಯುತ್ತಾರೆ.

**ಗಂಡಕ್ಯಾಂ ಗಿರಿರಾಜಸ್ಯ ದಕ್ಷಿಣೇ ದಶಯೋಜನಮ್ ।**
**ವಿಸ್ತೀರ್ಣಂ ಯನ್ಮನುಂ ಕ್ಷೇತ್ರಂ ಪುಣ್ಯಕ್ಷೇತ್ರಂ ಮಹೀತಲೇ ।**
**ಚಕ್ರತೀರ್ಥಮಿತಿ ಖ್ಯಾತಂ ತ್ರಿಷು ಲೋಕೇಷು ವಿಶ್ರುತಮ್ ॥**

ಹಿಮಾಲಯಪರ್ವತವು ರೂಪುಗೊಳ್ಳುವ ಮೊದಲೇ ಗಂಡಕೀನದಿ ಇತ್ತೆಂಬುದು ಭೂಗರ್ಭಶಾಸ್ತ್ರಜ್ಞರ ಅಭಿಪ್ರಾಯ ವಾಗಿದೆ. ಹಿಮಾಲಯದಾಚೆಗೆ, ಬಹುಶಃ ಟಿಬೆಟ್‌ನಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿದು ನೇಪಾಲವನ್ನು ದಾಟಿ, ಭಾರತಕ್ಕೆ ಬಂದು ಬಿಹಾರದ ಭವತಳಪುರದಲ್ಲಿ ಗಂಗಾನದಿಯನ್ನು ಸೇರುತ್ತದೆ. ಗಂಡಕೀನದಿಯನ್ನು ನೇಪಾಲದಲ್ಲಿ ಶಾಲಗ್ರಾಮೀ ಎಂದೂ, ಉತ್ತರ ಪ್ರದೇಶದಲ್ಲಿ ಸಪ್ತಗಂಡಕೀ ಅಥವಾ ನಾರಾಯಣೀ ಎಂದೂ ಕರೆಯುತ್ತಾರೆ. ಪ್ರಾಚೀನ ಗ್ರೀಕರು ಗಂಡಕಿಯನ್ನು ಕೊಂಡೋಟೆಟ್ಸ್ ಎಂದೂ ಕರೆಯುತ್ತಿದ್ದರು.

ವರಾಹಪುರಾಣದ ರೇವಾಖಂಡದಲ್ಲಿ ಈ ಪರ್ವತವನ್ನು 'ಶಾಲಗ್ರಾಮಗಿರಿ' ಎಂದು ಹೇಳಲಾಗಿದೆ. ಕಾರಣ ಈ ಪರ್ವತವು ಶಾಲಗ್ರಾಮಶಿಲೆಯ ಮೂಲ ಪರ್ವತವಾಗಿದೆ. ಈ ಪರ್ವತವು ಶ್ರೀಮಹಾವಿಷ್ಣುವಿನ ಪ್ರತೀಕ. ಈ ಪರ್ವತದ ಬಳಿಯೇ "ಸೋಮೇಶ್ವರಗಿರಿ" ಎಂಬ ಪರ್ವತವು ಪವಿತ್ರವಾದ ಶಿವನಾಭಶಿಲೆ ಯನ್ನು ಉತ್ಪಾದಿಸುತ್ತದೆ. ಈ ಶಿಲೆಯು ಈಶ್ವರನ ಪ್ರತೀಕವಾಗಿದೆ.

ಪುರಾಣದ ಪ್ರಕಾರ, ಆವಂತೀಪುರದಲ್ಲಿ ಹರಿಪರ್ವತದ ತಪ್ಪಲಿನಲ್ಲಿ ಚಕ್ರತೀರ್ಥವೆಂಬ ಆಳವಾದ ಕೆರೆಯೊಂದಿತ್ತು. ಆ ಕೆರೆಯಲ್ಲಿ ಶಾಲಗ್ರಾಮಶಿಲೆಯ ಉತ್ಪಾದನೆ ಆಗುತ್ತಿತ್ತು ಎಂಬ ಪ್ರತೀತಿಯಿದೆ.

ಶಾಲಗ್ರಾಮ ಎಂಬುದು ನಿಜವಾಗಿ ಗಂಡಕೀನದಿಯ ತೀರದಲ್ಲಿರುವ ಒಂದು ಗ್ರಾಮದ ಹೆಸರು. ವಾರಾಹ ಪುರಾಣದಲ್ಲಿ ವರ್ಣಿತವಾಗಿರುವಂತೆ ಶಾಲಂಕಾಯನ ಋಷಿಯ ಗುಡಿಸಲಿನಿಂದ ಶಾಲವೆಂಬ ಹೆಸರು ಬಂದಿದೆ ಎನ್ನಲಾಗಿದೆ. ಈ ಗ್ರಾಮದ ಸಮೀಪವೇ ಗಂಡಕೀ ನದಿಯಲ್ಲಿ ಶಾಲಗ್ರಾಮಗಳು ಸಿಗುತ್ತವೆ. ಶಾಲ ಎಂಬ ಮರಗಳು ಈ ಗ್ರಾಮದಲ್ಲಿ ಹೇರಳವಾಗಿವೆ (ಕನ್ನಡದಲ್ಲಿ ಛತ್ರೀಮರ/ಅಚ್ಚುಮರ). ಸಸ್ಯಶಾಸ್ತ್ರದ ಪ್ರಕಾರ ಶಾಲ ಎಂದರೆ ಗಟ್ಟಿಯಾದ ಮರ. ಇದರ ಸಸ್ಯಶಾಸ್ತ್ರೀಯ ಹೆಸರು *Shorea Robusta*. ಇವುಗಳು ನೇಪಾಲದಲ್ಲಿ ಹೇರಳವಾಗಿ ಬೆಳೆಯುತ್ತವೆ. ಆದುದರಿಂದಲೇ ಶಾಲಗ್ರಾಮಶಿಲೆ ಎಂಬ ಹೆಸರು ಈ ಕಲ್ಲಿಗೆ ಬಂತು. 'ಸಾಲಿ' ಎಂದರೆ ಆಕಾರ, ಗ್ರಾಮ ಎಂದರೆ 'ಮಾಧ್ಯಮ'. ಆದ್ದರಿಂದ ಸಾಲಿಗ್ರಾಮ ಎಂಬ ಹೆಸರೂ ಸರಿ ಎಂಬ ವಿವರಣೆ ಇದೆ.

ವರ್ಷವಿಡೀ ತುಂಬಿ ಹರಿಯುವ ಈ ಗಂಡಕೀನದಿಗೆ ಮಳೆಗಾಲದಲ್ಲಿ ಮಳೆಯ ನೀರಿನಿಂದ, ಬೇಸಗೆಯಲ್ಲಿ ಹಿಮ ಕರಗಿ ನೀರು ಹರಿದು ನದಿ ತುಂಬಿರಲು ಕಾರಣವಾಗಿರುತ್ತದೆ. ಇದರಿಂದಾಗಿ ಇದು ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಕ್ಕೆ ಉತ್ತಮ ಹಾಗೂ ಅತಿ ಉಪಯುಕ್ತ ನದಿಯಾಗಿದೆ.

ಗಂಡಕೀನದಿಯ ಉಗಮಸ್ಥಳ ಪರ್ವತವು ಆನೆಯ ಗಂಡಸ್ಥಳದಂತಿದ್ದು, ಅದೂ ವಿಷ್ಣುನಿವಾಸವಾಗಿದ್ದುದ ರಿಂದಲೇ ಈ ನದಿಗೆ ಗಂಡಕೀ ಅಥವಾ ಗಂಡಕಾನದಿ ಎಂದು ಹೆಸರು ಬಂತು. ಸಮೀಪದ ಗ್ರಾಮವು ಬೆಟ್ಟದ ಮೇಲೆ ಎತ್ತರದಲ್ಲಿದ್ದು ಅದಕ್ಕೆ ಶೈಲಗ್ರಾಮ ಎಂಬ ಹೆಸರಿತ್ತು. ಅದುವೇ ಜನರ ಆಡುಮಾತಿನಲ್ಲಿ ಶಾಲಗ್ರಾಮ ಆಯಿತೆಂದು Asiatic Research ಪ್ರಕಟನೆಯ ೧೪ನೆಯ ಸಂಪುಟ– The Ancient Geography

of India ಎಂಬ ಅಧ್ಯಯನದಲ್ಲಿ ಹೇಳಿದೆ. ಇದನ್ನು ಕೊಂಚೋಕಾಟಿಸ್ ಎಂದು ಕರೆದಿರುವುದನ್ನು ಅಲ್ಲಿ ತೋರಿಸಿದೆ. ಈ ಬೆಟ್ಟದ ಹೆಸರೇ ಇಲ್ಲಿನ ನದಿಯಲ್ಲಿ ದೊರೆಯುವ ಶಿಲೆಗಳಿಗೂ ಬಂದಿತೆಂಬುದನ್ನು ಅಲ್ಲಿ ಬರೆದಿದೆ.

ಕಾಲೀಗಂಡಕಿಯ (ಕೃಷ್ಣಗಂಡಕೀ) ಮೂಲದಲ್ಲಿ ದಾಮೋದರ ಕುಂಡವೆಂಬ ಕೊಳವಿದೆ. ಶಾಲಂಕಾಯನ ಋಷಿಯ ಕಥೆಯಲ್ಲಿ ಬರುವ ಈ ಕೊಳವು ಭಾರತ-ನೇಪಾಲ ಗಡಿಯಲ್ಲಿದೆ. ಕೆಳಗಿನ ಗಂಡಕೀ ಮುಕ್ತಿನಾಥ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಈ ಕ್ಷೇತ್ರಕ್ಕೆ ಶಾಲಗ್ರಾಮಕ್ಷೇತ್ರವೆಂದೂ ಹೆಸರಿದೆ. ಧವಲಗಿರಿ ಮತ್ತು ಅನ್ನಪೂರ್ಣ ಪರ್ವತಗಳ ನಡುವಿನ ತುಕ್ಚೆ ಎಂಬ ಸ್ಥಳದ ಸಮೀಪ ಕಾಲೀಗಂಡಕಿಯ ತೀರದಲ್ಲಿ ಶಾಲಗ್ರಾಮ ಶಿಲೆಗಳು ಹೇರಳವಾಗಿ ಸಿಗುತ್ತವೆ. ದಾಮೋದರ ಕುಂಡವು ಶೈವ ಯಾತ್ರಾಸ್ಥಳವಾಗಿದ್ದು, ಸೋಮೇಶ್ವರಕ್ಷೇತ್ರ ವೆಂದು ಪ್ರಸಿದ್ಧವಾಗಿದೆ. ನೇಪಾಲದ ರಾಜರು ಶಿವರಾತ್ರಿಯ ಸಂದರ್ಭದಲ್ಲಿ ಈ ಕ್ಷೇತ್ರಕ್ಕೆ ಹೋಗಿ ಗಂಡಕೀ ನದಿಯಿಂದ ಆರಿಸಲಾದ ಶಾಲಗ್ರಾಮಗಳನ್ನು ಸ್ವೀಕರಿಸುವ ಪದ್ಧತಿ ಹಿಂದಿನಿಂದಲೂ ನಡೆದು ಬಂದಿದೆ. ಶಾಸ್ತ್ರಾನುಸಾರವಾಗಿ ಶಾಲಗ್ರಾಮಗಳನ್ನು ಮಾರುವುದು ನಿಷಿದ್ಧ. ಆದರೆ ಈ ಶಾಲಗ್ರಾಮಗಳು ಟಿಬೆಟಿಯನ ರಿಗೆ ಹಾಗೂ ನೇಪಾಲಿಗಳಿಗೆ ಆದಾಯದ ಮುಖ್ಯ ಮೂಲವಾಗಿದೆ. ನೇಪಾಲ ಸರಕಾರವು ಶಾಲಗ್ರಾಮಗಳು ಲಭಿಸುವ ನಾಲ್ಕು ಸ್ಥಳಗಳನ್ನು ಖಾಸಗಿ ಉದ್ಯಮಿಗಳಿಗೆ ಗುತ್ತಿಗೆಗೆ ನೀಡುತ್ತದೆ. ಗುತ್ತಿಗೆದಾರರು ತಾವು ಸಂಗ್ರಹಿಸಿದ ಶಾಲಗ್ರಾಮಗಳನ್ನು ಮೊದಲು ಅರಮನೆಗೆ ತಂದು ಒಪ್ಪಿಸುತ್ತಿದ್ದರು. ಈ ರಾಜಮನೆತನವು ಅತ್ಯಮೂಲ್ಯ ಮತ್ತು ಶ್ರೇಷ್ಠ ಶಾಲಗ್ರಾಮಗಳನ್ನು ಯಾವುದೆಂದು ತೀರ್ಮಾನಿಸಿ ತಮ್ಮಲ್ಲಿಯೇ ಇರಿಸಿಕೊಂಡು, ಮಿಕ್ಕವುಗಳನ್ನು ಗುತ್ತಿಗೆದಾರರಿಗೆ ಬಿಟ್ಟುಕೊಡುವ ಅಧಿಕಾರವಿತ್ತು. ಉತ್ತಮ ಮತ್ತು ಬಂಗಾರ ಇರುವ ಶಾಲಗ್ರಾಮಗಳನ್ನು ರಾಜರು ತಮ್ಮ ಖಾಸಗೀ ಖಜಾನೆಯಲ್ಲಿಟ್ಟು, ಆಪ್ತರಿಗೆ, ಮುಖ್ಯ ಅತಿಥಿಗಳಿಗೆ, ಶ್ರೋತ್ರಿಯ ಬ್ರಾಹ್ಮಣರಿಗೆ, ಯಾತ್ರಾರ್ಥಿಗಳಾದ ಭಾರತೀಯ ಮಠಾಧೀಶರಿಗೆ, ಯತಿಗಳಿಗೆ ದಾನ ಮಾಡುತ್ತಾರೆ.

ಆ ಬಗೆಯ ಭಾಗ್ಯ ಪಡೆದವರಲ್ಲಿ ನಮ್ಮ ಅಷ್ಟಮಠಾಧಿಪತಿಗಳಲ್ಲಿ ಒಬ್ಬರಾದ ಶ್ರೀಶ್ರೀಶ್ರೀ ಸುಗುಣೇಂದ್ರ ತೀರ್ಥ ಶ್ರೀಪಾದಂಗಳವರು, ಪುತ್ತಿಗೆ ಮಠ ಉಡುಪಿ ಬಹುಮುಖ್ಯರು. ಮಾಜಿ ರಾಷ್ಟ್ರಪತಿ ದಿ। ಶಂಕರ ದಯಾಳ್ ಶರ್ಮಾ ಅವರೂ ಸಹ. ಅವರ ಬಳಿ ಶಾಲಗ್ರಾಮ ಸಂಗ್ರಹವೇ ಇತ್ತು. ಇವರು ಶ್ರೀ ಅಹೋಬಲ ಮಠದ ೪೪ನೇ ಪಟ್ಟದ ಜೀಯರ್ ಸ್ವಾಮಿಗಳ ದಿವ್ಯಹಸ್ತದಿಂದ ಮುದ್ರಾಧಾರಣ ಮಾಡಿಸಿಕೊಂಡು, ಈಗಿನ ಶ್ರೀಮತ್ ಆಂಡವನ್ ಸ್ವಾಮಿಗಳ ಪಾದದಲ್ಲಿ ಪ್ರಪತ್ತಿ ಆಚರಿಸಿದ ಮಹಾ ವ್ಯಕ್ತಿಯವರು. ಈ ಗುತ್ತಿಗೆದಾರರು ಶಾಲಗ್ರಾಮಗಳನ್ನು ಸಾಧಾರಣ ಬೆಲೆಗೆ ಮಾರುತ್ತಾರೆ. ಕೆಲವು ಶಾಲಗ್ರಾಮಗಳಂತೂ ಐದು ಲಕ್ಷ ನೇಪಾಳಿ ರೂಪಾಯಿಗಳಿಗೆ ಮಾರಾಟವಾಗುತ್ತವೆ. ಕೇವಲ ನದಿಯ ಬುಡದಲ್ಲಿ ಸಿಗುವಂತಹ ಶಾಲಗ್ರಾಮಗಳಲ್ಲದೇ, ಹಿಮವತ್ಪರ್ವತದಲ್ಲಿ ಮತ್ತು ಭೂಗರ್ಭಗಳಲ್ಲಿಯೂ ಸಹ ಶಾಲಗ್ರಾಮಗಳು ಸಿಗುತ್ತವೆ. ಇಂತಹ ಶಾಲಗ್ರಾಮ ಗಳು ಬಲು ಅಪೂರ್ವ.

ಬಹಳ ಪವಿತ್ರವಾದ ಹಾಗೂ ಅಮೂಲ್ಯವಾದ ಈ ಶಾಲಗ್ರಾಮಗಳಿಗೆ ಬಹಳ ಬೇಡಿಕೆ ಇರುವ ಕಾರಣ ಅದರ ಬೆಲೆ ಜಾಸ್ತಿಯಾಗಿರುವುದರಿಂದ ಕೆಲವರು ನಕಲಿ ಶಾಲಗ್ರಾಮಗಳನ್ನೂ ತಯಾರಿಸುತ್ತಾರೆ. ಇಂತಹವರು ಹೊಳೆಗಳಲ್ಲಿ ಸಿಗುವ ಸಾಮಾನ್ಯ ಕಪ್ಪು ಕಲ್ಲುಗಳನ್ನು ತಂದು ಅವುಗಳಿಗೆ ತೂತು ಕೊರೆದು, ಕೃತಕವದನವನ್ನು ನಿರ್ಮಿಸಿ ಬಳಪದ ಕಲ್ಲಿನ ತೆಳುವಾದ ಚೂರುಗಳಲ್ಲಿ ಚಕ್ರಗಳನ್ನು ಕೆತ್ತಿ ವದನಕ್ಕೆ ಅಂಟಿಸಿಬಿಡುತ್ತಾರೆ. ನಿಜವಾದ ಶಾಲಗ್ರಾಮ ಯಾವುದು, ನಕಲಿ ಶಾಲಗ್ರಾಮ ಯಾವುದು ಎಂದು ಪಕ್ಕನೆ ಗುರುತಿಸಲು ಸಾಧ್ಯವಾಗದಷ್ಟು ನಾಜೂಕಾಗಿ ಕೃತಕ ಶಾಲಗ್ರಾಮಗಳನ್ನು ಸಿದ್ಧಪಡಿಸಿ, ಶಾಲಗ್ರಾಮದ ಬಗ್ಗೆ ಜ್ಞಾನ ಇಲ್ಲದವರಿಂದ ಭಾರೀ

ಮೊತ್ತವನ್ನು ಗಳಿಸಿಕೊಂಡು ಮೋಸ ಮಾಡುತ್ತಾರೆ. ಇಂತಹ ಕೃತಕ ಶಾಲಗ್ರಾಮಗಳು ಕೆಲವೇ ವರ್ಷಗಳಲ್ಲಿ ಅಭಿಷೇಕಜಲದಿಂದ [ಬಳಪದ ಕಪ್ಪು ಮತ್ತು ಇತರ ಕಪ್ಪು ಶಿಲೆಗಳಲ್ಲಿ] ಕರಗಿ ಚಕ್ರ ಮಾಯವಾದಾಗಲೇ ಮೋಸ ಹೋಗಿದ್ದೇವೆ ಎಂಬ ಅರಿವಿಗೆ ಬರುತ್ತಾರೆ. ಆದರೆ ಅನುಭವೀ ಉಪಾಸಕರು ಒಂದೇ ನೋಟಕ್ಕೆ ತಿಳಿದುಬಿಡುತ್ತಾರೆ. ಕೆಲವು ಬಾರಿ ಅನುಭವಸ್ಥರನ್ನೂ ಸಹ ಮೋಸಗೊಳಿಸುವಂತಹ ಸಂದರ್ಭಗಳಿರುತ್ತದೆ. ಶಾಲಗ್ರಾಮಗಳು ನಿಜವಾದುದೇ ಅಥವಾ ನಕಲಿಯೇ ಎಂದು ಪರೀಕ್ಷಿಸಿ ತಿಳಿದುಕೊಳ್ಳುವ ವಿಧಾನವಿದೆ. ಈ ಬಗ್ಗೆ '**ಶಾಲಗ್ರಾಮ ಪರೀಕ್ಷಾ**' ಎಂಬ ಗ್ರಂಥ ರಚಿಸಿದ್ದಾರೆ. ಸ್ಕಂದಪುರಾಣದ ಪ್ರಕಾರ ಪರೀಕ್ಷೆ ಮಾಡುವ ಒಂದು ವಿಧಾನ ಈ ರೀತಿಯಿದೆಃ

ಶಾಲಗ್ರಾಮಶಿಲೆಯನ್ನು ತೆಗೆದುಕೊಂಡು, ಒಂದು ಸಣ್ಣ ಸುತ್ತಿಗೆಯಿಂದ ಎಲ್ಲ ಕಡೆಗಳಿಗೂ ಮೆಲ್ಲನೆ ಹೊಡೆಯಬೇಕು ಅಥವಾ ಬೆರಳುಗಳಿಂದ ಜೋರಾಗಿ ಕುಟ್ಟಬೇಕು. ಒಂದು ವೇಳೆ ಶಿಲೆಯು ಕೃತಕವಾಗಿದ್ದಲ್ಲಿ ಶಿಲೆಯಲ್ಲಿ ತೂತು ಕೊರೆದಾಗ ಅಥವಾ ಚಕ್ರದ ಗುರುತನ್ನು ಹಾಕುವಾಗ ಉಂಟಾದ ಪುಡಿಗಳು ಈ ಶಿಲೆಯೊಳಗೆ ಇದ್ದೇ ಇರುತ್ತದೆ. ಈ ಶಿಲೆಯನ್ನು ಸುತ್ತಿಗೆಯಿಂದ ಹೊಡೆದಾಗ ಪುಡಿಗಳು ಕೆಳಗೆ ಉದುರುತ್ತವೆ. ಹೀಗೇನಾದರೂ ಕಂಡುಬಂದಲ್ಲಿ ಈ ಶಿಲೆಯು ಖೋಟಾ ಶಾಲಗ್ರಾಮ.

ಇನ್ನೊಂದು ಪರೀಕ್ಷಾ ವಿಧಾನ ಈ ರೀತಿ ಇದೆ (ಲೇಖಕನು ಸ್ವತಃ ಪರೀಕ್ಷಿಸಿದ್ದಾನೆ):

**ಕ್ಷೀರೇ ವಾ ತಂಡುಲೇ ವಾऽಪಿ ಶಾಲಗ್ರಾಮಂ ನಿವೇಶಯೇತ್ ।**
**ದೃಷ್ಟ್ವಾಧಿಕ್ಯಂ ತಯೋಃ ಕಿಂಚಿದ್‌ಗೃಹ್ಣೀಯಾದ್‌ವೃದ್ಧಿಮಾನ್ನರಃ ॥**

ಶಾಲಗ್ರಾಮವನ್ನು ತೆಗೆದುಕೊಂಡು ಅದರಷ್ಟೇ ಭಾರದ ಅಕ್ಕಿಯಲ್ಲಿ ಅಥವಾ ಬೋಗುಣಿಯಲ್ಲಿಟ್ಟ ಹಾಲಿನಲ್ಲಿ ಹಾಕಿ ಒಂದು ರಾತ್ರಿ ಇಡಬೇಕು. (ಅಕ್ಕಿಯಾದರೆ ೨೪ ದಿನ/೪೮ ದಿನ ಮಾಡಬಹುದು.) ಆ ಶಾಲಗ್ರಾಮವು ನಿಜವಾದುದೇ ಆಗಿದ್ದಲ್ಲಿ ಅಕ್ಕಿಯ ತೂಕ/ಹಾಲಿನ ಪ್ರಮಾಣ (ಒಂದು ದಿನ ಮಾತ್ರ) ಅದರ ೨ರಷ್ಟು ಹೆಚ್ಚಾಗಿರುತ್ತದೆ ಅಥವಾ ಕೊಂಚವಾದರೂ ಜಾಸ್ತಿಯಾಗಿರುತ್ತದೆ. ಶಾಲಗ್ರಾಮವು ಭಾಗ್ಯಕಾರಕವೋ ಅಥವಾ ಹಾನಿಕಾರಕವೋ ಎಂಬುದನ್ನು ತಿಳಿದುಕೊಳ್ಳಲು ಈ ಪರೀಕ್ಷೆಯನ್ನು ಮಾಡುವುದಿದೆ. ಅಕ್ಕಿ ಅಥವಾ ಹಾಲು ಶಾಲಗ್ರಾಮದ ಪ್ರಮಾಣಕ್ಕಿಂತ ಜಾಸ್ತಿಯಾಗಿ ಕಂಡುಬಂದಲ್ಲಿ ಅಂತಹ ಶಾಲಗ್ರಾಮವು ಅದೃಷ್ಟಕಾರಕ. ಒಂದು ವೇಳೆ ಅದರ ತೂಕದಷ್ಟೇ ಇದ್ದರೆ ಅದರಿಂದ ಹಾನಿಯಾಗುವುದಿಲ್ಲ. ಆದರೆ ಅಕ್ಕಿ ಅಥವಾ ಹಾಲು ಶಾಲಗ್ರಾಮದ ತೂಕಕ್ಕಿಂತಲೂ ಕಡಮೆಯಾದಲ್ಲಿ ಅಂತಹ ಶಾಲಗ್ರಾಮವು ವಿಪತ್ಕಾರಕ. ಅವುಗಳನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದು ಎನ್ನುತ್ತಾರೆ.

**ಶಾಲಗ್ರಾಮ ಶಿಲಾಯಾಸ್ತು ಮೂಲ್ಯಮುದ್ಘಾಟಯನ್ನರಃ ।**
**ವಿಕ್ರೇತಾ ಚಾನುಮಂತಾ ಚ ಯಃ ಪರೀಕ್ಷ್ಯಾನುಮೋದಯೇತ್ ॥**

**ಸರ್ವೇ ತೇ ನರಕಂ ಯಾಂತಿ ಯಾವದಾಭೂತಸಂಪ್ಲವಮ್ ।**
**ಅತಶ್ಚ ವರ್ಜಯೇದ್ವಿದ್ವಾನ್ ಚಕ್ರಸ್ಯ ಕ್ರಯವಿಕ್ರಯಮ್ ॥**

ಶಾಲಗ್ರಾಮವನ್ನು ಕ್ರಯ-ವಿಕ್ರಯ ಮಾಡಬಾರದು. ಕಾಣಿಕೆ ಕೊಟ್ಟು ತೆಗೆದುಕೊಳ್ಳಬೇಕು.

ಶಾಲಗ್ರಾಮಗಳನ್ನು ಬೆಲೆಗೆ ಕೊಳ್ಳಬಾರದು, ಮಾರಬಾರದು ಎಂದು ಹಿರಿಯರು ಹೇಳುವುದು ಈ ವ್ಯಾವಹಾರಿಕ ಕಾರಣಗಳಿಗಾಗಿಯೇ. ಅತ್ಯುತ್ತಮ ಶಾಲಗ್ರಾಮಗಳು ದೊರೆಯದೇ, ದಾನ ಸಿಗದೆ, ಬೇಕೇ ಬೇಕೆಂಬ ಹಂಬಲವಾದಾಗ, ಬೇರೆ ದಾರಿಯಿಲ್ಲದೆ ಕೊಂಡು ತರುವುದರಲ್ಲಿ ತಪ್ಪಿಲ್ಲ.

# 3. ಶಾಲಗ್ರಾಮಶಿಲೆಗಳ ಮಹತ್ತ್ವ

ಸ್ಕಂದಪುರಾಣದಲ್ಲಿ ಹೇಳಿದ ಪ್ರಕಾರ– ಯಾವನು ಶಾಲಗ್ರಾಮಕ್ಕೆ ಹಾಕಿದ ಚರಣಾಮೃತ(ತೀರ್ಥ) ಸೇವನೆ ಮಾಡು ವನೋ, ಅಂತಹವನು ಪಂಚಗವ್ಯವನ್ನಾಗಲಿ ಅಥವಾ ಸಾವಿರಾರು ತೀರ್ಥಯಾತ್ರಾಸ್ಥಳದ ದರ್ಶನ ಮಾಡುವ ಆವಶ್ಯಕತೆ ಇರುವುದಿಲ್ಲ. ಹಾಗೆಯೇ, ಈಶ್ವರನೂ ಪಾರ್ವತಿಗೆ ಹೇಳುತ್ತಾನೆ. ಯಾವನು ಶಾಲಗ್ರಾಮದ ಚರಣಾಮೃತ ಸೇವನೆ ಮಾಡುತ್ತಾನೋ ಅಂತಹವನು ಬ್ರಹ್ಮಹತ್ಯಾದೋಷದಿಂದಲೂ ಪಾರಾಗುತ್ತಾನೆ.

ಶಾಲಗ್ರಾಮೋದ್ಭವಶಿಲಾ ನಿರ್ಮಿತಂ ಯತ್ರ ಬಿಂಬಕಮ್ ।
ತಸ್ಯ ದರ್ಶನಮಾತ್ರೇಣ ಸರ್ವಾನ್ಕಾಮಾನವಾಪ್ನುಯಾತ್ ॥

ಶಾಲಗ್ರಾಮಶಿಲೆಯಿಂದ ನಿರ್ಮಿತವಾದ ಪ್ರತಿಮೆ ಎಲ್ಲಿ ಇದೆಯೋ ಅದರ ದರ್ಶನಮಾತ್ರದಿಂದ ಪುರುಷನು ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾನೆ.

ಶಾಲಗ್ರಾಮವನ್ನು ಪೂಜಿಸುವ ಹಲವಾರು ವಿಧಿವಿಧಾನಗಳಿವೆ. ಆದರೆ ಯಾವ ರೀತಿಯಾಗಿ ಪೂಜಿಸಿದರೂ ಶಾಲಗ್ರಾಮದ ಅದಿ ಹಾಗೂ ಮೇಲೆ ತುಳಸೀದಳಗಳನ್ನಿಡುವುದು ಅತ್ಯವಶ್ಯ. ತುಳಸೀ ಹಾಗೂ ಶಾಲಗ್ರಾಮ –ಇವರೆಡೂ ಇಲ್ಲದೆ ತೀರ್ಥವಾಗುವುದಿಲ್ಲ. ತುಳಸೀ ಮತ್ತು ಶಾಲಗ್ರಾಮಕ್ಕೆ ಅವಿನಾಭಾವ ಸಂಬಂಧವಿದೆ. ತುಳಸಿಯ ಸ್ಪರ್ಶದಿಂದ ಶಾಲಗ್ರಾಮದಲ್ಲಿ ದೇವತಾಸಾನ್ನಿಧ್ಯ ವೃದ್ಧಿಯಾಗುತ್ತದೆ.

ಯಾವುದೇ ಧಾರ್ಮಿಕ ಕಾರ್ಯಕ್ರಮಗಳಲ್ಲಿ, ಗೃಹಪ್ರವೇಶ, ಮದುವೆ ಸಮಾರಂಭ, ದೇವಪಿತೃಕಾರ್ಯ ಗಳಲ್ಲಿ ಗೋ, ಭೂ, ಹಿರಣ್ಯಾದಿ ದಾನ ನೀಡುವಲ್ಲಿ ಈ ಶಾಲಗ್ರಾಮಗಳನ್ನು ಪೂಜಿಸಿ, ಅದರ ಸಮ್ಮುಖದಲ್ಲಿ ಮಾಡುವ ಕ್ರಮವಿದೆ.

ಜಪ್ತಂ ಹುತಂ ತಥಾ ದತ್ತಮರ್ಚನಂ ಚ ತಥಾ ಕ್ರಿಯಾ ।
ಶಾಲಗ್ರಾಮ ಸಮಾಯುಕ್ತಂ ಸರ್ವಕೋಟಿ ಗುಣಂ ಭವೇತ್ ॥

ಬ್ರಹ್ಮವೈವರ್ತಪುರಾಣದ ಪ್ರಕೃತಿಸ್ಕಂದ – ೧೯ರಲ್ಲಿ ಹೇಳಿದ ಪ್ರಕಾರ, ಶ್ರಾದ್ಧಾದಿ ಕರ್ಮಾಂಗಗಳೆಲ್ಲವನ್ನೂ ಮಾಡುವಾಗ ಶಾಲಗ್ರಾಮದ ಎದುರು ಕುಳಿತುಕೊಂಡು ಶಾಲಗ್ರಾಮವನ್ನು ಪೂಜಿಸಿ ಮಾಡಬೇಕು. ಈ ರೀತಿಯಾಗಿ ಮಾಡುವುದರಿಂದ ಸತ್ತವರ ಆತ್ಮ ವಿಷ್ಣುಪರಮಾತ್ಮನ ಬಳಿಗೆ ಸೇರುತ್ತದೆ.

ಶಾಲಗ್ರಾಮಶಿಲಾಯಾಂ ತು ಯಃ ಶ್ರಾದ್ಧಂ ಕುರುತೇ ನರಃ ।
ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಶತಂ ದಿವಿ ॥

ಶಾಲಗ್ರಾಮಶಿಲಾಗ್ರೇ ಯಃ ಶ್ರಾದ್ಧಂ ದದ್ಯಾದ್ವಿಚಕ್ಷಣಃ ।
ಪಿತರಸ್ತಸ್ಯ ತೃಪ್ಯಂತಿ ಮುಕ್ತಿಂ ಯಾಂತಿ ನ ಸಂಶಯಃ ॥

ಆಶಂಸತೇ ಸದಾ ದೇವಾಃ ಪಿತರಸ್ಸರ್ವ ಏವ ಹಿ ।
ಯಮಿಷ್ಟ್ವಾದೌ ಮಹಾವಿಷ್ಣುಂ ಪಶ್ಚಾತ್ತೇನ ಪಿತೃನ್ಸುರಾನ್ ।
ಯಸ್ತರ್ಪಯೇತ್ಸ ವೈ ಪುತ್ರಃ ಸಭಾರ್ಯಃ ಸ ತು ಜೀವತು ॥

ಪಿತೃಶೇಷಂ ತು ಯೋ ದದ್ಯಾದ್ಧರಯೇ ಪರಮಾತ್ಮನೇ ।
ರೇತೋಧಾಃ ಪಿತರಸ್ತಸ್ಯ ಭವಂತಿ ಕ್ಲೇಶಭಾಗಿನಃ ॥

ಗಾರುಡೇ ॥ ಯಃ ಶ್ರಾದ್ಧಕಾಲೇ ಹರಿಭುಕ್ತಶೇಷಂ ದದಾತಿ ಭಕ್ತ್ಯಾ ಪಿತೃದೇವತಾನಾಮ್ ।
ತೇನೈವ ಪಿಂಡೈಃ ಸುತಿಲೈರ್ವಿಮಿಶ್ರೈರಾಕಲ್ಪಕೋಟ್ಯಃ ಪಿತರಃ ಸುತೃಪ್ತಾಃ ॥

– ಸರ್ವಮೂಲಗ್ರಂಥಗಳು

–ಶಾಲಗ್ರಾಮ ಶಿಲಾಪರ್ವತದಲ್ಲಿ (ಶಿಲೆಯ ಸಮೀಪ) ಶ್ರಾದ್ಧ ಮಾಡಿದವನ ಪಿತೃಗಳು ೧೦೦ ಕಲ್ಪಗಳ ಪರ್ಯಂತ ಸ್ವರ್ಗದಲ್ಲಿ ಸಂತೋಷದಿಂದ ಇರುವರು.

–ತನ್ನ ಮನೆಯಲ್ಲಿ ಪೂಜಿತವಾದ ಶಾಲಗ್ರಾಮದ ಸಮೀಪದಲ್ಲಿ ಶ್ರಾದ್ಧಗಳನ್ನು ಆಚರಿಸಿದವನ ಪಿತೃಗಳು ತೃಪ್ತರೂ, ಸಂಸಾರದಿಂದ ಮುಕ್ತರೂ ಆಗುವರು. ಇದು ನಿಶ್ಚಿತ.

–ಮೊದಲು ಶ್ರೀಹರಿಯನ್ನು ಪೂಜಿಸಿ, ನೈವೇದ್ಯಶೇಷದಿಂದ ದೇವತೆಗಳನ್ನೂ, ಪಿತೃಗಳನ್ನೂ ಯಾರು ತೃಪ್ತಿ ಪಡಿಸುವನೋ, ಅವನೇ ಪುತ್ರನು. ಆತನು ಹೆಂಡತಿ ಮಕ್ಕಳೊಂದಿಗೆ ಸುಖವಾಗಿ ಬಾಳಲಿ ಎಂದು ಯಾವಾಗಲೂ ದೇವತೆಗಳೂ, ಪಿತೃಗಳೂ ಹರಸುವರು.

–ಗಾರುಡದಲ್ಲಿ: ಶ್ರಾದ್ಧಕಾಲದಲ್ಲಿ ಪಿತೃದೇವತೆಗಳಿಗೆ ಹರಿನೈವೇದ್ಯಶೇಷವನ್ನು ಭಕ್ತಿಯಿಂದ ಕೊಡುವವನ ಪಿತೃಗಳು ಅವನು ಕೊಟ್ಟ ತಿಲ, ದರ್ಭಾದಿಗಳಿಂದ ಕೂಡಿದ ಆ ಪಿಂಡಗಳಿಂದ ಕೋಟಿಕಲ್ಪದವರೆಗೆ ಚೆನ್ನಾಗಿ ತೃಪ್ತರಾಗುವರು.

ಭಾವಿಸಮೀರ ಶ್ರೀಮದ್ವಾದಿರಾಜಗುರುಸಾರ್ವಭೌಮ ವಿರಚಿತ 'ತೀರ್ಥಪ್ರಬಂಧ'ದ ಉತ್ತರ ಪ್ರಬಂಧ ಭಾಗದಲ್ಲಿ– 'ಪುತ್ರನು ತಂದೆತಾಯಿಗಳು ಬದುಕಿರುವಾಗ ತಂದೆತಾಯಿಗಳ ಆಜ್ಞೆಯನ್ನು ಪಾಲಿಸಬೇಕು; ಸತ್ತ ಅನಂತರ ಸಾಂವತ್ಸರಿಕ ಶ್ರಾದ್ಧ ಮಾಡಿ ಭೂರಿಭೋಜನ ಮಾಡಿಸಬೇಕು; ಗಯೆಯಲ್ಲಿ ಪಿಂಡಪ್ರದಾನ ಮಾಡಬೇಕು –ಈ ಮೂರರಿಂದಲೇ ಮಗನಿಗೆ ಪುತ್ರತ್ವ ಉಂಟಾಗುವುದು' ಎಂದಿದ್ದಾರೆ (ವಾಯುಪುರಾಣ–ಗಯಾ ಮಾಹಾತ್ಮ್ಯ). ಗಯೆಯಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಅಕ್ಷಯತೃಪ್ತಿ ಉಂಟಾಗುತ್ತದೆ. ಇಲ್ಲಿ ಮೂರು ಕಡೆ ಪಿಂಡ ಪ್ರದಾನ ಮಾಡಬೇಕು– ಫಲ್ಗುಣೀ ಎಂಬ ಪವಿತ್ರನದಿಯ ತಟದಲ್ಲಿ ಶ್ರೀರಾಮನು ತನ್ನ ತಂದೆ ದಶರಥ ಮಹಾರಾಜನು ತೀರಿಹೋದಾಗ ೧೦೮ ಶಾಲಗ್ರಾಮಗಳನ್ನಿರಿಸಿ ಅದರ ಮುಂಭಾಗದಲ್ಲಿ ಪಿತೃಪಿಂಡಪ್ರದಾನ ಮಾಡುತ್ತಾನೆ. ಅಲ್ಲಿಯೇ ಮೊದಲ ಪಿಂಡಪ್ರದಾನ. ಅನಂತರ ವಿಷ್ಣುಪಾದದ ಮೇಲೆ. ತದನಂತರ ಅಕ್ಷಯ ವಟವೃಕ್ಷದ ಕೆಳಗೆ. ಇಲ್ಲಿ ಪಿಂಡಪ್ರದಾನ ಮಾಡಿತೆಂದಾದಲ್ಲಿ ಪಿತೃಗಳಿಗೆ ವೈಕುಂಠಪ್ರಾಪ್ತಿಯಾಗುವುದು ಹಾಗೂ ಅವರಿಗೆ ಪುನರ್ಜನ್ಮ ಉಂಟಾಗುವುದಿಲ್ಲ. ಆದ್ದರಿಂದಲೇ ಅಗ್ನಿ, ವಾಯು, ಪದ್ಮಪುರಾಣಗಳಲ್ಲಿ '**ಏಷ್ಟವ್ಯಾಃ ಬಹವಃ ಪುತ್ರಾಃ ಯದ್ಯೇಕೋऽಪಿ ಗಯಾಂ ವ್ರಜೇತ್**' ಅಂದರೆ 'ಅನೇಕ ಮಕ್ಕಳಿದ್ದರೆ ಅವರಲ್ಲಿ ಯಾವನಾದರೊಬ್ಬನು ಗಯೆಗೆ ಹೋಗಿಯಾನು. ಆದ್ದರಿಂದ ಅನೇಕ ಮಕ್ಕಳು ಬೇಕೆಂದು ಆಶಿಸಬೇಕು' ಎಂದಿದ್ದಾರೆ.

**ಪದ್ಮಪುರಾಣದ ಉತ್ತರಕಾಂಡ** – ೧೨೭ರಲ್ಲಿ ಹೇಳಿದ ಪ್ರಕಾರ ಯಾವ ಮರಣಾಸನ್ನವ್ಯಕ್ತಿ ಮರಣ ಸಂದರ್ಭದಲ್ಲಿ ಶಾಲಗ್ರಾಮತೀರ್ಥ ಸೇವಿಸುತ್ತಾನೋ ಅಂತಹವನ ಪಾಪಗಳೆಲ್ಲವೂ ದೂರವಾಗಿ, ವಿಷ್ಣು ಸಾಯುಜ್ಯವನ್ನು ಪಡೆಯುತ್ತಾನೆ. ಒಂದು ವೇಳೆ ಶಾಲಗ್ರಾಮದ ಎದುರೇ ಮರಣವನ್ನಪ್ಪಿದಲ್ಲಿ, ಸಾಕ್ಷಾತ್ ವಿಷ್ಣುವೇ ಶಾಲಗ್ರಾಮದಲ್ಲಿ ಸನ್ನಿಹಿತನಾಗಿರುವುದರಿಂದ ವಿಷ್ಣುಲೋಕವನ್ನು ಸೇರಿಕೊಳ್ಳುತ್ತಾನೆ ಎನ್ನಲಾಗಿದೆ.

**ಪುರಾಣಗಳು** ಹೇಳುವ ಪ್ರಕಾರ ಯಾವನು ತಾನು ಮಾಡಿರುವ ಪಾಪಗಳ ಪ್ರಾಯಶ್ಚಿತ್ತಕ್ಕಾಗಿ ದಾನ ಧರ್ಮಾದಿಗಳು, ಉಪವಾಸವ್ರತವನ್ನು ಮಾಡುವನೋ ಅಂತಹವನ ಪಾಪಗಳು (ಪರಿಹಾರವಾಗುವಂತೆ) ಶಾಲಗ್ರಾಮಗಳನ್ನು ತೊಳೆದ ನೀರನ್ನು ಕುಡಿಯುವುದರಿಂದಲೂ ಪಾಪಗಳು ನಾಶವಾಗಿ ಆತ ಪುಣ್ಯವನ್ನು ಗಳಿಸುತ್ತಾನೆ.

ಸೂರ್ಯ ಅಥವಾ ಚಂದ್ರಗ್ರಹಣಗಳ ಸಂದರ್ಭದಲ್ಲಿ ಜಪ, ಪೂಜೆ, ದಾನ ಮೊದಲಾದ ಕರ್ಮಗಳನ್ನು ಶಾಲಗ್ರಾಮದ ಎದುರು ಕುಳಿತು ಮಾಡುವುದರಿಂದ ಆ ಜಪ, ಪೂಜಾದಿ ಸುಕೃತ ಗುಣ ಕೋಟಿಫಲವನ್ನು ನೀಡುತ್ತವೆ. ಹಿಂದಿನ ಕಾಲದಲ್ಲಿ ನ್ಯಾಯಾಲಯದಲ್ಲಿ ಸಾಕ್ಷಿ ಹೇಳುವವರ ಕೈಯಲ್ಲಿ ಶಾಲಗ್ರಾಮಗಳನ್ನು ನೀಡಿ, ಸರಿಯಾದ ಸಾಕ್ಷಿ ನುಡಿಯುವಂತೆ ಸಾಕ್ಷಿಗಳಿಂದ ನುಡಿಸುವುದು ಸಂಪ್ರದಾಯವಾಗಿತ್ತು. ಯಾವನು ಶಾಲಗ್ರಾಮವನ್ನು ಹಿಡಿದುಕೊಂಡು ಸುಳ್ಳನ್ನು ಹೇಳುವನೋ, ಅಂತಹವನು ಜೀವನಪರ್ಯಂತ ಕಷ್ಟವನ್ನು ಅನುಭವಿಸುತ್ತಾನೆ ಎಂಬ ನಂಬಿಕೆಯಿತ್ತು.

**ಬ್ರಹ್ಮವೈವರ್ತಪುರಾಣದ ಪ್ರಕಾರ** ಯಾವನು ಮತ್ತೊಬ್ಬರಿಗೆ ಶಾಲಗ್ರಾಮವನ್ನು ಹಿಡಿದುಕೊಂಡು ಮಾತು ಕೊಡುತ್ತಾನೋ, ಅದು ಅವರಿಬ್ಬರಿಗೂ ಅನ್ವಯವಾಗುತ್ತಿತ್ತು. ಅಥವಾ ಅದಕ್ಕೆ ಶರ್ತಬದ್ಧವಾಗಿ ನಡೆಯಬೇಕಾಗಿತ್ತು. ಮಾತು ನೀಡಿದವರಲ್ಲಿ ಯಾವೊಬ್ಬನಾದರೂ ತಪ್ಪಿ ನಡೆದಲ್ಲಿ ಅಂತಹವನು ನರಕ ಯಾತನೆ/ ದೀರ್ಘ ನರಕದಲ್ಲಿ ಕಷ್ಟವನ್ನು ಅನುಭವಿಸುತ್ತಾನೆ. ಶಾಲಗ್ರಾಮವನ್ನು ನೋಡಿದ ಮಾತ್ರದಿಂದಲೇ ನೋಡು ವವನ ಪಾಪಗಳೆಲ್ಲವೂ ನಾಶಗೊಳ್ಳುತ್ತವೆ. ಹೇಗೆ ಸಿಂಹವನ್ನು ಕಂಡೊಡನೆಯೇ ಜಿಂಕೆಗಳೆಲ್ಲವೂ ಓಡಿಹೋಗುವವೋ ಅಂತೆಯೇ ಶಾಲಗ್ರಾಮಶಿಲೆಯನ್ನು ನೋಡಿದೊಡನೆ ಮನುಷ್ಯನ ಪಾಪಗಳೆಲ್ಲವೂ ಓಡಿಹೋಗುತ್ತವೆ. ಇದು ಶಾಸ್ತ್ರಲಿಖಿತ. ಯಾವನು ಭಕ್ತಿ ಹಾಗೂ ಶ್ರದ್ಧೆಯಿಂದ ಶಾಲಗ್ರಾಮವನ್ನು ಪೂಜಿಸು ತ್ತಾನೋ ಅವನು ಖಂಡಿತವಾಗಿ ಮುಕ್ತಿಯನ್ನು ಹೊಂದುತ್ತಾನೆ. ಯಾವನು ಶಾಲಗ್ರಾಮವನ್ನು ಪೂಜಿಸು ತ್ತಾನೋ ಅವನು ಸಾವಿನ ಭಯದಿಂದ ಮುಕ್ತನಾಗುತ್ತಾನೆ. ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಎಳನೀರಿನಿಂದ ಅಭಿಷೇಕ ಮಾಡಿ ಪೂಜಿಸಿದರೆ ಹೇಳಲಾಗದಷ್ಟು ಲಾಭ ಗಳಿಸುವರು.

**ಬ್ರಹ್ಮನಾರದೀಯ ಪುರಾಣ** ಹೇಳುವ ಪ್ರಕಾರ ಯಾರು ಶಾಲಗ್ರಾಮಕ್ಕೆ ತುಳಸೀದಳವನ್ನಿಟ್ಟು ಪೂಜೆ ಮಾಡುವುದಿಲ್ಲವೋ ಅವನ ಮನೆಯು ಶ್ಮಶಾನಕ್ಕೆ ಸಮಾನ. ತುಳಸೀದಳದ ಮಹತ್ತ್ವವು ಅವರ್ಣನೀಯ ವಾದದ್ದು. ಸ್ಕಂದಪುರಾಣ ಹೇಳುವ ಪ್ರಕಾರ ಯಾರು ತುಳಸೀದಳವನ್ನು ಶಾಲಗ್ರಾಮದ ಮೇಲಿಟ್ಟು ಪೂಜಿಸುತ್ತಾರೋ ಅವರು ನಿಜಕ್ಕೂ ಅದೃಷ್ಟಶಾಲಿಗಳಾಗುತ್ತಾರೆ.

**ಕೋಟಿದ್ವಾದಶಕೈರ್ಲಿಂಗೈಃ ಪೂಜಿತೈಃ ಸ್ವರ್ಣಪಂಕಜೈಃ ।**
**ಯತ್ಸ್ಯಾದ್ದ್ವಾದಶಕಲ್ಪೇಷು ದಿನೇನೈಕೇನ ಲಭ್ಯತೇ ॥**

ಬಂಗಾರದ ಕಮಲಗಳಿಂದ ೧೨ ಕೋಟಿ ಲಿಂಗಗಳನ್ನು ೧೨ ಕಲ್ಪಗಳಲ್ಲಿ ಪೂಜಿಸಿದಾಗ ಸಿಗುವ ಫಲವು ಶಾಲಗ್ರಾಮಕ್ಕೆ ೧ ದಿನ ಪೂಜೆ ಮಾಡುವುದರಿಂದ ಲಭಿಸುವುದು. – ಸರ್ವಮೂಲ.

**ಶಾಲಗ್ರಾಮಶಿಲಾಯಾಸ್ತು ಯೋ ದದ್ಯಾದ್ದಾನಮುತ್ತಮಮ್ ।**
**ಭೂಚಕ್ರಂ ತೇನ ದತ್ತಂ ಸ್ಯಾತ್ ಸ ನದೀಶೈಲಕಾನನಮ್ ॥**

ಯಾವನು ಶಾಲಗ್ರಾಮವನ್ನು ದಾನ ಮಾಡುವನೋ ಅವನು ನದಿ, ಪರ್ವತ, ಅರಣ್ಯಗಳಿಂದ ಕೂಡಿದ ಭೂಮಂಡಲವನ್ನೇ ದಾನ ಮಾಡಿದ ಪುಣ್ಯವನ್ನು ಗಳಿಸುತ್ತಾನೆ. ಆದ್ದರಿಂದಲೇ ಶಾಲಗ್ರಾಮಶಿಲೆಯನ್ನು ದಾನ ಮಾಡುವುದು –ದಾನಗಳಲ್ಲಿಯೇ ಅತಿಶ್ರೇಷ್ಠ ಎಂದೆನಿಸಿದೆ. ಯಾವನು ಮನಃಪೂರ್ವಕವಾಗಿ ಶಾಲಗ್ರಾಮಶಿಲೆ ಯನ್ನು ಭಕ್ತಿಯಿಂದ ಪೂಜಿಸುತ್ತಾನೋ ಅವನಿಗೆ ಕೂಡಲೇ ಲಕ್ಷಗಟ್ಟಲೆ ದಾನ ಮಾಡಿದ ಪುಣ್ಯ ಲಭಿಸುವುದು.

**ಶಾಲಗ್ರಾಮಶಿಲಾಸ್ತೋತ್ರಂ ಯಃ ಪಠೇದ್ದ್ವಿಜಸತ್ತಮಃ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥**

ಶಾಲಗ್ರಾಮಶಿಲಾಸ್ತೋತ್ರವನ್ನು ಯಾವ ಬ್ರಾಹ್ಮಣಶ್ರೇಷ್ಠನು ಪಠಿಸುತ್ತಾನೋ ಆತನು ಸರ್ವಪಾಪ ವನ್ನೂ ಕಳೆದುಕೊಂಡು ವೈಕುಂಠದಲ್ಲಿ ಸಮ್ಮಾನಿಸಲ್ಪಡುವನು.

ಯಾವನು ಶಾಲಗ್ರಾಮವನ್ನು ಶ್ರದ್ಧೆಯಿಂದ ಆರಾಧಿಸುತ್ತಾನೋ ಆ ಒಂದು ಸ್ಥಳದ ಯೋಜನ (೩ ಮೈಲು) ದೂರವು ಪವಿತ್ರಸ್ಥಳ ಎಂದೆನಿಸುವುದು. ಅಂತೆಯೇ ಅತ್ಯಂತ ನೀಚ ಹಾಗೂ ಎಣಿಸಲಾಗದಷ್ಟು ಕೆಟ್ಟ ಕೆಲಸಗಳನ್ನು ಮಾಡಿ ಪಾಪಿಯಾಗಿರುತ್ತಾನೋ ಅಂತಹವನು ಶಾಲಗ್ರಾಮಕ್ಕೆ ಮಾಡಿದ ಅಭಿಷೇಕದ ನೀರನ್ನು ಕುದಿದೊಡನೆಯೇ ಪಾಪಗಳಿಂದ ಮುಕ್ತನಾಗುತ್ತಾನೆ ಹಾಗೂ ಬ್ರಹ್ಮಹತ್ಯಾದೋಷದಿಂದಲೂ ಪಾರಾಗುತ್ತಾನೆ.

ಸಾಧುಸನ್ಯಾಸಿಗಳು ಹೇಳುವಂತೆ– ತುಳಸೀದಳ, ಶ್ರೀಗಂಧ, ಚಕ್ರಾಣಿಕೆ, ಶಂಖ, ಘಂಟೆ, ಶಾಲಗ್ರಾಮ, ದೀಪ, ತಾಮ್ರದ ಪಾತ್ರೆ, ಮತ್ತು ಮಹಾವಿಷ್ಣುವಿನ ಮಂತ್ರ (ಪುರುಷಸೂಕ್ತ) – ಈ ಒಂಬತ್ತು ಬಗೆಯ ವಸ್ತುಗಳಿಂದ ಕೂಡಿ ವಿಷ್ಣುಪೂಜೆ ಮಾಡಿ ಶಾಲಗ್ರಾಮತೀರ್ಥ ಸೇವಿಸಿದರೆ ಮನುಷ್ಯನ ಪಾಪರಾಶಿಗಳೆಲ್ಲವೂ ನಾಶಗೊಂಡು ಆತ ಮುಕ್ತಿಯನ್ನು ಹೊಂದುತ್ತಾನೆ.

**ಶಾಲಗ್ರಾಮ ಲಕ್ಷಣ ಪದ್ಧತಿಯ ಪ್ರಕಾರ** ಯಾವನು ಶಾಲಗ್ರಾಮವನ್ನು ಪೂಜಿಸುವನೋ, ಅವನು ಒಳ್ಳೆಯ ನಡತೆಯನ್ನು ಹೊಂದಿರಬೇಕು. ದುರಹಂಕಾರಿಯಾಗದೆ ಎಲ್ಲರನ್ನೂ ಪ್ರೀತಿಸುವವನಾಗಿರಬೇಕು. ಅರ್ಥ ಮತ್ತು ಕಾಮದ ಬಗ್ಗೆ ನಿರ್ಲಿಪ್ತತೆಯನ್ನು ಹೊಂದಿರಬೇಕು. ಭಯ ಹಾಗೂ ಭಕ್ತಿಶ್ರದ್ಧೆಗಳಿಂದ ಪೂಜಿಸುವವನಾಗಿರಬೇಕು. ಶಾಲಗ್ರಾಮ ಪೂಜಿಸಲು ವಿಶೇಷವಾಗಿ ಗುರುವಿನಿಂದ ಉಪದೇಶ, ಮಂತ್ರ, ಉಪಚಾರ, ಪೂಜಾವಿಧಾನ –ಯಾವುದೂ ಬೇಕಾಗಿಲ್ಲ.

**ಸ್ಕಂದ ಮತ್ತು ಗರುಡ ಪುರಾಣಗಳ ಪ್ರಕಾರ** ಯಾವ ಜಾಗದಲ್ಲಿ ಒಂದಕ್ಕಿಂತ ಹೆಚ್ಚು ಶಾಲಗ್ರಾಮ ಗಳು ಪೂಜಿಸಲ್ಪಡುವವೋ ಅಂತಹ ಸ್ಥಳವು ಪವಿತ್ರವೆನಿಸುವುದು. ಶ್ರೀಮನ್ನಾರಾಯಣದೇವರೇ ಹೇಳಿದ ಪ್ರಕಾರ– 'ಎಲ್ಲಿ ೧೦೮ ಶಾಲಗ್ರಾಮಗಳನ್ನಿಟ್ಟು ನನ್ನ ಪೂಜೆಯನ್ನು ಮಾಡುವರೋ ಅಲ್ಲಿ ನಾನೇ ಸ್ವತಃ ಬಂದು ನೆಲಸುತ್ತೇನೆ. ಹಾಗೂ ಪೂಜಿಸಿದವನಿಗೆ ವರವನ್ನು ಅನುಗ್ರಹಿಸುತ್ತೇನೆ. ಯಾವ ಭಕ್ತನು ಬೇರೆಬೇರೆ ರೀತಿಯ ಶಾಲಗ್ರಾಮಗಳನ್ನು ಸಂಗ್ರಹಿಸಿ ಪೂಜಿಸುತ್ತಾನೋ ಅವನು ವಿಶೇಷ ಶಕ್ತಿಯನ್ನು ಪಡೆದು ಶಾಂತಿ, ಸಮೃದ್ಧಿಯಿಂದ ಕೂಡಿ ವೈಕುಂಠಲೋಕವನ್ನು ಹೊಂದುತ್ತಾನೆ.

ಬ್ರಹ್ಮಾ॥ **ದ್ವಾದಶಾಕ್ಷರಮಂತ್ರೇಣ ಹ್ಯಭಿಷಿಚ್ಯ ವಿಧಾನತಃ ।**
**ಶಾಲಗ್ರಾಮಜಲೈಃ ಸ್ನಾತಃ ಸರ್ವತೀರ್ಥೇಷು ಸರ್ವದಾ ॥** – ಸರ್ವಮೂಲಗ್ರಂಥ.

ತಾತ್ಪರ್ಯ–

ಬ್ರಹ್ಮದೇವರು ಹೇಳುವರು– ಶಾಸ್ತ್ರದಲ್ಲಿ ತಿಳಿಸಿದಂತೆ **'ಓಂ ನಮೋ ಭಗವತೇ ವಾಸುದೇವಾಯ'** ಎಂಬ ೧೨ ಅಕ್ಷರಗಳುಳ್ಳ ಮಂತ್ರದಿಂದ ಶಾಲಗ್ರಾಮಕ್ಕೆ ಅಭಿಷೇಕ ಮಾಡಿ, ಆ ತೀರ್ಥದಿಂದ ಸ್ನಾನ/ಪ್ರೋಕ್ಷಣೆ ಮಾಡಿದವನು ನಿತ್ಯವೂ ಗಂಗಾತೀರ್ಥಸ್ನಾನದ ಫಲವನ್ನು ಹೊಂದುವನು.

# 4. ಪೂಜೆ ಮಾಡಬೇಕಾದ ಶಾಲಗ್ರಾಮಗಳ ಸಂಖ್ಯೆ ಮತ್ತು ಅವುಗಳ ಫಲಗಳು

ಒಂದು ಶಾಲಗ್ರಾಮವನ್ನು ಪೂಜಿಸಿದರೆ– ತುಂಬ ಒಳ್ಳೆಯದು ಮತ್ತು ಅತ್ಯುತ್ತಮ

ಆರು ಶಾಲಗ್ರಾಮಗಳನ್ನು ಪೂಜಿಸಿದರೆ– ಅದು ಕ್ಷೇತ್ರ ಎಂದೆನಿಸುವುದು.

ಹನ್ನೆರಡು ಶಾಲಗ್ರಾಮಗಳನ್ನು ಪೂಜಿಸಿದರೆ– ಅದು ಕ್ಷೇತ್ರ ಎಂದೆನಿಸುವುದು, ಪಾಪನಾಶವಾಗುವುದು.

ನೂರ ಎಂಟು ಶಾಲಗ್ರಾಮಗಳನ್ನು ಪೂಜಿಸಿದರೆ– ಅದು ತೀರ್ಥ ಎಂದಾಗುವುದು.

ಒಂದು ಸಾವಿರ ಮತ್ತು ಅದಕ್ಕೂ ಹೆಚ್ಚು ಶಾಲಗ್ರಾಮಗಳನ್ನು ಪೂಜಿಸಿದರೆ– ಅದು ಹರಿಧಾಮ ಎನಿಸುವುದು.

ಶಾಲಗ್ರಾಮಗಳನ್ನು ಸಮಸಂಖ್ಯೆಯಲ್ಲಿಟ್ಟು ಪೂಜೆ ಮಾಡುವುದು ಅತ್ಯುತ್ತಮ. ಬೆಸಸಂಖ್ಯೆಯಲ್ಲಿಟ್ಟು ಪೂಜೆ ಮಾಡಬಾರದು ಎನ್ನುತ್ತಾರೆ. ಆದರೆ ಒಂದು ಶಾಲಗ್ರಾಮಕ್ಕೆ ಪೂಜೆ ಮಾಡುವುದು ಬಹಳ ಒಳ್ಳೆಯದು. ಶಾಲಗ್ರಾಮವನ್ನು ದ್ವಾರಕಾಶಿಲೆಯೊಂದಿಗೆ ಪೂಜಿಸಿದರೆ ಉತ್ತಮ. ಈ ದ್ವಾರಕಾಶಿಲೆಯು ಬಿಳಿಯಾಗಿದ್ದು, ವೃತ್ತಾಕಾರ/ಚೌಕಾಕಾರವಾಗಿದ್ದು, ತುಂಡಾಗದೆ, ರಂಧ್ರಗಳಿಲ್ಲದೆ, ಚೆನ್ನಾಗಿ ರೂಪುಗೊಂಡ ಚಕ್ರಗಳಿಂದ ಕೂಡಿರಬೇಕು. ಎರಡು ದ್ವಾರಕಾಶಿಲೆ ಅಥವಾ ಎರಡು ಶಾಲಗ್ರಾಮ ಶಿಲೆಯನ್ನು ಪೂಜಿಸುವುದರಿಂದ ಮನಃಶಾಂತಿ ಹಾಳಾಗಬಹುದು. ಒಬ್ಬನ ಬಳಿ ೨ ಶಾಲಗ್ರಾಮವಿದ್ದರೆ ಅವನ್ನು ಬೇರೆ ಬೇರೆಯಾಗಿ ಪೂಜಿಸುವುದು ಒಳ್ಳೆಯದು. ಜಾಸ್ತಿ ಇದ್ದಾಗ ಒಟ್ಟಿಗೆ ಪೂಜಿಸಬಹುದು.

**ಶಾಲಗ್ರಾಮಾಃ ಸಮಾಃ ಪೂಜ್ಯೋ ವಿಷಮೋ ನ ಕದಾಚನ ।**
**ವಿಷಮೈಕಾ ಪೂಜಾನೀಯಾ ಸಮೇ ದ್ವೇ ನ ಕದಾಚನ ।**
**ದ್ವಾದಶೈವ ಶಿಲಾ ಯಾ ವೈ ಶಾಲಗ್ರಾಮಸ್ಯ ತಾಃ ಶುಭಾಃ ॥**

ಸಮಸಂಖ್ಯೆಯ ಶಾಲಗ್ರಾಮಗಳನ್ನೇ ಪೂಜಿಸಬೇಕಲ್ಲದೆ ವಿಷಮಸಂಖ್ಯೆಯಲ್ಲಿ ಪೂಜಿಸಬಾರದು. ವಿಷಮ ಸಂಖ್ಯೆಯಲ್ಲಿ ಪೂಜಿಸುವುದಿದ್ದಲ್ಲಿ ಒಂದು ಶಾಲಗ್ರಾಮವನ್ನು ಮಾತ್ರ ಪೂಜಿಸತಕ್ಕದ್ದು. ಸಮಸಂಖ್ಯೆಯಲ್ಲಿ ಸಹ ಎರಡು ಶಾಲಗ್ರಾಮಗಳನ್ನು ಮಾತ್ರ ಪೂಜಿಸಕೂಡದು.

**ಅರ್ಚಯೇದ್ವೈಷ್ಣವೋ ನಿತ್ಯಂ ತಸ್ಯ ಪುಣ್ಯಮನಂತಕಮ್ ।**
**ಕಿಂ ಪುನರ್ಬಹುಶೋ ಯಸ್ತು ಪೂಜಯೇತ್ ವೈಷ್ಣವೋ ನರಃ ॥**

ವೈಷ್ಣವನು ಒಂದು ಶಾಲಗ್ರಾಮವನ್ನು ಪೂಜಿಸಿದಾಗ ಅನಂತ ಪುಣ್ಯ ಲಭಿಸುವುದು ಎಂದ ಮೇಲೆ ಕ್ಷೇತ್ರಕ್ಕೂ ಮಿಕ್ಕಿ ಅನೇಕ ಶಾಲಗ್ರಾಮಗಳನ್ನು ಪೂಜಿಸುವ ವೈಷ್ಣವನಿಗೆ ಲಭಿಸುವ ಪುಣ್ಯವೆಷ್ಟೆಂದು ಹೇಳಲಳವಲ್ಲ. ಹನ್ನೆರಡು ಶಾಲಗ್ರಾಮಗಳೆಂದರೆ ಒಂದು ಶಾಲಗ್ರಾಮಕ್ಷೇತ್ರ. ಇದನ್ನು ಪೂಜೆ ಮಾಡುವವರಿಗೆ ಶುಭರಾಶಿ.

ರಾಂ ಪ್ರಸಾದ್ ಕೆಮ್ಕ ಎಂಬ ವಾರಣಾಸಿಯ ಬ್ರಾಹ್ಮಣರು ೬೫,೦೦೦ಕ್ಕೂ ಮಿಕ್ಕಿ ಶಾಲಗ್ರಾಮಗಳ ಸಂಗ್ರಹವನ್ನಿಟ್ಟುಕೊಂಡಿದ್ದಾರೆ. ಜಮ್ಮು ನಗರದಲ್ಲಿರುವ ರಘುನಾಥ ದೇವಾಲಯದಲ್ಲಿ ೨೦,೦೦೦ಕ್ಕೂ ಮಿಕ್ಕ ಶಿಲೆಗಳನ್ನು ಸಿಮೆಂಟಿನ ನೆಲದಲ್ಲಿ ಸ್ಥಾಪಿಸಿಟ್ಟು ಪೂಜಿಸುವುದನ್ನು ಲೇಖಕನು ಸ್ವತಃ ಕಂಡಿದ್ದಾನೆ. (ಜಮ್ಮು ಮತ್ತು ಕಾಶ್ಮೀರದ ರಾಜನಾದ ಮಹಾರಾಜ ಗುಲಾಬ ಸಿಂಘನು ಕ್ರಿ.ಶ. ೧೮೩೫ರಲ್ಲಿ ಶ್ರೀರಾಮನ ರಘುನಾಥ

ಮಂದಿರವನ್ನು ಸ್ಥಾಪಿಸಿದನು.) ಭದ್ರತಾದೃಷ್ಟಿಯಿಂದ ಈ ದೇವಾಲಯಕ್ಕೆ ಕ್ಯಾಮರಾ, ಪೆನ್ನು, ಪರ್ಸು ಮೊದಲಾದ ವಸ್ತುಗಳನ್ನು ಕೊಂಡೊಯ್ಯುವಂತಿಲ್ಲ. ಆದುದರಿಂದ ಇದರ ಭಾವಚಿತ್ರ ಲಭ್ಯವಿರುವುದಿಲ್ಲ.

ಶಾಲಗ್ರಾಮಶಿಲೆಯನ್ನಿಟ್ಟುಕೊಂಡು (ಶಾಲಗ್ರಾಮದೊಂದಿಗೆ) ಗಂಗಾಸ್ನಾನ ಮಾಡಿದರೆ ಸರ್ವಪಾಪಗಳೂ, ದಶಸಹಸ್ರ ಬ್ರಹ್ಮಹತ್ಯಾದೋಷಗಳೂ ನಾಶವಾಗುತ್ತವೆ.

**ಯಶ್ಚಕ್ರಮಭಿಷಿಚ್ಯಾಥ ತತ್ತೋಯೈಃ ಸ್ವಶಿರೋ ನರಃ ।**
**ಅಭಿಷಿಚ್ಯ ಯದಿ ಪಿಬೇದ್ಯಾತಿ ವಿಷ್ಣೋಃ ಪರಂ ಪದಮ್ ॥** – ಸರ್ವಮೂಲಗ್ರಂಥ

ಚಕ್ರಾಂಕಿತ ಶಾಲಗ್ರಾಮವನ್ನು ಅಭಿಷೇಕಿಸಿ, ಆ ತೀರ್ಥವನ್ನು ತಲೆಯಲ್ಲಿ ಧರಿಸಿ, ಪಾನಮಾಡಿದಲ್ಲಿ ವ್ಯಕ್ತಿಯು ವಿಷ್ಣುವಿನ ಉತ್ತಮ ಸ್ಥಾನವಾದ ವೈಕುಂಠವನ್ನು ಹೊಂದುತ್ತಾನೆ.

ವಿಷ್ಣುವಿಗೆ ಅಭಿಷೇಕ ಮಾಡಿದ ತೀರ್ಥವನ್ನು ನಿತ್ಯವೂ ಶಿರಸ್ಸಿನಲ್ಲಿ ಧರಿಸಿದರೆ ಆತನು ಸದ್ಗತಿಯನ್ನು ಹೊಂದುತ್ತಾನೆ.

ಶ್ರೀಮನ್ನಾರದೀಯ ಪುರಾಣದಲ್ಲಿ ಶಾಲಗ್ರಾಮ ಲಕ್ಷಣವನ್ನು ಹೇಳುವಾಗ ನೀರಿನಲ್ಲಿರುವ ಶಿಲೆಗಳು ನೋಡಲು ಅಂದವಾಗಿದ್ದು ಪೂಜಿಸುವವರಿಗೆ ಪುಷ್ಟಿಯನ್ನುಂಟುಮಾಡುತ್ತವೆ. ಚಕ್ರಚಿಹ್ನೆಯುಳ್ಳ ಈ ಶಿಲೆಗಳು ವಿಷ್ಣುಶಾಲಗ್ರಾಮಗಳು, ಕೆಲವು ಬ್ರಹ್ಮಶಾಲಗ್ರಾಮಗಳು ಹಾಗೂ ಕೆಲವು ರುದ್ರಶಾಲಗ್ರಾಮಗಳೆಂದು –ಇವು ಮಹತ್ತಾದ ಪುಣ್ಯ ನೀಡುತ್ತವೆ. ಇವುಗಳು ಕೆಲವು ಬಿಳಿಯವು, ಕೆಲವು ಕೆಂಪುಬಣ್ಣದವು, ಕೆಲವು ಚಿನ್ನದಂತೆ ಹಳದಿಬಣ್ಣದವು, ಕೆಲವು ಅತಿ ಕೆಂಪು, ಕೆಲವು ಅರಸಿನ ಒತ್ತಿದ ಕೆಂಪು, ಕೆಲವು ಸಂಜೆಗೆಂಪು, ಕೆಲವು ಜೇಸಿನ ಕೆಂಪು, ಕೆಲವು ಮಿಶ್ರಬಣ್ಣದವು, ಕೆಲವು ಕಲೆಗಳಿಂದ ಕೂಡಿದವು, ಕೆಲವು ಮಸುಕಾದವುಗಳು, ಹೆಚ್ಚು ಬಣ್ಣದವು, ಕೆಲವು ಬಣ್ಣಗೆಟ್ಟವು –ಎಂದು ಶಿಲೆಗಳು ವಿಧವಿಧವಾದವು.

ಜಪಿಸುವಾಗ, ಹೋಮಿಸುವಾಗ, ದಾನ ಮಾಡುವಾಗ, ಪೂಜಿಸುವಾಗ, ಹಾಗೆಯೇ ಬೇರೆ ಯಾವ ಸತ್ಕರ್ಮ ಮಾಡುವಾಗ ಶಾಲಗ್ರಾಮದ ಎದುರು ಮಾಡಿದಲ್ಲಿ, ಮಾಡಿದ ಕರ್ಮದ ಫಲ ಕೋಟಿಗಿಂತ ಹೆಚ್ಚಾಗುವುದು. ಯಾರ ಮನೆಯಲ್ಲಿ ತುಳಸಿ ಇಲ್ಲವೋ, ಶಾಲಗ್ರಾಮಪೂಜೆ ಇಲ್ಲವೋ ಆ ಮನೆಯು ಶ್ಮಶಾನದಂತೆಯೇ. ಶಾಲಗ್ರಾಮ ಇರುವ ಸ್ಥಳವು ತೀರ್ಥಸಮಾನ ಹಾಗೂ ತಪೋವನದಂತಿರುವುದು. ಶಾಲಗ್ರಾಮದಲ್ಲಿ ಶ್ರೀಹರಿಯ ಸಾನ್ನಿಧ್ಯ ಹಾಗೂ ಅವನನ್ನು ಪೂಜಿಸುವುದು ಅತಿ ಶ್ರೇಷ್ಠ ಆಗಿರುವುದೇ ಇದಕ್ಕೆ ಕಾರಣ.

**ಶಾಲಗ್ರಾಮಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ।**

ಎಲ್ಲಿ ಶಾಲಗ್ರಾಮಶಿಲೆ ಇದೆಯೋ ಎಲ್ಲಿ ದ್ವಾರಾವತೀಶಿಲೆ ಇರುವುದೋ, ಎಲ್ಲಿ ಶಂಖ ಇದೆಯೋ, ಎಲ್ಲಿ ತುಳಸಿ ಇದೆಯೋ ಅಲ್ಲಿ ಶ್ರೀನಾರಾಯಣನು ಸನ್ನಿಹಿತನಾಗಿರುವನು.

ಶಾಲಗ್ರಾಮ ಶಿಲೆಯು ಚಿಕ್ಕದಾದಷ್ಟು ಫಲವು ಹೆಚ್ಚುತ್ತದೆ. ದೊಡ್ಡದಾಗಿ ಕೃಶವಾದದ್ದು, ಒಡೆದು ಹೋದದ್ದು, ಅತಿ ಕಪ್ಪು ಬಣ್ಣದ್ದು, ದೊರಗಾದದ್ದು, ಫಲಾಪೇಕ್ಷಿಗಳಾದ ಗೃಹಸ್ಥರು ಪೂಜಿಸಲು ಅಯೋಗ್ಯ. ಫಲ ಬಯಸದಿದ್ದವರು ಪೂಜಿಸಿದರೆ ದೋಷವಿಲ್ಲ.

ಶಾಲಗ್ರಾಮವನ್ನು ಯಾವುದೇ ಕಾರಣಕ್ಕೂ ಮಾರಾಟ ಮಾಡಲೂ ಬಾರದು, ಕ್ರಯಕ್ಕೆ ತೆಗೆದುಕೊಳ್ಳಲೂ ಬಾರದು. ಇದನ್ನು ಗುರುಗಳು ಶಿಷ್ಯರಿಗೆ ದಾನ ಮಾಡಬೇಕು ಅಥವಾ ದೊಡ್ಡವರು ಸಣ್ಣವರಿಗೆ ಮುಕ್ತವಾಗಿ (ಉಚಿತವಾಗಿ) ಕೊಡಬೇಕು. ಯಾರು ಇದರ ವ್ಯಾಪಾರವನ್ನು ಮಾಡುತ್ತಾರೋ ಅಥವಾ ವ್ಯಾಪಾರದಲ್ಲಿ ಭಾಗಿಗಳಾಗುತ್ತಾರೋ ಅವರು ಪಾಪ ಮಾಡಿದಂತಾಗುತ್ತದೆ. ಇದನ್ನೇ ಪದ್ಮಪುರಾಣದ ಪಾಟಲಖಂಡ

೧೧ರಲ್ಲಿ ಉಲ್ಲೇಖಿಸಿದ್ದಾರೆ– "ಶಾಲಗ್ರಾಮವು ಯಾವಾಗಲೂ ಗುರುಗಳಿಂದ ದಾನರೂಪದಲ್ಲಿ ಬರಬೇಕು ಅಥವಾ ಹಿತೈಷಿಗಳಿಂದ 'ನಿನಗೆ ಶಾಂತಿ ಹಾಗೂ ಮಂಗಳವಾಗಲಿ' ಎಬ ಮಾನಸಿಕ ನಿರ್ಧಾರಪೂರ್ವಕ ಕೊಡಬೇಕು. ಪೂಜಿಸುವವನು ಪರಮಭಕ್ತಿಯಿಂದ ಪಡೆಯಬೇಕು. ಪೂಜಿಸಿದವನು, ಪೂಜೆ ಮಾಡುವವನ ಕೈಗಳಿಗೆ ಅರ್ಹ ಆಗಬಹುದು ಎಂದು ಒಪ್ಪಿ ತೆಗೆದುಕೊಳ್ಳಬೇಕು.

**ಯಥಾ ಕಾಷ್ಠಗತೋ ವಹ್ನಿರ್ಮಥ್ನಸ್ನಾನೇ ಪ್ರಕಾಶತೇ ।**
**ತಥಾ ಸರ್ವಗತೋ ವಿಷ್ಣುಶ್ಶಾಲಗ್ರಾಮೋ ಪ್ರಕಾಶತೇ ॥** – ಸರ್ವಮೂಲಗ್ರಂಥ

ಹೇಗೆ ಮರದಲ್ಲಿ ಅಗ್ನಿಯು ಅಡಗಿದ್ದು, ಪರಸ್ಪರ ತಿಕ್ಕಾಟದಿಂದ ಬೆಂಕಿಯ ಕಿಡಿ ಹತ್ತಿ ಭುಗಿಲೇಳುವುದೋ ಅಂತೆಯೇ ಶಾಲಗ್ರಾಮಶಿಲೆಯೊಳಗೆ ವಿಷ್ಣುವಿನ ಸಾನ್ನಿಧ್ಯವಿದ್ದು ಅದನ್ನು ಪೂಜಿಸಿದಾಗ ಮಾತ್ರ ನಮಗೆ ವಿಷ್ಣುವಿನ ಸಾನ್ನಿಧ್ಯದ ಅನುಭವವಾಗಲು ಸಾಧ್ಯ.

ಶಾಲಗ್ರಾಮ ಶಿಲೆಯು ಒಂದು ವೇಳೆ ಕೈತಪ್ಪಿ ಬಿದ್ದು ಒಡೆದುಹೋದರೂ ಪೂಜೆ ಮಾಡಲು ಯೋಗ್ಯವೆ. ತುಂಡಾಗಿದ್ದಲ್ಲಿ ಅಥವಾ ಭಿನ್ನಗೊಂಡರೂ ಅದರ ಮಹತ್ವವು ಕಡಿಮೆಯಾಗುವುದಿಲ್ಲ; ಪೂರ್ಣತೆಯನ್ನು ಕಳೆದುಕೊಳ್ಳುವು ದಿಲ್ಲ. ಅದರಲ್ಲಿಯ ಚಕ್ರದ ವಿಷ್ಣುವಿನ ಚಿಹ್ನೆಯೇ ಬಹು ಮುಖ್ಯ ಹಾಗೂ ಪ್ರಧಾನ ವಾದುದು. ಯಾವತ್ತೂ ಶಾಲಗ್ರಾಮ ಶಿಲೆಯು ಪೂಜೆಗೆ ಅನರ್ಹವಾಗುವುದಿಲ್ಲ. ಈ ಶಾಲಗ್ರಾಮಶಿಲೆಯನ್ನು ಕದ್ದು ತಂದಲ್ಲಿ, ಮೋಸಮಾಡಿ ತಂದಲ್ಲಿ ಅಥವಾ ಬಲಾತ್ಕಾರವಾಗಿ ತಂದಲ್ಲಿ ಅದು ಅಭ್ಯುದಯವನ್ನು/ಸಮೃದ್ಧಿ ಯನ್ನುಂಟುಮಾಡುವುದಿಲ್ಲ. ಅನುಚಿತರೀತ್ಯಾ ಪಡೆದ ಶಾಲಗ್ರಾಮದ ಪೂಜೆಯು ಯಾವ ಪರಿಣಾಮವನ್ನೂ ನೀಡುವುದಿಲ್ಲ. ಒಡೆದು ಎರಡಾಗದ ನೂರಾರು ಶಾಲಗ್ರಾಮಗಳು ಮಾರಾಟವಾಗುತ್ತವೆ. ಸಂಶಯದೃಷ್ಟಿಯ ಗ್ರಾಹಕರಿಗೆ– "ಇವು ಅಪ್ಪಟ ಶಾಲಗ್ರಾಮಗಳು. ಒಡೆದು ಒಳಚಕ್ರ ತೋರಿಸುತ್ತೇನೆ. ಒಡೆದ ಮೇಲೆ ಕೊಳ್ಳಲೇ ಬೇಕು. ಈ ನಿಬಂಧನೆಗೆ ಒಪ್ಪಿಕೊಂಡರೆ ಒಡೆದುತೋರಿಸುತ್ತೇನೆ." ಎಂದು ಮಾರುವವರು ಹೇಳುತ್ತಾರೆ. ಲೇಖಕ ೨೦೦೬ರಲ್ಲಿ ನೇಪಾಳ ದರ್ಶನ ಮಾಡಿದಾಗ 'ಥಮೆಲ್' ಎಂಬ ಅರಮನೆಯ ಪಕ್ಕದ ರಸ್ತೆಯಲ್ಲಿದ್ದ ಹಲವಾರು ಅಂಗಡಿಗಳಲ್ಲಿ ಬುಟ್ಟಿಯಲ್ಲೂ ಇಂತಹದೆ ಶಾಲಗ್ರಾಮಗಳನ್ನು ಮಾರಾಟಕ್ಕಿಟ್ಟುದನ್ನು ಕಂಡಿದ್ದಾನೆ. ಹೋಳಾದ ಶಾಲಗ್ರಾಮಗಳಿಗೆ ಮಾರುವವರು ರಬ್ಬರಿನ ಬ್ಯಾಂಡ್‌ಗಳನ್ನು ಸುತ್ತಿ, ಮಾರಲು ಅಂಗಡಿಯ ಹೊರಗಿಡುತ್ತಾರೆ. ಅಂತೆಯೇ ಪಶುಪತಿನಾಥ ದೇವಸ್ಥಾನದ ಎದುರು ಬದಿಯ ಅಂಗಡಿಗಳಲ್ಲಿ ವಿಪುಲವಾಗಿ ಈ ಶಿಲೆಗಳು ಸಿಗುತ್ತವೆ. ಭಿನ್ನವಾದ ಎಷ್ಟೋ ಶಾಲಗ್ರಾಮಗಳನ್ನು ಕೆರೆ, ಬಾವಿ, ನದಿಗಳಲ್ಲಿ ವಿಸರ್ಜಿಸುವ ಕ್ರಮ ನಮ್ಮ ವೈದಿಕ ಸಂಪ್ರದಾಯದಲ್ಲಿ ನಡೆದುಬಂದಿರುವಾಗ, ಇಂತಹ ಶಾಲಗ್ರಾಮ ತೆಗೆದುಕೊಂಡು ಮನಸ್ಸಿನ ಚಂಚಲತೆ ಹದಗೆಡಬಾರದೆಂಬ ದೃಷ್ಟಿಯಿಂದ ವಿಕ್ರಯಿಸಿರಲಿಲ್ಲ. ಪ್ರಸ್ತುತ ಲೇಖಕನಲ್ಲಿ ಒಡೆದುಹೋದ ವಿಷ್ಣುನಾಭನನ್ನು ಹೋಲುವ ಶಾಲಗ್ರಾಮದ ಒಂದು ಭಾಗವಿದೆ. ಇದು ಕೇವಲ ಸಂಗ್ರಹದ ಉದ್ದೇಶಕ್ಕೆ ಮಾತ್ರ. ಪ್ರಮಾಣವಾಕ್ಯದ ಪ್ರಕಾರ–

**ಖಂಡಿತಾ ಸ್ಫುಟಿತಾ ಭಿನ್ನಾ ವಹ್ನಿದಗ್ಧಾ ತಥೈವ ಚ ।**
**ಶಾಲಗ್ರಾಮಶಿಲಾ ಯತ್ರ ತತ್ರ ದೋಷೋ ನ ವಿದ್ಯತೇ ॥**

ಇದರ ಅರ್ಥ ತುಂಡಾಗಿದ್ದರೂ, ಬಿರಿದಿದ್ದರೂ, ಒಡೆದಿದ್ದರೂ, ಅಗ್ನಿಯಲ್ಲಿ ಬೆಂದಿದ್ದರೂ, ಶಾಲಗ್ರಾಮ ಗಳಿರುವಲ್ಲಿ ಯಾವ ದೋಷವೂ ಇಲ್ಲ. ಒಡೆದರೆ ಎರಡನ್ನಾಗಿ ಭಾವಿಸಿ ಪೂಜಿಸಬಹುದು. ಅಥವಾ ಬೆಳ್ಳಿಯ ತಂತಿಯಿಂದ ಸುತ್ತಿ ಒಂದಾಗಿ ಪೂಜಿಸಬಹುದು. ಇಂಥವು ಅನೇಕ ಕಡೆಗಳಲ್ಲಿ ಈಗಲೂ ಪೂಜೆಯಲ್ಲಿವೆ.

ತೀರ್ಥಲಕ್ಷಣದ ಪ್ರಕಾರ–

**ಸೂಕ್ತಂ ಚ ಚಂದನಂ ಶಂಖಂ ಚಕ್ರಂ ಚ ತುಲಸೀದಲಮ್ ।**
**ವಾದ್ಯಂ ಶಿಲಾ ತಾಮ್ರಪಾತ್ರಂ ಅಷ್ಟಭಿಶ್ಚರಣೋದಕಮ್ ॥**

ಪುರುಷಸೂಕ್ತ ಹೇಳಿಕೊಂಡು ಗಂಧ ಬೆರಸಿದ ನೀರಿನೊಂದಿಗೆ, ತುಲಸೀದಲವನ್ನು ಸೇರಿಸಿ ಶಂಖದಿಂದ ಅಭಿಷೇಕ ಮಾಡಬೇಕು. ಚಕ್ರಾಂಕಿತೆಯು ಶಾಲಗ್ರಾಮದೊಂದಿರಬೇಕು (ದ್ವಾರಕಶಿಲಾ). ಪುರುಷಸೂಕ್ತ, ನೀರು, ಗಂಧ, ತುಲಸೀದಲ, ಶಂಖ, ಶಾಲಗ್ರಾಮ, ಚಕ್ರಾಂಕಿತೆ ಮತ್ತು ತಾಮ್ರಪಾತ್ರ – ಈ ಎಂಟು ಬಗೆಗಳು ಸೇರಿದರೆ ಮಾತ್ರ ತೀರ್ಥವಾಗುತ್ತದೆ. ಅಭಿಷೇಕವು ಘಂಟಾನಾದಸಹಿತವಾಗಿರಬೇಕು.

**ವಿಷ್ಣುಪಾದೋದಕಂ ನಿತ್ಯಂ ಶಿರಸಾ ಧಾರಯೇದ್ಯದಿ ।**
**ನಿಯಮೇನಾಪಿ ಯೋ ಮರ್ತ್ಯಃ ಸ ಯಾತಿ ಪರಮಾಂ ಗತಿಮ್ ॥**

ವಿಷ್ಣುವಿಗೆ ಅಭಿಷೇಕ ಮಾಡಿದ ಪಾದೋದಕವನ್ನು ಯಾರು ನಿಯಮದಿಂದ ನಿತ್ಯವೂ ಶಿರಸ್ಸಿನಲ್ಲಿ ಧರಿಸುತ್ತಾನೋ, ಆತನು ಪರಮಸದ್ಗತಿ ಎಂದರೆ ಮೋಕ್ಷವನ್ನು ಹೊಂದುತ್ತಾನೆ.

ಶಾಲಗ್ರಾಮ ಮಹಾತ್ಮೆಯ ಪ್ರಕಾರ–

| | | | |
|---|---|---|---|
| ೧ ಶಾಲಗ್ರಾಮ | ಪೂಜೆಯಿಂದ | | ಧರ್ಮ, ಅರ್ಥ, ಕಾಮ ಪ್ರಾಪ್ತಿ. |
| ೪ | ,, | ,, | ವೈರಿನಾಶ |
| ೫ | ,, | ,, | ಹುಟ್ಟು ಸಾವಿನ ಭಯನಿವಾರಣೆ |
| ೬ | ,, | ,, | ಸಂಪತ್ತು ಪ್ರಾಪ್ತಿ |
| ೭ | ,, | ,, | ಕೀರ್ತಿಲಾಭ |
| ೮ | ,, | ,, | ಸರ್ವಾರ್ಥಪ್ರಾಪ್ತಿ |
| ೯ | ,, | ,, | ದೇವತೆಗಳಿಗೆ ಲಭಿಸಿದ ಶ್ರೇಯಸ್ಸು ದೊರಕುವುದು |
| ೧೦ | ,, | , | ದಶಾವತಾರದೇವತೆಗಳ ಅನುಗ್ರಹಪ್ರಾಪ್ತಿ |
| ೧೧ | ,, | ,, | ಸಕಲೈಶ್ವರ್ಯಪ್ರಾಪ್ತಿ. |

# 5. ಶಾಲಗ್ರಾಮಶಿಲೆಗಳು ಮತ್ತು ದ್ವಾರಾವತೀಶಿಲೆಗಳಿಗಿರುವ ಸಂಬಂಧ

ಶಾಲಗ್ರಾಮೋದ್ಭವೋ ದೇವೋ ದೇವೋ ದ್ವಾರಾವತೀ ಭವ ।
ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥

ಶಾಲಗ್ರಾಮೋದ್ಭವಂ ದೇವಂ ಶೈಲಂ ಚಕ್ರಾಂಕಮಂಡಿತಮ್ ।
ಯತ್ರಾಪಿ ನೀಯತೇ ತತ್ರ ವಾರಣಾಸ್ಯಾಃ ಶತಾಧಿಕಮ್ ॥

ಗರುಡಪುರಾಣವು ಸುದರ್ಶನ ಮತ್ತು ದ್ವಾರಕಾಶಿಲೆಗಳ ದರ್ಶನಮಾತ್ರದಿಂದಲೇ ಮನುಷ್ಯನ ಆಸೆ, ಆಕಾಂಕ್ಷೆಗಳು ಪರಿಪೂರ್ಣಗೊಳ್ಳುವುದು ಎಂದಿದೆ.

ವರಾಹಪುರಾಣವು ಯಾವನು ವಿಷ್ಣುವಿನ ಚಕ್ರಾಂಕಿತಶಿಲೆಯನ್ನು ಭಕ್ತಿಯಿಂದ ಸ್ಪರ್ಶಿಸುತ್ತಾನೋ, ಅಂತಹವನು ತಾನು ಮಾಡಿದ ಪಾಪಗಳಿಂದ ಮುಕ್ತಿಹೊಂದುತ್ತಾನೆ ಎಂದಿದೆ.

ಸ್ಕಂದಪುರಾಣದಲ್ಲಿ ಬ್ರಹ್ಮನು ನಾರದರಿಗೆ– 'ಯಾವನು ನಿತ್ಯದಲ್ಲಿ ದ್ವಾರಕಾಶಿಲೆಯನ್ನು ೧೨ ಶಾಲಗ್ರಾಮಗಳೊಂದಿಗಿಟ್ಟು ಪೂಜಿಸುತ್ತಾನೋ ಅಂತಹವನು ವೈಕುಂಠಲೋಕದಲ್ಲಿ ಸದಾ ಗೌರವಿಸಲ್ಪಡುತ್ತಾನೆ' ಎಂದು ಉಲ್ಲೇಖವಿದೆ.

ಬ್ರಹ್ಮಪುರಾಣದಲ್ಲಿ ಹೇಳಿದ ಪ್ರಕಾರ ದ್ವಾರಕಾಶಿಲೆಯನ್ನು ಶಾಲಗ್ರಾಮಶಿಲೆಯೊಂದಿಗಿಟ್ಟು ಪೂಜಿಸುವುದರಿಂದ ಆತನಿಗೆ ಮುಕ್ತಿ ದೊರಕುತ್ತದೆ ಎಂದಿದೆ.

ಈ ಶಾಲಗ್ರಾಮದ ಆರಾಧನೆಯು ಇದರಂತೆಯೇ ಇರುವ ಬಿಳಿಯ ಶಿಲೆ(ಇದನ್ನು ದ್ವಾರಾವತೀಶಿಲೆ ಅಥವಾ ದ್ವಾರಕಾಶಿಲೆ ಎಂದೂ ಕರೆಯುತ್ತಾರೆ.)ಯೊಡನೆ ಪೂಜಿಸುತ್ತಾರೆ. ದ್ವಾರಕೆಯು ವೈಷ್ಣವರಿಗೆ ಬಹು ಪವಿತ್ರವಾದ ಸ್ಥಳ. ಈ ಬಿಳಿಯ ಶಿಲೆಗಳಲ್ಲಿ ಬಹಳ ಚಕ್ರದ ಗುರುತುಗಳಿದ್ದು ಇದನ್ನು ಈಶ್ವರನ ಸಂಕೇತ ಎಂದೇ ಭಾವಿಸಲಾಗುತ್ತದೆ. ಜರಾಸಂಧನೆಂಬ ಅಸುರರಾಜನಿಂದ ಯಾದವರನ್ನು ರಕ್ಷಿಸಲು ಶ್ರೀಕೃಷ್ಣ–ಬಲರಾಮರು ದ್ವಾರಕೆಯನ್ನು ನಿರ್ಮಿಸಿದರು ಎಂದು ಪುರಾಣಗಳು ಹೇಳುತ್ತವೆ. ಈ ದ್ವಾರಕೆಯು ದ್ವಾರಾವತೀ ಎಂಬ ನದೀ ತೀರದಲ್ಲಿದ್ದು ಈಗ ನದಿ ಮತ್ತು ಪಟ್ಟಣಗಳೆರಡೂ ಸಮುದ್ರಪಾಲಾಗಿವೆ. ಈ ದ್ವಾರಕೆಯ ಶಿಲೆ (ಚಕ್ರಾಣಿಕೆ) ಹಾಗೂ ಗಂಡಕೀನದಿಯಲ್ಲಿ ದೊರೆಯುವ ಶಾಲಗ್ರಾಮ –ಇವುಗಳೆರಡನ್ನೂ ಒಟ್ಟಿಗಿಟ್ಟು ಪೂಜಿಸುವುದು ತುಂಬಾ ಉಪಯುಕ್ತ ಹಾಗೂ ಶ್ರೇಷ್ಠ. ವಿಷ್ಣುವಿನ ಚಕ್ರದ ಚಿಹ್ನೆ ಚಕ್ರಾಣಿಕೆಯಲ್ಲಿರುವುದರಿಂದ ಇದನ್ನು ಪೂಜಿಸಲಾಗುವುದು.

ದ್ವಾರಕಾಶಿಲೆಗಳು ಬಿಳಿಯ ಬಣ್ಣದಿಂದ ಕೂಡಿರುವುದರಿಂದ ಇವುಗಳನ್ನು ಈಶ್ವರನ ಪ್ರತಿನಿಧಿಗಳು ಎಂದು ತಿಳಿಯಲಾಗುತ್ತದೆ. 'ಶಿವಕರ ಚಿತ್‌ಸ್ವರೂಪಂ ನಿರಂಜನಮ್' ಹಾಗೂ ಗಂಡಕಿಯ ಕಪ್ಪುಶಿಲೆಗಳು ವಿಷ್ಣುವಿನ ಪ್ರತಿನಿಧಿಗಳು. ಮಹಾವಿಷ್ಣು ಮತ್ತು ಈಶ್ವರನನ್ನು ಒಟ್ಟಾಗಿ ಪೂಜಿಸುವುದರಿಂದ ನಮ್ಮ ಜನ್ಮ ಜನ್ಮಾಂತರದ ಪಾಪಗಳು ನಾಶವಾಗುತ್ತವೆ ಎಂಬುದು ಸ್ಪಷ್ಟವಾಗುತ್ತದೆ.

**ಬ್ರಹ್ಮವೈವರ್ತಪುರಾಣದ ಪ್ರಕೃತಿ ಖಂಡ – ೬ರಲ್ಲಿ** ಹೇಳಿದ ಪ್ರಕಾರ ಕಾಳಿಗಂಡಕಿಯ ೧೦,೦೦೦ ವರ್ಷದ ಅಂತ್ಯದಲ್ಲಿ ಭಾರತದಲ್ಲಿ ಶಾಲಗ್ರಾಮಶಿಲೆಯು ಅದರ ಪಾವಿತ್ರ್ಯವನ್ನು ಕಳೆದುಕೊಂಡು ವಿಷ್ಣುವಿನ ಸಾನ್ನಿಧ್ಯವನ್ನು ಸೇರುತ್ತದೆ (ಈಗಿನ ವರ್ಷ ೨೦೦೭ ಸರಾಸರಿ ೫೦೮೬ ವರ್ಷ ಕಾಳಿವರ್ಷ). ಸಾಕ್ಷಾತ್ ವಿಷ್ಣುಪರಮಾತ್ಮನೇ ಈ ಶಿಲೆಯಲ್ಲಿ ಸಾನ್ನಿಧ್ಯ ಹೊಂದಿರುವುದರಿಂದ, ಹದಿನಾಲ್ಕು ಲೋಕಗಳ ಎಲ್ಲ ಶಕ್ತಿಗಳೂ

ದೇವತೆಗಳೂ ಈ ಶಿಲೆಯಲ್ಲಿ ಸಾನ್ನಿಧ್ಯ ಹೊಂದಿರುತ್ತಾರೆ. ಆದ್ದರಿಂದಲೇ ನಾವೆಲ್ಲ ಭಕ್ತರು ಶಾಲಗ್ರಾಮವನ್ನು ಪೂಜಿಸುವುದರಿಂದ ಮುಕ್ತಿಯನ್ನು ಹೊಂದುತ್ತಾ, ಅಭಿವೃದ್ಧಿಗೊಳ್ಳುತ್ತೇವೆ ಎಂದು ವಿಷ್ಣುಪರಮಾತ್ಮನು ತನ್ನ ಸ್ವಂತ ಆಶ್ವಾಸನೆ ನೀದಿರುತ್ತಾನೆ.

**ಪದ್ಮಪುರಾಣದ ಉತ್ತರಖಂಡ** – ೧೨೭ರಲ್ಲಿ ಹೇಳುವ ಪ್ರಕಾರ ದಾನ ನೀಡಿದ ಮತ್ತು ಇನ್ನಿತರ ಸಮಾರಂಭ ಹಾಗೂ ಪಿತೃಕಾರ್ಯಗಳನ್ನು ಶಾಲಗ್ರಾಮದ ಸನ್ನಿಧಿಯಲ್ಲಿ ಮಾಡಿದಲ್ಲಿ ಆತನು ಮುಕ್ತಿ ಹೊಂದುತ್ತಾನೆ ಹಾಗೂ ಇವುಗಳ ಸುತ್ತಮುತ್ತಲಿನ ಮೈಲುಗಟ್ಟಲೆ ಪ್ರದೇಶಗಳು ಪುಣ್ಯಸ್ಥಳಗಳಾಗುತ್ತವೆ. ಯಾವ ತರಹದಲ್ಲಿ ಇದರೊಂದಿಗೆ, ಅಂದರೆ ಪವಿತ್ರ ಶಿಲೆಯೊಂದಿಗೆ ಸಂಬಂಧಿಸಿದರೆ ಆ ಕೂಡಲೇ ಆತನನ್ನು ಶುದ್ಧೀಕರಿಸುವುದು.

**ಸ್ಕಂದಪುರಾಣದಲ್ಲಿ (ಕಾರ್ತಿಕಮಾಸಮಹಾತ್ಮೆಯಲ್ಲಿ)** : ಈಶ್ವರನು ಸ್ಕಂದನಿಗೆ ಹೀಗೆ ಹೇಳುತ್ತಾನೆ– "ಈ ಮೂರೂ ಜಗತ್ತು ಮತ್ತು ಸ್ವತಃ ನಾನೇ ಈ ಶಾಲಗ್ರಾಮಶಿಲೆಯೊಳಗಿದ್ದು ಕೇವಲ ದೃಷ್ಟಿಮಾತ್ರ ದಿಂದಲೇ ಪುನೀತರಾಗುತ್ತಾರೆ. ಈ ಶಿಲೆಯನ್ನು ಪೂಜಿಸಿದಾಗ ಇದಕ್ಕಿಂತಲೂ ಹೆಚ್ಚಿನ ಫಲ ದೊರಕುತ್ತದೆ."

ಒಬ್ಬನಿಗೆ ಶಾಲಗ್ರಾಮ ಸಿಕ್ಕುವುದೇ ಬಹಳ ಅಪರೂಪ. ಅಂತಹ ಶಾಲಗ್ರಾಮ ಆ ವ್ಯಕ್ತಿಯ ಗುಣಗಳ ಅಥವಾ ಒಳ್ಳೆಯತನದ ಬಗ್ಗೆ ಮಾತನಾಡುತ್ತವೆ ಅರ್ಥಾತ್ ಸೂಚನೆ ನೀಡುತ್ತವೆ. ಅಂತಹ ವ್ಯಕ್ತಿ ತಾನು ತುಂಬಾ ಭಾಗ್ಯಶಾಲಿ ಎಂದು ತಿಳಿದು ಭಯಭಕ್ತಿಗಳಿಂದ ಪೂಜಿಸಬೇಕು.

ಶಾಲಗ್ರಾಮಶಿಲೆಗೆ ಅಭಿಷೇಕ ಮಾಡಿದ ನೀರಿನಿಂದ ಸಂಪ್ರದಾಯಸ್ಥರು ಇಂದಿಗೂ ಸ್ನಾನ ಮಾಡುತ್ತಾರೆ.

**ಸ್ನಾನೇ ಚಾಚಮನೇ ಚೈವ ಭೋಜನಾದೌ ಯಥಾ ವಿಧಿ ।**
**ತಥೈವ ಭೋಜನಾಂತೇ ಚ ಶಾಲಗ್ರಾಮಜಲಂ ಪಿಬೇತ್ ॥** – ಸರ್ವಮೂಲಗ್ರಂಥ

ಎಂಬ ಪ್ರಮಾಣದಂತೆ, ಸ್ನಾನಾನಂತರ ಊಟಕ್ಕೆ ಮೊದಲು ತೀರ್ಥವನ್ನು ಸೇವಿಸುತ್ತಾರೆ. ಹಾಗೆಯೇ, ಊಟ ಮಾಡಿದ ಅನಂತರವೂ ಸಹ ತೀರ್ಥವನ್ನು ತೆಗೆದುಕೊಳ್ಳುತ್ತಾರೆ.

ಶಾಲಗ್ರಾಮವನ್ನು ಪೂಜಿಸಿದರೆ ಐಶ್ವರ್ಯವೃದ್ಧಿ, ದಾಂಪತ್ಯಸುಖ, ಆರೋಗ್ಯ, ಸಂತಾನ, ವೈರಾಗ್ಯ, ಸಂನ್ಯಾಸ, ಇಂದ್ರಿಯನಿಗ್ರಹ, ಶತ್ರುಭಯ ಹಾಗೂ ಭೂತಪ್ರೇತಪಿಶಾಚಾದಿಗಳ ಪೀಡೆ ನಿವಾರಣೆ, ಮನೆಯಲ್ಲಿ ಜಗಳವಿಲ್ಲದೆ ಶಾಂತವಾದ ನೆಮ್ಮದಿಯ ವಾತಾವರ, ಪೂಜೆಯನ್ನು ಬಿಟ್ಟಾಗ ವಿಪರೀತ ಪರಿಣಾಮಗಳು –ಹೀಗೆ ನಾನಾ ರೀತಿಯ ಮಹಿಮೆಗಳು ಅನುಭವಕ್ಕೆ ಬರುತ್ತವೆ. ಈ ಎಲ್ಲಾ ಅನುಭವಗಳನ್ನು ಅನುಭವಿಸದೇ ಇದು ಕೇವಲ ಮೂಢನಂಬಿಕೆ, ಡಂಭಾಚಾರ ಎನ್ನುವವರೂ ಇರುತ್ತಾರೆ. ಶಾಲಗ್ರಾಮಗಳನ್ನು ನೋಡದೆಯೇ ಶಾಸ್ತ್ರಗಳನ್ನು ಪರಿಶೀಲಿಸದೆ ಅಲ್ಲಗಳೆಯುವವರು ಮೊಂಡುವಾದಿಗಳಾಗಿರುತ್ತಾರೆ. ಶಾಲಗ್ರಾಮಗಳು ಬಹು ಪ್ರಾಚೀನ ಪರಂಪರೆಯಿಂದ ಬಂದಿದ್ದಲ್ಲಿ ಅದನ್ನು ಪೂಜಿಸುವವನು ನಿಜವಾಗಿಯೂ ಅದೃಷ್ಟಶಾಲಿಯೇ ಸರಿ. ಹೊಸ ಶಾಲಗ್ರಾಮಶಿಲೆಯನ್ನು ಸೂರ್ಯನ ಬೆಳಕಿಗೆ ಹಿಡಿದಾಗ ಹಸಿರುಬಣ್ಣದ ಜ್ವಾಲೆಗಳು ಕಾಣಿಸಿ ಕೊಂಡರೆ, ಆ ಶಾಲಗ್ರಾಮಮೂರ್ತಿಯು ವಿಶಿಷ್ಟ ಹಾಗೂ ಬಲು ಅಪರೂಪವೇ ಸರಿ. ಅಂತೆಯೇ ಹಿರಣ್ಯಗರ್ಭ ಶಾಲಗ್ರಾಮಗಳು ನಾನಾ ವರ್ಣಗಳಲ್ಲಿವೆ. ಇನ್ನು ಕೆಲವು ಶಾಲಗ್ರಾಮಗಳ ಮೇಲೆ ಮತ್ತು ಕೆಳಗೆ ತಾಮ್ರದ ಬಿಲ್ಲೆ ಹಿಡಿದಾಗ ಗಿರಗಿರನೆ ತಿರುಗುವುದುಂಟು. ಇನ್ನು ಹಲವು ಶಾಲಗ್ರಾಮಗಳು ಹಾಲಿನ ಬಟ್ಟಲಲ್ಲಿ ತೇಲುವುದುಂಟು. ಹಾಲಿನ ವರ್ಣ ಬದಲು ಮಾಡುವ ಶಾಲಗ್ರಾಮಗಳೂ ಇವೆ. ಇವು ತುಂಬಾ ಶ್ರೇಷ್ಠ ಶಾಲಗ್ರಾಮಗಳು. ನೀಲಮಣಿ ಶಾಲಗ್ರಾಮ ಹಾಲಿನ ಬಟ್ಟಲಲ್ಲಿಟ್ಟರೆ ನೀಲವರ್ಣದ ಛಾಯೆ

ಮೂಡಿಬರುತ್ತದೆ. ತಿರುಪತಿ, ಕಾಂಚಿ, ಶ್ರೀರಂಗ, ಕುಂಭಕೋಣಂ, ಮೇಲುಕೋಟೆ ಮೊದಲಾದ ಕ್ಷೇತ್ರಗಳಲ್ಲಿ ಅಗಣಿತ ಸಂಖ್ಯೆಯಲ್ಲಿ ಶಾಲಗ್ರಾಮ ಶಿಲೆಗಳನ್ನು ಕಾಣಬಹುದು.

ಡಾ। ರಾಧೇಶ್ಯಾಮ ಶರ್ಮಾರವರು ಮೂಲತಃ ಹೈದರಾಬಾದಿನವರಾಗಿದ್ದು, ೧೯೮೨ನೇ ಇಸವಿಯಲ್ಲಿ ಪಂಡರಾಪುರಕ್ಕೆ ಆಗಮಿಸಿದ್ದರು. ಅವರ ಬಳಿ ೬೯ ಶಾಲಗ್ರಾಮಗಳಿದ್ದು, ಅದರಲ್ಲಿ ಬಂಗಾರ ಕೊಡುವ ಶಾಲಗ್ರಾಮಗಳೂ, ೨೪ ಗಂಟೆಗಳ ಕಾಲ ತೆಂಗಿನ ನೀರಿನಂತೆ ನೀರಿನ ಹನಿಗಳನ್ನು ಸುರಿಸುವ ಶಾಲಗ್ರಾಮ ಗಳನ್ನೂ ಪಂಡರಾ ಪ್ರಹಾರ ಸಾಪ್ತಾಹಿಕ ಸಂಪಾದಕರಾದ ಶ್ರೀ ದಾ. ನಾ. ಉತ್ಪಾತ ಮತ್ತು ಶ್ರೀ ಬಾಪು ಜೋಶಿಯವರು ಕಣ್ಣಾರೆ ಕಂಡಿರುವ ಧ್ದಾಗಿ ಶ್ರೀ ಅರುಣ ತಾಮ್ಹಣಕರರು 'ಪಂಡರಾ ಪ್ರಹಾರ' ಸಾಪ್ತಾಹಿಕದಲ್ಲಿ ಬರೆದಿದ್ದಾರೆ. ರಾಧೇಶ್ಯಾಮ ಶರ್ಮರ ಬಳಿ ಸತತವಾಗಿ ನೀರು ಕೊಡುವ ೧೫-೧೬ ಶಾಲಗ್ರಾಮಗಳಿದ್ದುವಂತೆ. ಅವರ ಬಳಿ ಇದ್ದ ಜ್ವಾಲಾನೃಸಿಂಹ ಶಾಲಗ್ರಾಮದಲ್ಲಿ ರಾತ್ರಿಯ ಕತ್ತಲಲ್ಲೂ ಜ್ವಾಲಾರೇಖೆ ಕಾಣುತ್ತಿತ್ತಂತೆ. ನರಸಿಂಹ ಮೂರ್ತಿಯ ಮೇಲೆ ಮಣಗಳಷ್ಟು ತುಲಸಿ ದಳಗಳನ್ನು ಹೇರಿದರೂ, ಒಂದು ದಳವೂ ಬೆಳಗ್ಗೆ ಕಾಣಸಿಗದು. ಇವರಲ್ಲಿದ್ದ ರತ್ನಗರ್ಭ ಶಾಲಗ್ರಾಮ ಬಿಸಿಲಿನಲ್ಲಿ ಅತಿ ನೀಲಿಬಣ್ಣದಿಂದ ಕೂಡಿದ್ದೂ, ಪಾರದರ್ಶಕವಾಗಿಯೂ ಕಾಣಿಸಿತಂತೆ. ಲಾಜಾವರ್ತಶಾಲಗ್ರಾಮವು ಕೇಸರಿಬಣ್ಣ ಸೂಸುತ್ತಿತ್ತಂತೆ. ವಾಸುದೇವ ಮೂರ್ತಿಯಲ್ಲಿ ನೀರೊಸರುತ್ತಿತ್ತಂತೆ. ಅವರ ಬಳಿಯೇ ಇದ್ದ ಇನ್ನೊಂದು ಜಾತಿಯ ಶಾಲಗ್ರಾಮಶಿಲೆಯಿಂದ ಸದಾ ನೀರು ಒಸರುತ್ತಿತ್ತು. ಅವರ ಸಂಗ್ರಹದಲ್ಲಿದ್ದ ಹಿರಣ್ಯಗರ್ಭ ಶಾಲಗ್ರಾಮವು ಅದರ ಮೇಲಿರುವ ಸಿಂಗಾರದ ಬಿಂದುಗಳಿಂದ ವನಸ್ಪತಿ ಅಂಕುರಿಸುವಂತೆಯೇ ಬಂಗಾರ ಹೊರಹೊಮ್ಮುತ್ತಿತ್ತು. ಇದು ಒಂದು ಸಮಯಕ್ಕೆ ಮೂರೂವರೆ ಮಾಸಿ ಬಂಗಾರ ಕೊಡುತ್ತಿತ್ತಂತೆ. ಇವರಿಗೆ ಈ ಶಾಲಗ್ರಾಮವು ಬದರಿಕಾಶ್ರಮದ ದಾರಿಯಲ್ಲಿ ತಿಹರಿ ಎಂಬಲ್ಲಿ ಒಬ್ಬ ಸಾಧುವಿನಿಂದ ದೊರೆಯಿತಂತೆ. ಇಂತಹ ಶಾಲಗ್ರಾಮಗಳ ವಿಶಿಷ್ಟ ಉಪಾಸನೆ ಮತ್ತು ವಿಶಿಷ್ಟ ಪ್ರಯೋಗ ಮಾಡಿದಾಗ ಕೆಲವು ಹಿರಣ್ಯಗರ್ಭ ಶಾಲಗ್ರಾಮಗಳು ಸಣ್ಣ ಬಂಗಾರದ ಗುಂಡುಗಳನ್ನು ಕೊಡುತ್ತಿರುತ್ತವೆ. ಅಂತೆಯೇ, ತಾನಾಗಿಯೇ ಬಂಗಾರ ಕೊಡುವಂತಹ ಶಾಲಗ್ರಾಮಗಳೂ ಇವೆ. ವಿಜ್ಞಾನ ರೀತಿಯಲ್ಲಿ ಇದು ಚಮತ್ಕಾರವಲ್ಲ. ಶಾಲಗ್ರಾಮಶಿಲೆಯು ಒಂದು ತಾಪಮಾನದವರೆಗೆ ತಲುಪಿದಾಗ ಅದು ಬಂಗಾರವನ್ನು ಹೊರಹೊಮ್ಮಿಸುತ್ತದೆ. ಇದು ಕೆಲವು ಕಾಲದ ಬಳಿಕ ಈ ಪ್ರಕ್ರಿಯೆ ನಿಲ್ಲುತ್ತದೆ. ಡಾ। ರಾಧೇಶ್ಯಾಂ ಶರ್ಮಾ ಅವರು ಈ ಬಂಗಾರವನ್ನು ತಮ್ಮ ಸ್ವಂತಕ್ಕಾಗಿ ಉಪಯೋಗ ಮಾಡಿಕೊಳ್ಳದೇ ಬ್ರಾಹ್ಮಣರಿಗೆ ದಾನ ಮಾಡುತ್ತಾರಂತೆ.

ಶಾಲಗ್ರಾಮ ಎಂಬ ವಸ್ತುವಿಗೆ ಭೂಗರ್ಭಶಾಸ್ತ್ರ, ವನಸ್ಪತಿಶಾಸ್ತ್ರ, ಆಕಾಶವಿಜ್ಞಾನ, ಧ್ವನಿತರಂಗಶಾಸ್ತ್ರ, ಜಲದರ್ಶನ ಶಾಸ್ತ್ರ, ಮತ್ತು ಸೃಷ್ಟಿರಚನಾಶಾಸ್ತ್ರ, ಹೀಗೆ ೭ ಶಾಸ್ತ್ರಗಳ ಸಂಬಂಧವಿದೆ. ಶಾಲಗ್ರಾಮದ ಸಂಬಂಧ ಶೈವ ತಾಂತ್ರಿಕ, ವೈಷ್ಣವತಾಂತ್ರಿಕ ಮತ್ತು ಶಾಕ್ತತಾಂತ್ರಿಕ ಎಂದು ಮೂರು ಬಗೆಯ ತಂತ್ರಗಳಿಗೆ ಇದೆ.

ವೈಷ್ಣವತಂತ್ರದಲ್ಲಿ ೧೦೮ ಬಗೆಯ ಸಾಧನೆಗಳನ್ನೂ ಆಚಾರ್ಯರ ಮಾರ್ಗದರ್ಶನದಲ್ಲಿಯೇ ಮಾಡ ಬೇಕೆಂದಿದೆ. ವೈಷ್ಣವದಲ್ಲಿ 'ದಕ್ಷಿಣಾಮ್ನಾಯ' ಎಂಬ ತಂತ್ರದಲ್ಲಿ ಶಾಲಗ್ರಾಮಗಳ ಬಗೆಗೆ ಮಾಹಿತಿ ಇದೆ. ಭೂಗರ್ಭ, ನೀರು ಮತ್ತು ಹಿಮದಲ್ಲಿ ದೊರೆಯುವ ೮೪ ಲಕ್ಷ ಪ್ರಕಾರಗಳ ಶಾಲಗ್ರಾಮಗಳಿವೆ.

ಯಜ್ಞದ ಅಗ್ನಿಯನ್ನು ಮತ್ತು ಜ್ವಾಲೆಯನ್ನು ಪ್ರಜ್ವಲಿಸಲೂ ಶಾಲಗ್ರಾಮದ ಉಪಯೋಗವಾಗುವುದು. ಮಹಾಭಾರತದಲ್ಲಿ ಬರುವ ಅಗ್ನ್ಯಸ್ತ್ರ, ಪರ್ಜನ್ಯಾಸ್ತ್ರ, ವರುಣಾಸ್ತ್ರ, ಸರ್ಪಾಸ್ತ್ರ ಮೊದಲಾದ ಅಸ್ತ್ರವಿದ್ಯೆ ಗಳಲ್ಲಿಯೂ ಶಾಲಗ್ರಾಮ ಬಳಸಿರುವರು.

ಅತಿಯಾದ ಜ್ವರ ಏರಿದಾಗ ಅಭಿಮಂತ್ರಿತ ಶಾಲಗ್ರಾಮದ ನೀರನ್ನು ಕುಡಿಸಿದರೆ ಜ್ವರ ಇಳಿಯುವುದು. ಅಭಿಮಂತ್ರಿತ ಶಾಲಗ್ರಾಮವನ್ನು ಇಚ್ಛಿತ ಕಾರ್ಯಸಿದ್ಧಿಗಾಗಿ ಉಪಯೋಗಿಸುತ್ತಾರೆ. ಶ್ರೀ ಅರುಣ ತಾಮ್ಹಣಕರು ಈ ಬಗೆಗೆ ಬರೆದ ಲೇಖನವು ೧೯೮೯ರ ನವಂಬರ್ ತಿಂಗಳ ಕಸ್ತೂರಿಯಲ್ಲಿ ಪ್ರಕಟಗೊಂಡಿದೆ.

# II

## 1. ಶಾಲಗ್ರಾಮಶಿಲೆಗಳ ಬಗ್ಗೆ ಪುರಾಣೋಕ್ತ ಕಥೆಗಳು :

ಸಂಸ್ಮೃತೋ ಭಗವಾನ್ ವಿಷ್ಣುಃ ಸರ್ವಮಂಗಲಮಂಗಲಃ ।
ಸಮಸ್ತಾಭೀಷ್ಟದಾಯೀ ಸ್ಯಾತ್ ತೇನ ಧ್ಯೇಯೋಽಖಿಲೈರ್ಜನೈಃ ॥

ಭಕ್ತ್ಯಾ ವಾ ಯದಿ ವಾಽಭಕ್ತ್ಯಾ ಚಕ್ರಾಂಕಿತಶಿಲಾಂ ಪ್ರತಿ ।
ದರ್ಶನಂ ಸ್ಪರ್ಶನಂ ವಾಽಪಿ ಸರ್ವಪಾಪಪ್ರಣಾಶನಮ್ ॥

ಶಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀ ಭವಃ ।
ಉಭಯೋಸ್ಸಂಗಮೋ ಯತ್ರ ತತ್ರ ಮುಕ್ತಿರ್ನ ಸಂಶಯಃ ।
ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥

ಸ್ಕಂದಪುರಾಣದ ಅಸುರಖಂಡದ ಕಥೆಯ ಪ್ರಕಾರ ಗಂಡಕೀನದಿಯ ಹುಟ್ಟು ಮತ್ತು ಶಾಲಗ್ರಾಮಗಳ ಕಥೆ ಈ ರೀತಿಯಾಗಿವೆ:-

ಗಂಡಕೀ ಎಂಬ ಸ್ಥಿರ ಮನಸ್ಸಿನ ಸಾತ್ವಿಕಸ್ತ್ರೀಯು ಹಿಮಾಲಯ ಪರ್ವತದಲ್ಲಿ ಕಠಿಣವಾದ ತಪಸ್ಸನ್ನು ಮಾಡುತ್ತಾಳೆ. ದೇವರುಗಳೇ ಅವಳ ಪುತ್ರರಾಗಬೇಕು ಎಂಬ ಅಪೇಕ್ಷೆಯಿಂದಿದ್ದಳು. ಗಂಡಕಿಯ ತಪಸ್ಸಿಗೆ ಮೆಚ್ಚಿದ ತ್ರಿಮೂರ್ತಿಗಳು ಅವಳೆದುರು ಪ್ರತ್ಯಕ್ಷರಾಗಿ ಬೇಕಾದ ವರವನ್ನು ಬೇಡುವಂತೆ ಹೇಳುತ್ತಾರೆ. ಆಗ ಗಂಡಕಿಯು ನೀವು ಮೂವರೂ ನನ್ನ ಮಕ್ಕಳಾಗಿ ಹುಟ್ಟಿ ಭೂಮಿಯ ಸಮಸ್ತ ಜನರನ್ನು ಸುಖಿಗಳನ್ನಾಗಿ ಮಾಡಬೇಕೆಂಬ ವರವನ್ನು ಕೇಳಿಕೊಳ್ಳುತ್ತಾಳೆ. ತ್ರಿಮೂರ್ತಿಗಳು ಇದಕ್ಕೊಪ್ಪದೇ ಇದ್ದಾಗ ಗಂಡಕಿಯು ತನ್ನ ಹಠವನ್ನು ಬಿಡುವುದೇ ಇಲ್ಲ. ಹತಾಶಳಾದ ಗಂಡಕಿ ಕುಪಿತಗೊಂಡು ತ್ರಿಮೂರ್ತಿಗಳ ಸಹಿತ ಎಲ್ಲ ದೇವರುಗಳು ಹುಳುಗಳಾಗಿ ಎಂದು ಶಪಿಸುತ್ತಾಳೆ ('ಕೀಟಯೋನಿಂ ಪ್ರಪದ್ಯೇಯುಃ'). ಆಗ ತ್ರಿಮೂರ್ತಿಗಳು 'ನೀನು ದೊಡ್ಡ ಅವಿವೇಕಿ. ಮನುಷ್ಯಳಾಗಿರಲು ಅಯೋಗ್ಯಳು. ನಿನ್ನ ತಪಸ್ಸಿಗೆ ಮೆಚ್ಚಿ ನಿನ್ನನ್ನು ಅನುಗ್ರಹಿಸಲು ಬಂದಾಗ ನೀನು ನಮ್ಮನ್ನೇ ಶಪಿಸಿದ್ದೀಯ. ಆದುದರಿಂದ 'ಕೃಷ್ಣವರ್ಣದ ಜಡವಾದ ನದಿಯಾಗು' ಎಂಬ ಪ್ರತಿಶಾಪ ನೀಡುತ್ತಾರೆ.

ಚಿಂತಾಕ್ರಾಂತರಾದ ದೇವತೆಗಳು ಪರಿಹಾರಕ್ಕಾಗಿ ಬ್ರಹ್ಮನಲ್ಲಿಗೆ ಹೋಗುತ್ತಾರೆ. ಆಗ ಚತುರ್ಮುಖ ಬ್ರಹ್ಮನು ತನ್ನಿಂದಾಗದೆಂದು ತಿಳಿಸಿದಾಗ, ಅವರು ಮಹೇಶ್ವರನಲ್ಲಿಗೆ ಹೋಗುತ್ತಾರೆ. ಈರ್ವರೂ ಅಸಹಾಯಕರಾದಾಗ ಶ್ರೀಮಹಾವಿಷ್ಣುವಿನ ಬಳಿಗೇ ಬರುತ್ತಾರೆ. ಶ್ರೀಮನ್ನಾರಾಯಣನು, "ಗಂಡಕಿಯ ಶಾಪವನ್ನು ಸುಳ್ಳು ಮಾಡಲು ಸಾಧ್ಯವಿಲ್ಲ. ಅದಕ್ಕೊಂದು ಪರಿಹಾರವಿದೆ. ಗಂಡಕಿ ನಾವಿತ್ತ ಶಾಪದ ಪ್ರಕಾರ ಹಿಮಾಲಯದಲ್ಲಿ ನದಿಯಾಗಿ ಹರಿಯುತ್ತಿದ್ದಾಳೆ. ದೇವತಾರೂಪವನ್ನು ಪಡೆದಿರುವ ನನ್ನ ಇಬ್ಬರು ಬ್ರಾಹ್ಮಣಭಕ್ತರು ಇನ್ನೊಂದು ಶಾಪದಿಂದ ಜಲರಾಕ್ಷಸರಾಗಿ ಜನ್ಮವೆತ್ತಿದ್ದಾರೆ. ನಾನು ಅವರ ಆತ್ಮಗಳಿಗೆ ಮೋಕ್ಷವನ್ನಿತ್ತು ಅವರ ಕಳೇಬರಗಳನ್ನು ಪ್ರವೇಶಿಸುತ್ತೇನೆ. ಅವರ ಶವಗಳು ಕೊಳೆತಾಗ ದೇವತೆಗಳಾದ ನೀವು ಎಲುಬಿನ ಮಜ್ಜೆ ಮತ್ತು ಕೊಬ್ಬಿನಿಂದ ಹುಳುಗಳಾಗಿ ಕಳೇಬರದ ಗಟ್ಟಿ ಭಾಗಗಳ ಒಳಗೆ ಸೇರಿಕೊಳ್ಳಬಹುದು. ನೀವು ಹುಳುಗಳಾದರೂ ನಿಮ್ಮ ದೇಹಗಳು ಗಟ್ಟಿಯಾಗಿರುವುದರಿಂದ ನಿಮ್ಮನ್ನು ವಜ್ರಕೀಟಗಳು ಎಂದು ಕರೆಯುತ್ತಾರೆ. ನಾನು ಪ್ರವೇಶಿಸುವಂಥ ರಾಕ್ಷಸರ ದೇಹಗಳನ್ನು ಗಂಡಕೀನದಿಯಲ್ಲಿ ಮುಳುಗಿಸುತ್ತೇನೆ.

ಶವಗಳು ಕೊಳೆತ ಬಳಿಕ ನೀವು ಅವುಗಳ ಒಳಗೆ ಹುಳುಗಳ ರೂಪ ತಳೆದಾಗ ನಿಮ್ಮನ್ನು ಗಂಡಕಿಯ ಸಂತಾನವೆಂದೇ ತಿಳಿಯಲಾಗುವುದು. ನೀವು ಹುಳುಗಳಾಗಬೇಕೆಂಬ ಗಂಡಕಿಯ ಶಾಪವೂ ಆಗ ನಿಜವಾಗು ವುದು ಮತ್ತು ನಾವು ತನ್ನ ಮಕ್ಕಳಾಗಿ ಜನಿಸಬೇಕೆಂಬ ಅವಳ ಅಪೇಕ್ಷೆಯೂ ನೆರವೇರಿದಂತಾಗುವುದು." ವಿಷ್ಣು ಪರಮಾತ್ಮನು ದೇವತೆಗಳು ಗಂಡಕೀನದಿಯ ಯಾವ ಪ್ರದೇಶದಲ್ಲಿ ಜನ್ಮ ತಾಳಬೇಕೆಂಬುದನ್ನು ದೇವತೆಗಳಿಗೆ ವಿವರಿಸುತ್ತಾನೆ.

ಗಂಡಕೀನದಿಯು ಹಿಮಾಲಯಪರ್ವತದ ದಕ್ಷಿಣಾಭಿಮುಖವಾಗಿ ೧೦ ಯೋಜನ (ಸುಮಾರು ೮೦ ಮೈಲು) ದೂರದಲ್ಲಿ ಹರಿಯುತ್ತದೆ. ಈ ನದಿಯ ಒಂದು ಭಾಗಕ್ಕೆ ಚಕ್ರತೀರ್ಥ ಎಂದು ಹೆಸರು. ಋಷಿ ಗಳಿಗೂ, ದೇವತೆಗಳಿಗೂ ಪ್ರಿಯವಾದ ಈ ಸ್ಥಳದಲ್ಲಿ ಜಲರಾಕ್ಷಸರ ದೇಹಗಳನ್ನು ಮುಳುಗಿಸಲಾಗುತ್ತದೆ. ದೇವತೆಗಳು ಅವುಗಳ ಒಳಗೆ ವಜ್ರಕೀಟಗಳಾಗುತ್ತಾರೆ. ವಿಷ್ಣುವು ಚಕ್ರರೂಪದಲ್ಲಿ ಈ ಕಳೇಬರಗಳೊಳಗೆ ಕಾಣಿಸಿಕೊಳ್ಳುತ್ತಾನೆ. ಈ ಚಕ್ರತೀರ್ಥದಲ್ಲಿಯ ಸ್ನಾನ, ಪಳೆಯುಳಿಕೆ ರೀತಿಯ ವಿಷ್ಣುವಿನ ಪೂಜೆ (ಚಕ್ರಚಿಹ್ನೆ ಯಿರುವ ಶಾಲಗ್ರಾಮಪೂಜೆ) ಮೋಕ್ಷಪ್ರದವಾದದ್ದು.

ಈ ರೀತಿಯಾಗಿ ವಜ್ರಕೀಟಗಳು ಅಥವಾ ಶಾಲಗ್ರಾಮದ ಹುಳುಗಳೇ ದೇವತೆಗಳು. ಇದರೊಳಗಿನ ಚಕ್ರದ ರೂಪ ಸಾಕ್ಷಾತ್ ವಿಷ್ಣು. ಗಂಡಕೀನದಿಯಲ್ಲಿ ಸ್ನಾನ ಮತ್ತು ಶಾಲಗ್ರಾಮರೂಪಿಯಾದ ವಿಷ್ಣುವಿನ ಪೂಜೆಯಿಂದ ಮೋಕ್ಷವು ಲಭಿಸುವುದು.

**ದೇವೀಭಾಗವತದಲ್ಲಿ** : ವಿಷ್ಣುವಿಗೆ ಶಂಖ, ಚಕ್ರ, ಶಾಲಗ್ರಾಮಶಿಲೆ, ತುಳಸಿಗಳು ಏಕೆ ಪ್ರಿಯವಾದವು ಎಂಬುದಕ್ಕೆ ಇನ್ನೊಂದು ಕಥೆ ಈ ರೀತಿಯಾಗಿದೆ:

ಗಂಡಕಿಯೇ ಮುಂದೆ ತುಳಸಿಯಾಗುವ ಮೊದಲು, ಗೋಕುಲದಲ್ಲಿ ಗೋಪಿಯಾಗಿದ್ದಳು. ಶ್ರೀಕೃಷ್ಣನಿಗೆ ಅವಳಲ್ಲಿ ತುಂಬಾ ಪ್ರೀತಿ. ಇದನ್ನು ರಾಧೆ (ರಾಸೇಶ್ವರಿ) ಸಹಿಸದೆ ಅವಳನ್ನು ಮನುಷ್ಯಳಾಗುವಂತೆ ಶಪಿಸಿದಳು. ಅದೇ ಕಾಲದಲ್ಲಿ ಸುದಾಮನೆಂಬವನು ತುಳಸಿ(ಗಂಡಕಿ)ಯನ್ನು ಪ್ರೇಮಿಸಿದ್ದರಿಂದ ಅವನನ್ನು ರಾಧೆ ಅಸುರನಾಗಿ ಹುಟ್ಟುವಂತೆ ಶಪಿಸಿದಳು. ಆಗ ಗಂಡಕೀ ತನ್ನ ದುರ್ಗತಿಯನ್ನು ಪರಿಹರಿಸಲು ಪ್ರಾರ್ಥಿಸಿದಳು. ಅವನು ಮನಕರಗಿ, ಅವಳು ಘೋರ ತಪಸ್ಸು ಮಾಡಿ ಬ್ರಹ್ಮನನ್ನು ಪ್ರತ್ಯಕ್ಷ ಮಾಡಿಕೊಂಡರೆ, ಭಗವದಂಶ ಸಂಭೂತನಾದ ಒಬ್ಬನನ್ನು ವರಿಸಿ, ಆಮೇಲೆ ತನ್ನನ್ನು ಸೇರುವುದಾಗಿ ವರವಿತ್ತ. ಆಮೇಲೆ ಗಂಡಕಿ ಧರ್ಮ ಧ್ವಜನೆಂಬ ಅಸುರನಿಗೂ, ಮಾಧ ಎಂಬ ರಾಣಿಗೂ ಮಗಳಾಗಿ ಹುಟ್ಟಿ ಬದರೀಕ್ಷೇತ್ರದಲ್ಲಿ ನಾನಾ ಋತುಗಳಲ್ಲಿ ಸುಮಾರು ಒಂದು ಲಕ್ಷ ವರ್ಷ ಕಠಿನ ತಪಸ್ಸನ್ನಾಚರಿಸಿದಳು. ಇವಳಂತೆಯೇ ಅಲ್ಲಿ ಉಪಮನ್ಯುವೆಂಬ ಮಹರ್ಷಿ ಮಹಾಶಿವಭಕ್ತನಾಗಿ ಕಠಿನ ತಪಸ್ಸನ್ನು ಆಚರಿಸಿದ್ದ. ಸುದಾಮನು ಆಗ ಶಂಖಚೂಡನೆಂಬ ಅಸುರನಾಗಿ ಹುಟ್ಟಿದ್ದ. ಗಂಡಕೀ ಇವನ ಪತ್ನಿಯಾಗಿ ಒಂದು ಮನ್ವಂತರ ಸವೆಸಿದಳು. ಅದು ಅವಳ ತಪಸ್ಸಿಗೆ ಬ್ರಹ್ಮನಿತ್ತ ಫಲ. ವಿಷ್ಣುವಿನ ವಾಕ್ಯದಂತೆ, ಶಂಖಚೂಡ ದೇವತೆಗಳನ್ನು ಪೀಡಿಸತೊಡಗಿದ. ಆಗ ನೊಂದಂತಹ ದೇವತೆಗಳು ಬ್ರಹ್ಮದೇವರಲ್ಲಿ ಮೊರೆಯನ್ನಿಟ್ಟರು. ಬ್ರಹ್ಮನು ಮಹೇಶ್ವರನ ಬಳಿ ಹೋದ. ಮಹೇಶ್ವರನು ಶ್ರೀಮಹಾವಿಷ್ಣುವಿನ ಬಳಿ ಮೊರೆ ಇಡಲು, ವಿಷ್ಣುವು ಶಿವನಿಗೆ ಒಂದು ತ್ರಿಶೂಲವನ್ನಿತ್ತು ಶಂಖಚೂಡನನ್ನು ನಿರ್ನಾಮ ಮಾಡಲು ಹೇಳಿದ. ಆ ಶಂಖಚೂಡನ ಕೊರಳಲ್ಲಿ ಒಂದು ರಕ್ಷೆಯಿರಲು, ಮಹೇಶ್ವರ ಆ ರಕ್ಷೆ ಯನ್ನು ಉಪಾಯದಿಂದ ಕಿತ್ತು, ಆ ಕವಚವನ್ನು ಹರಿದು ಆತನನ್ನು ಸಂಹರಿಸಿದ. ಆ ಶಂಖಚೂಡ ಮತ್ತೆ ಸುದಾಮನಾದ. ಆತನ ಮೂಳೆಗಳೇ ಶಂಖಗಳಾದವು. ಅವುಗಳು ಇದ್ದೆಡೆಯು ಲಕ್ಷ್ಮೀನಾರಾಯಣರ ನಿವಾಸವಾಯಿತು. ವಿಷ್ಣುವು ಗಂಡಕಿಯ ಬಳಿ ಶಂಖಚೂಡನ ರೂಪದಲ್ಲಿ ಹೋಗಿ, ಅವಳೊಂದಿಗೆ ವಿಹರಿಸಿದ. ಅನಂತರ ವಿಹರಿಸಿದಾತ ತನ್ನ ಗಂಡನಲ್ಲ, ಬೇರೆ ಯಾರೋ ಎಂದು ತಿಳಿದು, ವಿಷ್ಣುವೆಂದರಿಯದೇ ಆತನನ್ನು ಕಲ್ಲಾಗೆಂದು ಶಪಿಸಿದಳು. ಆಗ ಶ್ರೀಮಹಾವಿಷ್ಣುವು ತನ್ನ ನಿಜರೂಪವನ್ನು ತೋರಿ ಅವಳ ಪೂರ್ವರೂಪದ

ಆಸೆಯನ್ನು, ಶಂಖಚೂಡ ಯಾರೆಂಬುದನ್ನು ತಿಳಿಸಿ, ಅವಳ ಕೋರಿಕೆಯಂತೆಯೇ ತಾನು ಅವಳನ್ನು ಹೊಂದಿದ್ದಾಗಿ ತಿಳಿಸಿ ಅಂತರ್ಧಾನನಾದನು. ಅನಂತರ ಗಂಡಕಿಯ ಶಾಪದಂತೆ ಶಾಲಗ್ರಾಮ ಶಿಲೆಯೂ ಆದ. ಗಂಡಕಿಯ ಶಾಪ ತೀರುವ ಕಾಲ ಬಂದೊದಗಿತ್ತು. ಒಂದು ರೂಪದಲ್ಲಿ ನದಿಯಾಗಿ, ನಿತ್ಯವೂ ಭಗವಂತನ ಸಂಗವನ್ನು ಅನುಭವಿಸುತ್ತಾ ಇನ್ನೊಂದು ರೂಪದಲ್ಲಿ ತುಳಸಿ ಗಿಡವಾಗಿಯೂ ಪರಿವರ್ತನೆಗೊಂಡು ಹಾಗೂ ಸದಾ ಭಗವಂತನ ಸಂಯೋಗವನ್ನು ಅನುಭವಿಸುತ್ತಾ ಭಕ್ತರನ್ನು ಭಗವಂತನೊಡನೆ ಅನುಗ್ರಹಿಸುತ್ತಿದ್ದಾಳೆ.

**ಪದ್ಮಪುರಾಣದ ಪ್ರಕಾರ** : ವೇದಶಿರಸ್ ಎಂಬ ಋಷಿಯ ತಪಸ್ಸನ್ನು ಪರೀಕ್ಷಿಸಲು ಇಂದ್ರನು ಮಂಜುಪಾಕ್ ಎಂಬ ಅಪ್ಸರೆಯನ್ನು ಕಳುಹಿಸುತ್ತಾನೆ. ವೇದಶಿರಸ್ಸು ಋಷಿಯ ಶಾಪದಿಂದಾಗಿ ಅವಳು ನದಿಯಾಗುತ್ತಾಳೆ. ಅವಳು ತಾನು ಇಂದ್ರನ ದಾಸಿಯೆಂದೂ ಅವನ ಆಣತಿಯಂತೆ, ಋಷಿಯ ತಪಸ್ಸು ಭಂಗ ಮಾಡಲು ಭೂಲೋಕಕ್ಕೆ ಬಂದೆಳೆಂದೂ ಗೋಳಿಟ್ಟು, ತನ್ನ ಶಾಪವಿಮೋಚನೆ ಮಾಡಬೇಕೆಂದೂ ಗೋಗರೆದು ಪ್ರಾರ್ಥಿಸಿದಳು. ಆಗ ಋಷಿಯು 'ನಿನ್ನಲ್ಲಿ ಭಗವಂತನೇ ಶಾಲಗ್ರಾಮರೂಪದಲ್ಲಿ ಜನಿಸಿ, ನಿನ್ನನ್ನು ಲೋಕಪಾವನೆಯನ್ನಾಗಿಸಿ ಉದ್ಧರಿಸುತ್ತಾನೆ ಎಂಬ ವರವನ್ನು ನೀಡುತ್ತಾನೆ.

**ಇನ್ನೊಂದು ಕಥೆ ಈ ರೀತಿಯಿದೆ** : ಬ್ರಹ್ಮದೇವನಿಗೆ ಭೂಲೋಕದ ಪಾಪಿಗಳ ಉದ್ಧಾರದ ದಾರಿ ಕಾಣದೆ ಚಿಂತೆಯಾಗಿ ಕಪೋಲ(ಗಂಡ)ದಲ್ಲಿಯೂ ಕಂಠಸ್ಥಳದಲ್ಲೂ ತುಂಬ ಬೆವರು ಉತ್ಪತ್ತಿಯಾಯಿತು. ಅದನ್ನು ಒರಸಿ ಕೆಳಗೆ ಬಂದಾಗ, ಅದು ಸ್ತ್ರೀರೂಪ ತಾಳುತ್ತದೆ. ಅವಳೇ ಗಂಡಕೀ. ಅವಳು ಕಠಿನ ತಪಸ್ಸನ್ನು ಆಚರಿಸಿ ಎಲ್ಲಾ ದೇವತೆಗಳೂ ನನ್ನ ಮಕ್ಕಳಾಗಿ ಹುಟ್ಟಬೇಕೆಂಬ ವರವನ್ನು ಬೇಡಿದಳು. ಅದಕ್ಕೆ ಬ್ರಹ್ಮನು ಒಪ್ಪದಿರಲು ಅವಳು 'ದೇವತೆಗಳೆಲ್ಲಾ ಹುಳುಗಳಾಗಲಿ' ಎಂದು ಶಪಿಸಿದಳು. 'ನೀನು ಜಡರೂಪಿಯಾಗು' ಎಂದು ಅವರು ಅವಳಿಗೆ ಪ್ರತಿಶಾಪವನ್ನಿತ್ತರು. ಜಗಳ ಮತ್ತೆ ಬ್ರಹ್ಮನ ಬಳಿಗೆ ಬಂದು ಅಲ್ಲಿಂದ ಮಹೇಶ್ವರ ನಲ್ಲಿಗೆ ಹೋಗಿ ಕೊನೆಗೆ ಶ್ರೀಮಹಾವಿಷ್ಣುವಿನ ಹತ್ತಿರ ಬಂತು. ಭಗವಂತ ಶಾಪವನ್ನು ಸುಳ್ಳಾಗದಿರಲು ಇಷ್ಟಪಡದೆ, "ನನ್ನ ಭಕ್ತರಿಬ್ಬರು ಆನೆಯಾಗಿ ಮತ್ತು ಮೊಸಳೆಯಾಗಿ ಈ ನದಿ ಸೇರುತ್ತಾರೆ. ಅನಂತರ ಮೋಕ್ಷ ಹೊಂದುತ್ತಾರೆ. ಅವರ ಶರೀರದ ಬೆವರಹನಿಗಳಿಂದ ನೀವು ಆಗ ಹುಳುಗಳಾಗಿ ಹುಟ್ಟಿ ಬನ್ನಿ, ತಪ್ಪಿಲ್ಲ. ಅವಳೂ ಆಗ ಜಡರೂಪಿ ನದಿಯಾಗುತ್ತಾಳೆ. ನೀವು ಸಹ ಅವಳ ಗರ್ಭ ಸೇರಿದಂತಾಗುತ್ತದೆ. ಅವಳಿಗೂ ನಿಮ್ಮ ಶಾಪ ತಟ್ಟುತ್ತದೆ. ಆದರೂ ಗಂಗೆಗೆ ಇಲ್ಲದ ಭಾಗ್ಯ ಅವಳಿಗೆ ಬಂದೊದಗುತ್ತದೆ. ಇಲ್ಲಿಗೆ ಹತ್ತು ಯೋಜನ ದೂರದ ಚಕ್ರತೀರ್ಥದಲ್ಲಿ ನಾನು ವಾಸಿಸುತ್ತೇನೆ. ನೀವು ಈ ಬೆಟ್ಟದ ಶಿಲೆಗಳಲ್ಲಿ ಮರೆಯಾಗಿದ್ದುಕೊಂಡು, ಕಲ್ಲುಗಳಲ್ಲಿ ತೂತು ಮಾಡಿ, ನನ್ನ ಚಿಹ್ನೆ ಚಕ್ರಗಳನ್ನು ಮಾಡಿ. ಹೀಗೆ ಇಬ್ಬರ ಶಾಪಗಳು ವರವಾಗುತ್ತವೆ." ಅನಂತರ ಕರ್ದಮಪ್ರಜಾಪತಿಗೂ ದೇವಹೂತಿಗೂ ಜಯವಿಜಯ ರೆಂಬ ಪುತ್ರರು ಹುಟ್ಟಿ, ಬೆಳೆದು, ಅನ್ಯೋನ್ಯವಾಗಿರುತ್ತಿ. ವಯಸ್ಸಾಗುತ್ತಾ ಬ್ರಹ್ಮವರ್ಚಸ್ಸು ಪಡೆದು, ಚಂದ್ರವಂಶದ ರಾಜ ಮರುತ್ತನ ಯಾಗಕ್ಕೆ ಹೋಗುತ್ತಾರೆ. ಅಲ್ಲಿ ಬಂದ ಸಂಭಾವನೆಯನ್ನು ಹಂಚಿಕೊಂಡಾಗ ಅವರೊಳಗೆ ಜಗಳವಾಗಿ "ದುರಾಸೆಯ ನೀನು ಮೊಸಳೆಯಾಗು" ಎಂದೊಬ್ಬನು, "ಮದದಿಂದ ಮಾತನಾಡುವ ನೀನು ಮದಗಜವಾಗು" ಎಂದೂ ಮತ್ತೊಬ್ಬನು, ಪರಸ್ಪರರನ್ನು ಶಪಿಸಿಕೊಂಡು ಈರ್ವರೂ ಗಂಡಕಿಗೆ ಬಂದು ಸೇರುತ್ತಾರೆ.

ಮೊಸಳೆ ಇದ್ದಡೆ ಒಂದು ಆನೆಕಾಲು ಸಿಕ್ಕಿಕೊಂಡು, ಭಗವಂತನನ್ನು ಮೊರೆ ಇಡಲು ಆತನು ಬಿಟ್ಟ ಚಕ್ರದಿಂದ ನದಿಯ ಶಿಲೆಗಳಿಗೆಲ್ಲಾ ಚಕ್ರದ ಗುರುತು ಬೀಳುತ್ತದೆ. ಅದುವೇ ಹರಿಕ್ಷೇತ್ರ ಎನಿಸಿತು. ಹೀಗೆ ಎಲ್ಲರ ಶಾಪವೂ ಫಲಿಸುತ್ತದೆ. ಭಗವಂತನೇ ಆ ಶಿಲೆಗಳಲ್ಲಿ ಇರುತ್ತಾ ಎಲ್ಲರನ್ನೂ ಅನುಗ್ರಹಿಸುತ್ತಿದ್ದಾನೆ ಎಂಬುದು ಕಥೆ. ಇದರ ಅನೇಕ ಭಾಗಗಳು ಶ್ರೀಮದ್ಭಾಗವತದ ಗಜೇಂದ್ರಮೋಕ್ಷ ಕಥೆಯನ್ನು ಹೋಲುತ್ತದೆ.

**ತುಳಸೀ ಮತ್ತು ಶಾಲಗ್ರಾಮ ಶಿಲೆ** ಬ್ರಹ್ಮವೈವರ್ತ ಪುರಾಣದ ಪ್ರಕೃತಿಸ್ಕಂದ ೧೫ರಲ್ಲಿ ಹಾಗೂ ಪದ್ಮಪುರಾಣದ ಕ್ರಿಯಾಯೋಗಸಾರದಲ್ಲಿ ಶಾಲಗ್ರಾಮ ಮತ್ತು ತುಳಸಿಯ ಬಗ್ಗೆ ಈ ರೀತಿಯಾಗಿ ಕಥೆಯನ್ನು ಹೇಳಲಾಗಿದೆ:

ವೃಷಧ್ವಜ ಎಂಬ ವೈಷ್ಣವ ಪಂಗಡಕ್ಕೆ ಸೇರಿದ ರಾಜನು, ಮಹಾವಿಷ್ಣುವನ್ನು ಪೂಜಿಸುವ ಬದಲಾಗಿ ಈಶ್ವರನನ್ನು ಕಟ್ಟುನಿಟ್ಟಾಗಿ ಪೂಜೆ ಮಾಡುತ್ತಿದ್ದನು. ಈತನಿಗೆ ಮಹಾವಿಷ್ಣುದೇವರ ಮೇಲೆ ಕಿಂಚಿತ್ತೂ ನಂಬಿಕೆ ಇಲ್ಲದ ಕಾರಣ, ಈತನು ಮಹಾವಿಷ್ಣುದೇವರ ಪೂಜೆ ಮಾಡುವುದನ್ನು ಅವಹೇಳನ ಮಾಡಲು ಆರಂಭಿಸಿದ. ಈತನ ಈ ಅಪರಾಧಗಳನ್ನು ಗಮನಿಸಿದ ಸೂರ್ಯದೇವರು ವೃಷಧ್ವಜನಿಗೆ ಆತನ ಸಂಪತ್ತು ಮತ್ತು ಅಧಿಕಾರ ಕಳೆದುಕೊಳ್ಳಲಿ ಎಂದು ಶಪಿಸಿದ. ಈತ ಮತ್ತು ಈತನ ಮುಂದಿನ ಎರಡು ತಲೆಮಾರುಗಳ ವರೆಗೆ, ಅಂದರೆ ಧರ್ಮಧ್ವಜನು ಹುಟ್ಟುವವರೆಗೆ ಈ ಶಾಪವು ಫಲಿಸಿತು. ಧರ್ಮಧ್ವಜ ಮತ್ತು ಆತನ ಹೆಂಡತಿಯು ಅನನ್ಯ ಭಕ್ತಿಯಿಂದ ಲಕ್ಷ್ಮೀದೇವಿಯ ಸಾಕ್ಷಾತ್ಕಾರ ಮಾದಿಕೊಳ್ಳಲು, ಪೂಜಿಸಲು ಆ ಲಕ್ಷ್ಮೀದೇವಿಯ ಒಂದು ಅಂಶವೇ ಧರ್ಮಧ್ವಜನ ಮಡದಿಯ ಹೊಟ್ಟೆಯಲ್ಲಿ ಮಗುವಾಗಿ ಸೇರಿಕೊಂಡಳು. ಧರ್ಮಧ್ವಜನ ಹೆಂಡತಿಯಾದ ಮಾಧವಿಯ ಹೊಟ್ಟೆಯಿಂದ, ಒಂದು ಅತಿ ಸುಂದರಿಯಾದ ಹೆಣ್ಣುಮಗುವೊಂದು, ಅತ್ಯಂತ ಶುಭದಿನವೆಂದು ಪರಿಗಣಿಸಲಾಗುವ ಕಾರ್ತಿಕ ಮಾಸದ ಹುಣ್ಣಿಮೆಯಂದು ಜನಿಸಿತು.

ಸದ್ಗುಣ, ಸಕಲ ಅದೃಷ್ಟಗುಣ(ಸಕಲೈಶ್ವರ್ಯ)ಗಳನ್ನೂ ತರುವ ಸೂಚಕಳಾಗಿ, ಅತ್ಯಂತ ಸ್ಫುರದ್ರೂಪಿಣಿಯಾದ ಇವಳು ತನ್ನ ಹದಿನಾರನೆಯ ವರ್ಷದಲ್ಲಿಯೇ ಪ್ರತಿಯೊಬ್ಬನ ಮನಸ್ಸು ಮತ್ತು ಹೃದಯವನ್ನು ಕದಿಯುವಂತಾಗಿತ್ತು. ಹಾಗೂ ಇವಳನ್ನು ಯಾರೊಂದಿಗೂ ತುಲನೆ ಮಾಡಲು ಅಸಾಧ್ಯವಾಗಿತ್ತು. ಅಂತಹ ಸದ್ಗುಣೆ, ಸ್ಫುರದ್ರೂಪಿ, ಸಕಲೈಶ್ವರ್ಯ ಮಗುವೇ ತುಳಸಿ. ಅನಂತರದ ದಿನಗಳಲ್ಲಿ ತುಳಸಿಯು ಮನೆಯನ್ನು ತ್ಯಜಿಸಿ, ವೃಂದಾವನಕ್ಕೆ ಬಂದು ಅಲ್ಲಿ ಸಾಕ್ಷಾತ್ ನಾರಾಯಣನೇ ತನ್ನ ಗಂಡನಾಗಬೇಕೆಂಬ ದೃಢಮನಸ್ಸನ್ನು ಮಾದಿ ಕಠಿನವಾದ ತಪಸ್ಸನಾಚರಿಸಿದಳು. ಅವಳ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ ಅವಳ ಇಚ್ಛೆಯಂತೆ ಬೇಕಾದ ವರವನ್ನು ಕೇಳೆಂದನು. ತುಳಸಿಯು ಬ್ರಹ್ಮನನ್ನು ಕುರಿತು ಈ ರೀತಿಯಾಗಿ ಕೇಳಿ ಕೊಂಡಳು: "ನಾನು ನನ್ನ ಹಿಂದಿನ ಜನ್ಮದಲ್ಲಿ ಗೋಲೋಕದಲ್ಲಿ ಗೋಪಿಯಾಗಿದ್ದೆ. ನನ್ನ ಅದೃಷ್ಟವಶಾತ್ ನಾನು ಶ್ರೀಕೃಷ್ಣನಿಗೆ ತುಂಬ ಇಷ್ಟವಾದ, ಪ್ರೀತಿಯವಳಾದ ಕೆಲಸಗಾತಿಯಾಗಿದ್ದೆ. ಒಂದು ದಿನ ರಾಧೆಯು, ರಾಸಮಂಡಲದಲ್ಲಿ (ನೃತ್ಯ) ಸಿಟ್ಟುಗೊಂಡು ನಾನು ಭೂಮಿಯಲ್ಲಿ ಮಾನವಜನ್ಮ ತಾಳುವಂತೆ ಶಪಿಸಿದಳು. ಆ ಪ್ರಕಾರವಾಗಿ ನಾನು ನನ್ನ ಶರೀರವನ್ನು ತ್ಯಜಿಸಿ, ಭೂಮಿಯಲ್ಲಿ ಇದೀಗ ಮಾನವಳಾಗಿ –ತುಳಸಿಯಾಗಿ– ಜನ್ಮವೆತ್ತಿದ್ದೇನೆ. ನಾನೀಗ ಸಾಕ್ಷಾತ್ ನಾರಾಯಣದೇವರೇ ನನ್ನ ಗಂಡನಾಗಿ ಪಡೆಯುವಂತಾಗಲಿ ಎಂಬ ವರವನ್ನು ಬೇಡುತ್ತಿದ್ದೇನೆ."

ಅದಕ್ಕೆ ಬ್ರಹ್ಮದೇವರು– "ಈಗಾಗಲೇ ಭೂಮಿಯಲ್ಲಿ 'ಸುಧಾಮ' ಎಂಬ ಗೋಪಾಲಕನು (ತುಳಸಿಯನ್ನು ಪ್ರೇಮಿಸಿದ್ದರಿಂದ) ರಾಧೆಯ ಶಾಪಕ್ಕೊಳಗಾಗಿ ಮಾನವನಾಗಿ ಜನ್ಮವೆತ್ತಿದ್ದಾನೆ. ಆ ಶಾಪದಿಂದಾಗಿ ಅವನು ಅಸುರರ ವಂಶದಲ್ಲಿ 'ಶಂಖಚೂಡ'ನೆಂದು ಪ್ರಸಿದ್ಧನಾಗಿದ್ದಾನೆ. (ಭೂಮಿಯಲ್ಲಿ) ಅವನು ಕಠಿನವಾದ ತಪಸ್ಸಿನಿಂದ ಅನೇಕ ವರಗಳನ್ನು ಪಡೆದುದಲ್ಲದೇ, ನಿನ್ನನ್ನು ಸಹ ಮಡದಿಯಾಗಿ ಪಡೆಯಲು ವರವನ್ನು ಬೇಡಿದ್ದಾನೆ. ಆ ಪ್ರಕಾರ ನಿನಗೆ ನಿನ್ನ ಜೀವನದಲ್ಲಿ ಸ್ವಲ್ಪಕಾಲ ಭಗವದಂಶಸಂಭೂತನಾದ ಅವನು ನಿನ್ನ ಗಂಡನಾಗುತ್ತಾನೆ. ಅನಂತರ ಒಂದು ಸಣ್ಣ ಪ್ರಮಾದದಿಂದಾಗಿ ನೀನು ನಾರಾಯಣದೇವರನ್ನೇ ಶಪಿಸಿ, ಆ ಭಗವಂತನು ನಿನ್ನ ಶಾಪವನ್ನು ಸ್ವೀಕರಿಸಿ ಬಳಿಕ ಆತನನ್ನೇ ನೀನು ನಿನ್ನ ಗಂಡನಾಗಿ ಪಡೆಯುವಿ. ಶ್ರೀಮಹಾವಿಷ್ಣುವು ತನ್ನ ಉಳಿದೆಲ್ಲಾ ಪತ್ನಿಯರಿಗಿಂತ ನಿನ್ನನ್ನು ಹೆಚ್ಚು ಪ್ರೀತಿಸುತ್ತಾ, ನೀನಿಲ್ಲದೆ ಅವನನ್ನು ಮಾಡುವ ಪೂಜೆಯೇ ನಿಷ್ಪ್ರಯೋಜಕವಾಗುವುದು. ನನ್ನ ಅನುಗ್ರಹದಿಂದ ನೀನು ಎಲ್ಲ ಜಾತಿಯ ಸಸ್ಯ, ಜೀವಿಗಳ

ಗಿಂತಲೂ ಪ್ರಮುಖವಾಗಿ ಪೂಜಿಸಲ್ಪಡುವವಳಾಗಿ, ನೀನು ಶ್ರೀಮಹಾವಿಷ್ಣುವಿನೊಂದಿಗಿದ್ದು ಅಪಾರ, ಅಪರಿಮಿತ ಸುಖವನ್ನು ಸ್ವಚ್ಛಂದವಾಗಿ ಪಡೆಯುವವಳಾಗುವೆ" ಎಂದು ಹರಸಿದನು.

ಶಂಖಚೂಡನು ತನಗೆ ಬೇಕುಬೇಕಾದ ವರಗಳೊಂದಿಗೆ ಯಾರಿಂದಲೂ ಭೇದಿಸಲಾಗದ ಕವಚವನ್ನು ಬ್ರಹ್ಮದೇವರಿಂದ ಪಡೆದು, ಬದರೀವನದಲ್ಲಿ ತುಳಸಿಯನ್ನು ಸಂಧಿಸಿದನು. ಆಗ ಅವರಿಬ್ಬರೂ ಪರಸ್ಪರ ಮಾತುಕತೆ ನಡೆಸಲು, ಬ್ರಹ್ಮ ದೇವನು ಪ್ರತ್ಯಕ್ಷನಾಗಿ– "ಎಲೈ ಶಂಖಚೂಡನೇ, ಈ ಸ್ಫುರದ್ರೂಪಿಯಾದ, ಎಳೆವಯಸ್ಸಿನ ತುಳಸಿಯನ್ನು ನಿನ್ನ ಹೆಂಡತಿಯಾಗಿ ಸ್ವೀಕರಿಸು" ಎಂದೂ ಅನಂತರ ತುಳಸಿಯತ್ತ ತಿರುಗಿ– "ಈ ಶಂಖಚೂಡನ ಮರಣಾನಂತರ ನೀನು ಭಗವಾನ್ ವಿಷ್ಣುದೇವನನ್ನೇ ಗಂಡನನ್ನಾಗಿ ಪಡೆಯುವಿ" ಎಂದೂ ಹೇಳಿ ಅಂತರ್ಧಾನನಾದನು. ಶಂಖಚೂಡನು ಬ್ರಹ್ಮನಿಂದ "ಎಲ್ಲಿಯ ವರೆಗೆ ನಿನ್ನ ಪತ್ನಿಯು ಪಾತಿವ್ರತ್ಯವನ್ನು ಹೊಂದಿರುವಳೋ ಅಲ್ಲಿಯವರೆಗೆ ನಿನ್ನನ್ನು ಮೂರು ಲೋಕಗಳಲ್ಲಿ ಯಾರೂ ಕೊಲ್ಲಲು ಸಾಧ್ಯವಿಲ್ಲ" ಎಂಬ ವರವನ್ನು ಪಡೆದಿದ್ದನು. ತುಳಸಿಯು ಒಂದು ಮನ್ವಂತರಗಳ ಕಾಲ ಶಂಖಚೂಡನೊಂದಿಗೆ ಜೀವನ ಸಾಗಿಸಿದಳು. ಹೀಗಾಗಿ ತನ್ನ ಮದಬಲದಿಂದ ಋಷಿಮುನಿಗಳನ್ನು, ಮಾನವರನ್ನು, ಪೀಡಿಸ ತೊಡಗಿದನು. ಈತನಿಂದ ತುಂಬ ನೊಂದಂತಹ ದೇವತೆಗಳು, ಋಷಿಗಳು, ಮುನಿಗಳು, ಭಗವಾನ್ ಈಶ್ವರ ನಲ್ಲಿಗೆ ಹೋಗಿ ಆತನಿಂದ ರಕ್ಷಣೆ ಪಡೆಯಲು ಬಿನ್ನವಿಸಿಕೊಂಡರು. ಸಾಕ್ಷಾತ್ ಶಂಕರನೇ ಶಂಖಚೂಡ ನೊಂದಿಗೆ ಯುದ್ಧಕಣಕ್ಕಿಳಿದನು.

ಈ ಮಧ್ಯೆ, ಭಗವಾನ್ ವಿಷ್ಣುವು ತುಳಸಿಯ ಪಾತಿವ್ರತ್ಯವನ್ನು ಹಾಳು ಮಾಡಿ, ದುಷ್ಟನ ಸಂಹಾರ ಮಾಡಲು ಉಪಾಯ ಹೂಡಿದನು. ಭಗವಾನ್ ಶಿವ ಮತ್ತು ಶಂಖಚೂಡರೀರ್ವರೂ ಯುದ್ಧಭೂಮಿಯಲ್ಲಿ ಭಯಂಕರವಾದ ಯುದ್ಧ ಮಾಡುತ್ತಿರಲು, ಭಗವಾನ್ ಹರಿಯು ಬ್ರಾಹ್ಮಣವೇಷದಿಂದ ಯುದ್ಧಭೂಮಿಗೆ ಆಗಮಿಸಿದನು. ಬ್ರಹ್ಮನು ಶಂಖಚೂಡ ನಲ್ಲಿ– "ಬ್ರಾಹ್ಮಣನಾದ ನನಗೆ ನಿನ್ನ ಕವಚವನ್ನು ದಾನರೂಪದಲ್ಲಿ ಕೊಡು" ಎಂದು ಬೇಡಿದನು. ಶಂಖಚೂಡನು ದಾನರೂಪದಲ್ಲಿ ಆ ಬ್ರಾಹ್ಮಣನಿಗೆ ತನ್ನ ಕವಚವನ್ನು ದಾನ ಮಾಡಿದನು. ಅನಂತರ ಭಗವಾನ್ ಶ್ರೀಹರಿಯು ಉಪಾಯವಿಲ್ಲದೇ ಶಂಖಚೂಡನ ವೇಷ ಧರಿಸಿ ತುಳಸಿಯನ್ನು ನೋಡಲು ಹೋದ. ಈ ರೀತಿಯಲ್ಲಿ ಅವಳನ್ನು ಮೋಸಗೊಳಿಸಿ, ಅವಳೊಂದಿಗೆ ಅವಳ ಗಂಡನಂತೆಯೇ ಇದ್ದು, ಅವಳಲ್ಲಿ ಸುಖ ಪಡೆದು, ಅವಳ ಪಾತಿವ್ರತ್ಯವನ್ನು ಹಾಳುಗೆಡವಿದನು. ಇದನ್ನು ಭವಿಷ್ಯಪುರಾಣವು ಸವಿಸ್ತಾರವಾಗಿ ವಿವರಿಸಿ, ಇದರಲ್ಲಿ ಭಗವಾನ್ ವಿಷ್ಣುವಿನ ಎಳ್ಳಷ್ಟೂ ದೋಷವಿಲ್ಲ ಎಂದೂ, ಬ್ರಹ್ಮನು ತನ್ನ ಭಕ್ತನಿಗೆ ನೀಡಿದ ವರವನ್ನು ಸಫಲಗೊಳಿಸುವುದಕ್ಕೋಸ್ಕರ ಶ್ರೀಹರಿಯು ಈ ರೀತಿಯಾಗಿ ಮಾಡಿದ್ದಾಗಿಯೂ, ಅದೇ ರೀತಿ ಮುನಿಗಳು, ಮನುಷ್ಯರು ಹಾಗೂ ಇತರ ದೇವತೆಗಳನ್ನು ರಾಕ್ಷಸರಿಂದ ಕಾಪಾಡಲು ಈ ರೀತಿ ನಡೆದು ಕೊಂಡನೆಂದೂ ಹೇಳಿದೆ. ಈ ಕಾರಣದಿಂದಾಗಿ, ಆ ರಾಕ್ಷಸನದ್ದೇ ಆದ ಬದಲುರೂಪ ಧರಿಸಿ ಈ ರೀತಿ ವರ್ತಿಸಿದನೆಂದೂ ವಿವರಿಸಿದೆ. ಅದೇ ತರಹ ತುಳಸಿಯು ಲಕ್ಷ್ಮೀದೇವಿಯ ಅಂಶವೇ ಆದುದರಿಂದ ಅವಳು ವಿಷ್ಣುವಿನ ಹೆಂಡತಿಯೇ. ಇದೇ ಸಮಯದಲ್ಲಿ ಶಂಖಚೂಡನನ್ನು ಶಂಕರನು ಯುದ್ಧಭೂಮಿಯಲ್ಲಿ ಸಂಹರಿಸಿದ. ನಡೆದುದನ್ನೆಲ್ಲಾ ಅರಿತುಕೊಂಡ ತುಳಸಿಯು ಕೋಪದಿಂದ ಸಿಟ್ಟು ಗೊಂಡು– "ನನ್ನನ್ನು ಮೋಸಗೊಳಿಸಿ ನನ್ನ ಪಾತಿವ್ರತ್ಯವನ್ನು ಹಾಳುಮಾಡಿ ನನ್ನ ಗಂಡನನ್ನು ಕೊಂದಿದ್ದೀಯಾ. ನೀನು ನಿಜವಾದ ಕಲ್ಲುಹೃದಯದವನೇ. ಆದ್ದರಿಂದ ನೀನು ಈ ಭೂಮಿಯಲ್ಲಿ ಕಲ್ಲಾಗಿ ಹುಟ್ಟು" ಎಂದು ಶಪಿಸಿದಳು. ಅದಕ್ಕೆ ಶ್ರೀಹರಿಯು– "ನೀನು ನನ್ನನ್ನು ಪಡೆಯುವುದಕ್ಕೋಸ್ಕರ ಬಹಳ ವರ್ಷದಿಂದ ಕಠಿನವಾದ ತಪಸ್ಸ ನ್ನಾಚರಿಸಿದ್ದೀಯಾ. ಅದೇ ತರಹ ನಿನ್ನನ್ನು ಪತ್ನಿಯನ್ನಾಗಿ ಪಡೆಯುವುದಕ್ಕೋಸ್ಕರ ಶಂಖಚೂಡನೂ ತಪಸ್ಸನ್ನಾಚರಿಸಿದ್ದಾನೆ. ಆ ಪುಣ್ಯದ ಫಲವಾಗಿಯೇ ಆತನು ನಿನ್ನನ್ನು ಪತ್ನಿಯನ್ನಾಗಿ ಪಡೆದುದಲ್ಲದೆ ಈಗ ಗೋಲೋಕವನ್ನು (ಸುಧಾಮನ ರೂಪಹೊಂದಿ) ತಲುಪಿದ್ದಾನೆ. ಈ ನಿನ್ನ ತಪಸ್ಸಿನ ಫಲ ಒದಗುವ ಕಾಲ

ಸನ್ನಿಹಿತವಾಗಿದೆ. ನೀನು ನಿನ್ನ ಮಾನವ ಶರೀರವನ್ನು ತ್ಯಜಿಸಿ, ದೇವತಾಶರೀರಸ್ಥಳಾಗಿ ನನ್ನೊಂದಿಗೆ ಯಾವಾಗಲೂ ಇರುವ ಕಾಲ ಸನ್ನಿಹಿತವಾಗಿದೆ. ನಿನ್ನ ಶರೀರವು ಗಂಡಕೀನದಿಯಾಗಿ ಪರಿವರ್ತನೆಗೊಂಡು ನಿನ್ನ ತಲೆಗೂದಲುಗಳು 'ತುಳಸೀ' ಎಂಬ ಅತ್ಯಂತ ಪ್ರಸಿದ್ಧವಾದ ಸಸ್ಯರಾಶಿಯಾಗಿ ಬೆಳೆಯಲಿ. ನಿನ್ನ ಶಾಪವು ಫಲಿಸುವುದಕ್ಕೋಸ್ಕರವಾಗಿ ನಾನು ಶಾಲಗ್ರಾಮಶಿಲೆಯ ರೂಪದಲ್ಲಿ ನಿನ್ನ ಒಡಲಲ್ಲಿಯೇ ಇದ್ದು, ಈ ಗಂಡಕೀನದಿಯಲ್ಲಿರುತ್ತೇನೆ. ಇದರಲ್ಲಿಯ ಲಕ್ಷಾಂತರ ಹುಳುಗಳು ನನ್ನ ಈ ಶಿಲಾರೂಪದೊಳಗೆ ಹೊಕ್ಕು, ನನ್ನ ಪ್ರತೀಕವಾದ ಚಕ್ರಗಳನ್ನು ಅವುಗಳ ಹರಿತವಾದ ಹಲ್ಲಿನಿಂದ ಕೊರೆಯಲಿ" ಎಂದು ಹಾರೈಸಿದ. ಭಗವಂತನು– "ನಿನ್ನ ಅಂಶವು ಲಕ್ಷ್ಮೀದೇವಿಯೊಡನೆ ಸೇರುತ್ತದೆ. ನೀನು ಈ ದೇಹವನ್ನು ತ್ಯಜಿಸು. ಸದಾ ನಿನ್ನೊಂದಿಗಿರುತ್ತದೆ" ಎಂದು ಹೇಳಿದ ಪ್ರಕಾರವೇ ಗಂಡಕಿಯು ನದಿಯಾಗಿ ಮಾರ್ಪಾಡಾದಳು. ಅವಳ ತಲೆಗೂದಲುಗಳು ತುಳಸೀ ಸಸ್ಯಗಳಾದವು. ತುಳಸಿಯು ತನ್ನ ತಪ್ಪನ್ನರಿತು ವಿಷ್ಣುವಿನ ಕಾಲಿಗೆ ಬಿದ್ದು ತುಂಬ ಅತ್ತಳು. ಆ ಪ್ರಕಾರವಾಗಿ ಭಗವಾನ್ ವಿಷ್ಣುವು ಯಾವಾಗಲೂ ಈ ಗಂಡಕೀನದಿಯಲ್ಲಿ ಹೊಳೆಯುವ ನುಣುಪಾದ ಶಿಲಾರೂಪದಿಂದ ಕಂಗೊಳಿಸುತ್ತಿದ್ದಾನೆ.

**ವಾರಾಹ ಪುರಾಣ ಹೇಳುವ ಪ್ರಕಾರ** : ಗಂಡಕೀ ಎಂಬ ಹೆಸರಿನ ವೇಶ್ಯೆಯೊಬ್ಬಳು ತನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಪರಿತಪಿಸಿ ಭಗವಂತನನ್ನು ಕುರಿತು ತಪಸ್ಸು ಮಾಡಿ, ಶರೀರಶೋಷಣೆ ಮಾಡುತ್ತಿರುವಾಗ ದೇವರು ಪ್ರತ್ಯಕ್ಷನಾಗಿ ಏನು ವರ ಬೇಕೆಂದು ಕೇಳಿದಾಗ, "ನೀನು ನನ್ನ ಮಗನಾಗಬೇಕು. ನನ್ನ ಬಸಿರಲ್ಲಿ ಹುಟ್ಟಬೇಕು" ಎಂದು ಕೇಳಿದಳೆಂದೂ ಅವಳ ಅಪವಿತ್ರ ಜನ್ಮದಲ್ಲಿ ಅದು ಅಸಾಧ್ಯವೆಂದ ಭಗವಂತನು, ಕೃಪೆಯಿಂದ ಅವಳನ್ನು ನದಿಯನ್ನಾಗಿ ಪರಿವರ್ತಿಸಿ, ಅವಳ ಗರ್ಭ ತುಂಬಾ ತಾನೇ ಅನೇಕ ರೂಪಗಳನ್ನು ತಳೆದು, ಅವಳಿಗೆ ಕೊಟ್ಟ ಮಾತನ್ನು ನಡೆಸಿದ ಎಂದೂ ಹೇಳಲಾಗಿದೆ.

**ಮತ್ತೊಂದು ಕತೆಯಲ್ಲಿ** : ಕಲಿಯುಗದಲ್ಲಿ ಭಗವಂತನು ಭಕ್ತರ ಸುಲಭಪೂಜೆಗಾಗಿ, ತಾನೇ ವಜ್ರಕೀಟ ವೆಂಬ ದುಂಬಿಯ ಆಕೃತಿಯಲ್ಲೂ ಈ ಶಿಲೆಗಳನ್ನು ಕೊರೆದು ತನ್ನ ಚಿಹ್ನೆಗಳನ್ನು ಹಾಕಿ ಉಪಕರಿಸಿದ ಎಂಬ ಕತೆಯೂ ಇದೆ.

**ಇನ್ನೊಂದು ಜನಜನಿತ ಕಥೆಯ ಪ್ರಕಾರ** : ನವಗ್ರಹಗಳಲ್ಲಿ ಶನಿಯು ವಿಷ್ಣುವಿಗೆ ಪೀಡೆ ಕೊಡಲು ಹೊಂಚು ಹಾಕಿದನಂತೆ (ಮೊದಲು ಪ್ರಾರ್ಥಿಸಿ, ಅನಂತರ ಪೀಡಿಸಿದ). ಸಕಲ ಪಾಪನಿವಾರಕನಾದ ಭಗವಂತನು ಶನಿಯ ಪ್ರಾರ್ಥನೆಯನ್ನು ಮನ್ನಿಸದೇ ಹೋದಾಗ, ಶನಿಯು ವಂಚನೆಯ ಮಾರ್ಗವನ್ನು ಹುಡುಕಲು ವಿಷ್ಣುವು ಗಂಡಕವೆಂಬ ಪರ್ವತರೂಪವನ್ನು ತಾಳಿ ಮರೆಯಾದನಂತೆ. ಅದೇ ಶೈಲ ಮಾಯೆ ಎಂದೆನಿಸಿ, ಅದುವೇ ಶಾಲಗ್ರಾಮ ಪರ್ವತವಾಯಿತು. ಇದನ್ನು ಶನಿಯು ಹೇಗೋ ಪತ್ತೆ ಹಚ್ಚಿ, ಹುಳುವಿನ ರೂಪದಿಂದ ಈ ಪರ್ವತವನ್ನು ಹೊಕ್ಕು ಎಲ್ಲಾ ಕಡೆಯಿಂದಲೂ ತೂತು ಮಾಡಿದನಂತೆ. ಶನಿಯ ಈ ಕಾಟವು ಶನಿದಶೆ ಮುಗಿಯುವ ವರೆಗೂ ನಡೆದೇ ಹೋಯಿತು. ಭಗವಾನ್ ವಿಷ್ಣುವಿಗೆ ಮೈ ಬೆವರಿ, ತಲೆಯ ಗಂಡಸ್ಥಳದ ದ್ವಾರಗಳೆರಡರಲ್ಲೂ ಆ ಬೆವರೇ ನದಿಯಾಗಿ ಹರಿದು, ಅದೇ ಮುಂದೆ ಗಂಡಕೀ ಎಂಬ ಕಪ್ಪು ನೀರು ನದಿಯಾಗಿಯೂ, ಶ್ವೇತಾ ಎಂಬ ಬಿಳಿ ನೀರು ನದಿಯಾಗಿಯೂ ಒಂದು ಪೂರ್ವಾಭಿಮುಖಿ ವಾಗಿ ಹಾಗೂ ಇನ್ನೊಂದು ಪಶ್ಚಿಮಾಭಿಮುಖಿವಾಗಿ ಹರಿಯಿತಂತೆ. ಶನಿದೇವರ ಕಾಟ ಮುಗಿದ ಮೇಲೆ, ಭಗವಾನ್ ವಿಷ್ಣುವು ಮೂಲ ರೂಪಕ್ಕೆ ಬಂದ ಅನಂತರವೂ ಈ ಮಾಯಾಪರ್ವತವು ಆತನ ಹಳೆಯ ನಿವಾಸವೆಂದೇ ಪ್ರಸಿದ್ಧಿಪಡೆದು, ಇಲ್ಲಿ ಪೂಜಿಸುವವರಿಗೆ, ಸಂದರ್ಶಿಸುವವರಿಗೆ, ಈ ನದೀತಲದ ಶಾಲಗ್ರಾಮ ಶಿಲೆಗಳ ಪೂಜೆ ಮಾಡುವವರಿಗೆ ಮೋಕ್ಷ ದೊರಕಲಿ ಎಂದು ಭಗವಾನ್ ವಿಷ್ಣುವು ಹರಸಿದನಂತೆ. ಇದು ಜನಜನಿತವಾದ ಕಥೆ.

**ಮತ್ತೊಂದು ಕಥೆಯ ಪ್ರಕಾರ** : ಗಂಡಕೀ ಎಂಬ ತಪಸ್ವಿನಿಯ ಶಾಪದಿಂದ ದೇವತೆಗಳು ವಜ್ರಕೀಟ ಗಳೆಂಬ ಕಲ್ಲು ಕೊರೆಯುವ ಹುಳುಗಳಾದರೆಂದೂ, ಗಂಡಕಿಯು ಶಾಪದಿಂದ ನದಿಯಾದಳೆಂದೂ, ಶಾಪ ವಿಮೋಚನೆಗಾಗಿ ಇಬ್ಬರೂ ಭಗವಂತನನ್ನು ಆಶ್ರಯಿಸಿದಾಗ, ಭಗವಂತನೇ ಈ ನದಿಯ ಶಿಲೆಗಳಲ್ಲಿ ಆ ದೇವತೆಗಳಿಂದ ತನ್ನ ಸೇವೆ ಮಾಡಿಸಿಕೊಂಡು, ತನ್ನ ಚಿಹ್ನೆ ಹಾಕಿಸಿ, ಇಬ್ಬರನ್ನೂ ಶಾಪಮುಕ್ತರನ್ನಾಗಿರಿಸಿದನು. ಇದರ ರೂಪಾಂತರದಲ್ಲಿ ಬ್ರಹ್ಮರುದ್ರರಿಗೆ ಮಾತ್ರ ಈ ಶಾಪ ಬಂದು ಹೀಗೆ ಅವರ ವಿಮೋಚನೆ ಆದುದೆಂದು ಹೇಳಿದೆ.

**ಇನ್ನೊಂದು ಕಥೆ ಈ ರೀತಿಯಾಗಿದೆ** : ಒಂದು ಬಾರಿ ನಾರಾಯಣನು (ಹಿರಣ್ಯಗರ್ಭನು) ತನ್ನನ್ನು ಚಿನ್ನದ ಕೀಟದಂತೆ (ವಜ್ರಕೀಟ) ಪರಿವರ್ತಿಸಿಕೊಂಡು ಭೂಲೋಕವನ್ನು ಪ್ರದಕ್ಷಿಣೆ ಮಾಡತೊಡಗಿದನು. ಈ ಅದ್ಭುತ ದೃಶ್ಯವನ್ನು ಕಂಡಂತಹ ಉಳಿದ ದೇವತೆಗಳೂ ತಮ್ಮನ್ನು ತಾವೇ ಈ ಕೀಟಗಳಂತೆ ಪರಿವರ್ತಿಸಿ ಕೊಂಡು ಆ ವಜ್ರಕೀಟಗಳೊಂದಿಗೆ ಪರ್ಯಟನೆಯನ್ನು ವೇಗವಾಗಿ ಮಾಡತೊಡಗಿದರು. ಇದೀ ಜಗತ್ತೇ ಈ ಕೀಟಗಳಿಂದ ತುಂಬಿ, ಇದರ ಝೇಂಕಾರ ನಾದ ಆಕಾಶವನ್ನೆಲ್ಲ ತುಂಬಿಕೊಂಡಿತು. ಇದನ್ನು ನೋಡಿದಂತಹ ವಿಷ್ಣುವಿನ ವಾಹನವಾದ ಗರುಡನು ತನ್ನನ್ನು ತಾನೇ ದೊಡ್ಡ ಪರ್ವತವನ್ನಾಗಿಸಿ, ಭಗವಾನ್ ವಿಷ್ಣು ಮತ್ತು ಇತರ ದೇವತೆಗಳ ಚಾಲನೆಯನ್ನು ತಡೆಹಿಡಿದ. ಈ ಘಟನೆಯನ್ನು ಗಮನಿಸಿದಂತಹ ಶ್ರೀಮನ್ನಾರಾಯಣನು ಪರ್ವತದ ಒಂದು ಸಣ್ಣ ರಂಧ್ರ(ಛಿದ್ರ)ದೊಳಗೆ ಹೊಕ್ಕಾಗ ಇತರ ದೇವತೆಗಳೂ ಆತನನ್ನೇ ಅನುಸರಿಸಿದರು. ಪ್ರತಿಯೊಂದು ಕೀಟವು ತನ್ನದೇ ಆದಂತಹ ಮನೆಯನ್ನು ಈ ಪರ್ವತದೊಳಗೆ ಕೊರೆಯಲಾರಂಭಿಸಿತು. ಹಾಗೂ ಅವೆಲ್ಲವೂ ಶ್ರೀಮನ್ನಾರಾಯಣನ ಚಕ್ರದ ಚಿಹ್ನೆಯನ್ನೇ ಹೊಂದಿದ್ದವು. ಇವುಗಳಿಗೆ ಶಾಲಗ್ರಾಮ ಗಳೆಂದು ಹೆಸರು.

**ಜೈಮಿನಿಭಾರತದಲ್ಲಿ ರಾಜಾ ಚಂದ್ರಹಾಸನ ಕಥೆ ಈ ರೀತಿಯಾಗಿದೆ:** ಮೂಲಾನಕ್ಷತ್ರದ ಅರಿಷ್ಟಾಂಶ ದಲ್ಲಿ ಹುಟ್ಟಿದ ರಾಜಾ ಚಂದ್ರಹಾಸ ಬಾಲ್ಯದಲ್ಲಿಯೇ ತಂದೆ, ತಾಯಿ ಮತ್ತು ದಾದಿಯನ್ನು ಕಳೆದುಕೊಂಡು ಅನಂತರದ ದಿನಗಳಲ್ಲಿ ಅವರಿವರಿಂದ ಬೆಳೆದು ಬಳಿಕ ದುಷ್ಟಬುದ್ಧಿಯೆಂಬ ರಾಜ್ಯಾಪಹಾರಕ ಮಂತ್ರಿಯ ಸಂಚಿನಿಂದಲೂ ಪಾರಾದ. ಅನಂತರ ಅವನ ಮಗಳನ್ನೇ ವಿವಾಹವಾಗಿ ಮತ್ತೆ ರಾಜ್ಯವನ್ನು ಪಡೆದಂತಹ ಮಹಾನಾಯಕನ ಕಥೆಯಿದೆ. ಈತನ ಬಳಿಯಲ್ಲಿದ್ದದ್ದು ಒಂದು ಪುಟ್ಟ ರತ್ನಗರ್ಭ ಶಾಲಗ್ರಾಮ. ಚಂದ್ರಹಾಸ ಬಾಲಕನಾಗಿದ್ದಾಗ ಅದನ್ನು ಶಾಲಗ್ರಾಮವೆಂದರಿಯದೆ, ಅದನ್ನೇ ಗೋಲಿಯನ್ನಾಗಿ ಉಪಯೋಗಿಸುತ್ತಾ ಅದನ್ನು ಇಡಲು ಸುರಕ್ಷಿತ ಜಾಗ ಕಾಣದೆ ತನ್ನ ಬಾಯಿಯೊಳಗೆ (ದವಡೆಯಲ್ಲಿ) ಇಟ್ಟು ಮಲಗುತ್ತಿದ್ದ. ಆ ಶಾಲಗ್ರಾಮದ ಮಹಿಮೆಯಿಂದ ಮತ್ತೆ ಸಕಲೈಶ್ವರ್ಯವನ್ನು ಪಡೆದ. ಇದನ್ನು ಕವಿ ಲಕ್ಷ್ಮೀಶನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಕಥೆಗಳು ಇಷ್ಟು ಸುಂದರವಾಗಿದ್ದರೂ, ಒಂದಕ್ಕೊಂದು ಸಂಬಂಧ, ತಾಳ ಮೇಳಗಳಿಲ್ಲದೆ ಸಮನ್ವಯಿಸುವುದು ಹೇಗೆಂಬ ಪ್ರಶ್ನೆಗೆ ಇಷ್ಟೇ ಉತ್ತರ:

ಇವೆಲ್ಲ ಸಾಂಕೇತಿಕ ಪುರಾಣಕಥೆಗಳು. ಇದರ ಸಾರವನ್ನಷ್ಟೇ ಗ್ರಹಿಸಬೇಕು. ವಿನಾ ವಾಚ್ಯಾರ್ಥ, ಕಥೆಯ ಬಾಹ್ಯಾಂಶಗಳನ್ನಲ್ಲ. ಶಾಲಗ್ರಾಮಶಿಲೆ, ಶಂಖ, ಚಕ್ರ, ತುಳಸಿ, ತಪಸ್ವಿಗಳ ತಪಸ್ಸು, ಶಾಪಗಳು ತೋರಿದರೂ, ಮಹಾತ್ಮರ ಅನುಗ್ರಹ, ಭಗವಂತನ ಕೃಪೆ –ಇವುಗಳಿಂದ ಪೂಜ್ಯವಾದ ಶಾಲಗ್ರಾಮ ಶಿಲೆಗಳು ನಮಗೆ ಪ್ರಾಚೀನಕಾಲದಿಂದ ದೊರೆಯುವಂತಾಗಿದೆ. ಈ ಎಲ್ಲಾ ಕಥೆಗಳು ಬೇರೆಬೇರೆ ಕಾಲಗಳಲ್ಲಿ ಹಾಗೆಯೇ ದೈವ ನಿಯಮದಂತೆ ನಡೆದಿದ್ದರೂ ಗಂಡಕಿಯು ನಿಜವಾಗಿ ಮಹಾಪುಣ್ಯವತೀ ನದಿ. ಆದುದರಿಂದಲೇ ನಮ್ಮ ಪೂರ್ವಜರು ನದಿಗಳನ್ನು ತಾಯಂದಿರು ('ಉಪತೀಠಿವ ಮಾತರಃ') ಎಂದು ಪರಿಗಣಿಸಿದರು. ಇದೇ ಭಾವನೆ ಈ ಪುರಾಣಕಥೆಗಳಲ್ಲಿ ಎದ್ದು ಕಾಣುತ್ತದೆ.

# 2. ಭೌತವೈಜ್ಞಾನಿಕ ದೃಷ್ಟಿಯಲ್ಲಿ ಶಾಲಗ್ರಾಮ ಶಿಲೆಗಳು

- ಕ್ರಿ. ಶ. ೧೮೨೦ರಲ್ಲಿ ಏಷಿಯಾಟಿಕ್ ಸೊಸೈಟಿ ಆಫ್ ಕಲ್ಕತ್ತಾದ ಸಭೆಯೊಂದರಲ್ಲಿ ಡಾ। ಜೆ. ಜಿ. ಜೆರಾರ್ಡ್ ಎಂಬಾತನು ತಾನು ಹಿಮಾಲಯದ ೧೫,೦೦೦ ಅದಿ ಎತ್ತರದ ಶ್ರೇಣಿಗಳಲ್ಲಿ ಒಂದು ಬಗೆಯ ಪುರಾತನ ಪಳೆಯುಳಿಕೆಗಳನ್ನು ಕಂಡು ಹಿಡಿದಿರುವುದಾಗಿಯೂ ಇವುಗಳಲ್ಲಿ ೪ ಬಗೆಯಿದ್ದು ನಾಲ್ಕನೆ ಯದು ತುಂಬಾ ಕುತೂಹಲಕಾರಿಯೆಂದೂ ಪ್ರಬಂಧ ವಿವರಗಳನ್ನು ಮಂದಿಸಿದ. ಇದಕ್ಕಿಂತ ಮೊದಲು ಪಾಶ್ಚಾತ್ಯರಿಗೆ, ವಿಜ್ಞಾನಿಗಳಿಗೆ ಶಾಲಗ್ರಾಮದ ಬಗ್ಗೆ ತಿಳಿದಂತೆ ಕಾಣುವುದಿಲ್ಲ. ಕಬ್ಬಿಣಯುಕ್ತವಾದ ಒಂದು ಬಗೆಯ ಕಲ್ಲುಗಳು, ಲೋಹದ ಕಲ್ಲುಗಳು, ಹಲವಾರು ಲೋಹಗಳು ಸೇರಿ ಮಾದರಿ ಶಿಲೆ ಆಗಿರುವು ದೆಂದೂ ಇದು ಆ ಪರ್ವತಶ್ರೇಣಿಯ ನದಿ ಒಸರುವ ಮಾರ್ಗಗಳಲ್ಲಿ ವಿಪುಲವಾಗಿ ದೊರೆಯುವುದೆಂದೂ ಅವನ ಪ್ರಬಂಧದಲ್ಲಿ ಮಂದಿಸಿದ್ದಾನೆ. Belemnites and Orthoceratites mineralized by the same material as Ammonites. ಲಡಾಖ್‌ನಿಂದ ಬಸಾಹಿರ್ ಎಂಬಲ್ಲಿಗೆ ಹೋಗುವಾಗ ಟಿಬೆಟ್ ಗಡಿಯಲ್ಲಿ ಇಂತಹದೇ ಪಳೆಯುಳಿಕೆಗಳನ್ನು ಸಮುದ್ರಮಟ್ಟದಿಂದ ೧೭,೦೦೦ ಅದಿ ಎತ್ತರದಲ್ಲಿ ಕಂಡುದಾಗಿ ಅವನು ಬರೆದಿದ್ದಾನೆ.
- ಬಿ. ಡಿ. ಬಸು ಎಂಬವರು The Sacred Books of the Hindus ಎಂಬ ಗ್ರಂಥದಲ್ಲಿ ಈ ಗಂಡಕೀ ನದಿಯಲ್ಲಿ ಹಿಂದೆ ಅಪೂರ್ವ ಮಣಿರತ್ನಗಳು ದೊರೆಯುತ್ತಿದ್ದುದಾಗಿಯೂ ಆದುದರಿಂದಲೇ ಈ ಗಂಡಕಿಗೆ ಹಿರಣ್ಯವತೀ, ಹಿರಣ್ಯಾ ಎಂಬ ಹೆಸರುಗಳು ದೇವೀಭಾಗವತದಲ್ಲಿರುವುದು ಅನ್ವರ್ಥವೆಂದೂ ಬರೆದಿದ್ದಾರೆ. ಶಾಲಗ್ರಾಮ ಶಿಲೆಯಲ್ಲಿ ಬಂಗಾರ ಇರುವ ವಿಷಯ ವೈಜ್ಞಾನಿಕವಾಗಿ ಸಾಧಾರ.
- ಪುರಾಣಗಳು ವಜ್ರಕೀಟ ಎಂದದ್ದನ್ನು, ಭೌತಶಾಸ್ತ್ರ-ಸಸ್ಯಶಾಸ್ತ್ರ ವಿಜ್ಞಾನಿಗಳು ಒಂದು ಬಗೆಯ ಮೀನನ್ನು ಹೋಲುವ ಪ್ರಾಚೀನ ಕಾಲದ ಕ್ರಿಮಿಗಳೆಂದೂ ಅವು ೩೦೦ರಿಂದ ೪೦೦ ಮಿಲಿಯ ವರ್ಷಗಳಷ್ಟು ಹಿಂದೆ ಇದ್ದು, ವಾಸಕ್ಕಾಗಿ ಮೃದುವಾದ ಒಂದು ಬಗೆಯ ಶಿಲೆಗಳನ್ನು ಆಶ್ರಯಿಸಿ, ಗೂಡುಕಟ್ಟಿ ಅಥವಾ ಚಿಪ್ಪು ಬೆಳೆಸಿಕೊಂಡು, ಇದಕ್ಕಾಗಿ ಜೇಡನಂತೆ ಬಾಯಿಯಿಂದಲೇ ಒಂದು ದ್ರವ್ಯವನ್ನು ಹೊರ ತೆಗೆದು, ಆಮೇಲೆ ಒಂಟಿತನ ಬೇಸರವಾಗಿ, ಮತ್ತೆ ತೂತು ಕೊರೆದು ಹೊರಗೆ ಬಂದು ಈಸಿ ಹೋಗುತ್ತಿದ್ದವೆಂದೂ ಹಾಗೆ ಉಳಿದ ಶಿಲೆಗಳೇ ಈಗ ನಾವು ಪೂಜಿಸುವ ಶಾಲಗ್ರಾಮಗಳೆಂದೂ ಹೇಳುತ್ತಾರೆ. ಅಲ್ಲಿಗೆ ವಜ್ರಕೀಟಗಳಿಗೆ ಒಂದು ಅರ್ಥ ಬಂದಿತು. ಅದು ದೇವತೆಗಳೇ ಹೇಗೆಂದು ಭೌತಶಾಸ್ತ್ರ ಹೇಳುವುದಿಲ್ಲ.
- The Hindu ಪತ್ರಿಕೆಯು 19-2-1989ರ ಸಂಚಿಕೆಯಲ್ಲಿ ಪ್ರಕಟವಾದ ವರದಿಯಲ್ಲಿ ಹೆಚ್ಚಿನ ವಿವರಗಳಿವೆ. Ammonites ಎಂಬ ಬೆನ್ನೆಲುಬು ಇಲ್ಲದ ಕ್ರಿಮಿಗಳ ಪಳೆಯುಳಿಕೆಗಳೇ ನಾವು ಪೂಜಿಸು ವಂತಹ ಶಾಲಗ್ರಾಮ. ಈ Ammonites ತೇತ್ಯಾ ಎಂಬ ಸಮುದ್ರದಲ್ಲಿದ್ದವು. ಈ ಸಮುದ್ರವು ಈಗಿನ ಭಾರತವು ಒಂದು ದ್ವೀಪವಾಗಿದ್ದ ಕಾಲದಲ್ಲಿ ಏಷ್ಯಾಖಂಡದ ಪ್ರಧಾನ ಭಾಗಕ್ಕೂ ಇದಕ್ಕೂ ನಡುವೆ ಎಂದರೆ ಹಿಮಾಲಯಪರ್ವತವು ಸಂಘರ್ಷದಿಂದ ತಲೆ ಎತ್ತುವ ಮುಂಚೆ ಅಲ್ಲಿದ್ದ ಸಮುದ್ರ ಅಲ್ಲಿ ಸಾವಿರ ಬಗೆಯ ಈ Ammonitesಗಳಿದ್ದವು. ಕೆಲವು ಚಕ್ರಾಕಾರ, ಉಳಿದವು ನೇರವಾದವು. ಈಗ ಉಳಿದವು ಮುತ್ತು ಸೃಷ್ಟಿಸುವ ನಾಟಿಲಸ್ ಜಾತಿಯವು. ಈಗಿನ ಭಾರತವು ಉತ್ತರದತ್ತ ಸರಿಯುತ್ತ ಸರಿಯುತ್ತ ಈ ಸರಿದಾಟ ಸುಮಾರು ೯೦೦೦ ಕಿ.ಮೀ. ದೂರವಾಗಿದ್ದು ಇದಕ್ಕೆ ೨೫೦ ಮಿಲಿಯ ವರ್ಷಗಳಾದರೂ ಹಿಡಿದಿರಬೇಕು. ಅಂದರೆ ಭಾರತ ಹಾಗೂ ತೇತ್ಯಾ ಸಮುದ್ರದಾಚೆನ ಏಷ್ಯಾ

ಭೂಮುಖ್ಯಭಾಗವು ದಿಕ್ಕಿ ಹೊಡೆದು, ಸಮುದ್ರವೂ ಅದರ ಜೀವಜಂತುಗಳೂ ಹೊಸ ಪರ್ವತದಡಿಗೆ ಸಿಕ್ಕು ಅಪ್ಪಚ್ಚಿಯಾದಾಗ ಈ ಕ್ರಿಮಿಗಳು ಅದರಡಿಗೆ ಸಿಕ್ಕಿ ಇಡೀ ಸಂತತಿಯೇ ನಾಶವಾಗಿ ಹೀಗೆ ಪಳೆಯುಳಿಕೆಗಳಾದವು ಎಂದು ಹೇಳುತ್ತಾರೆ. ಅನೇಕ ನದಿಗಳು ಹಿಮಾಲಯ ಬುಡದ ಸಮುದ್ರದಿಂದ ಬುಗ್ಗೆಯೆದ್ದು, ಬೆಟ್ಟವನ್ನು ಸೀಳಿಕೊಂಡು ನದಿಯಾಗಿ ಹೊರ ಹೊಮ್ಮಿದವು. ಇಂತಹ ಒಂದು ನದಿಯೇ ಗಂಡಕೀನದಿ.

- ನಮ್ಮ ನಾಡಿನ ಹೆಮ್ಮೆಯ, ದೇಶವಿದೇಶಗಳಲ್ಲಿಯೂ ಖ್ಯಾತಿಯನ್ನು ಪಡೆದಂತಹ, ಗೀತೆಯ ಬೆಳಕನ್ನು ಪ್ರಪಂಚಕ್ಕೆ ವ್ಯಾಖ್ಯಾನಿಸಿದ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಭಗವದ್ಗೀತೆ/ ಮಹಾಭಾರತದ ಪಾತ್ರಪರಿಚಯವನ್ನು ಮಾಡುವಾಗ ಈ ರೀತಿಯಾಗಿ ವಿವರಿಸಿದ್ದಾರೆ. ಮಹಾಭಾರತದಲ್ಲಿ ಹಿಡಿಂಬೆ, ಘಟೋತ್ಕಚ ಎಂಬ ಪಾತ್ರಗಳು ಬರುತ್ತವೆ. ಕಪ್ಪನೆಯ ಶರೀರ, ಗುಂಗುರು ಕೂದಲು, ದೃಢಕಾಯ –ಈ ಎಲ್ಲ ವಿಶೇಷಗಳನ್ನು ನಾವು ಆಫ್ರಿಕಾ ಜನಾಂಗದವರಲ್ಲಿ ಕಾಣಬಹುದು. ಭಾರತವು ಆಫ್ರಿಕಾ ಖಂಡದ ಉಪಖಂಡವಾಗಿತ್ತು. ಇದು ಹಲವಾರು ಮಿಲಿಯ ವರ್ಷಗಳ ಹಿಂದಿನ ಮಾತು. ಕಾಲ ಕ್ರಮೇಣ ಇದು ತೇಲುತ್ತಾ ತೇಲುತ್ತಾ ಏಷ್ಯಾಖಂಡದ (ಈಗಿರುವ ಚೀನಾ) ಭಾಗಕ್ಕೆ ಅಪ್ಪಳಿಸುತ್ತದೆ ಎಂದು ವರ್ಣಿಸಿರು ತ್ತಾರೆ.
- As per theory of continental drifting. ಆಗ, ಆಗಿನ ಏಷ್ಯಾಖಂಡದ ಸಮುದ್ರಭಾಗದಲ್ಲಿ ಕೊಂಬಿನಂತಹ ರಚನೆಗಳಿದ್ದ ಸಮುದ್ರಪ್ರಾಣಿಗಳಿದ್ದವು. ಅವುಗಳ ಶರೀರದಲ್ಲಿ ಎಲುಬುಗಳಿರುವುದಿಲ್ಲ ಮತ್ತು ಬಹಳ ಗಟ್ಟಿಯಾದ ಚಿಪ್ಪನ್ನು ಹೊಂದಿದ್ದು, ವಿಷಪೂರಿತವಾಗಿದ್ದವು. ಭಾರತ ಮತ್ತು ಏಷ್ಯಾಖಂಡದ ಸಂಘರ್ಷದಿಂದ ಅಲ್ಲಿ ಹಿಮಾಲಯ ಪರ್ವತದ ರಚನೆಯಾಯಿತು. ಏತನ್ಮಧ್ಯೇ ಈ ಸಮುದ್ರಜೀವರಾಶಿಗಳು ಇದರಡಿ ಸಿಕ್ಕು ಇಡಿಯ ಸಂತತಿಯೇ ನಾಶವಾಯಿತು. ಕಾಲಕ್ರಮದಲ್ಲಿ ಇಲ್ಲಿ ಜ್ವಾಲಾಮುಖಿಯಾಗಿರಬೇಕು. ಆಗ ಈ ಜೀವರಾಶಿಗಳು, ಖನಿಜಾಂಶಗಳು, ಲೋಹಗಳು ಸೇರಿ ಕಪ್ಪುಶಿಲೆಯಾಗಿ, ಪಳೆಯುಳಿಕೆಗಳಾದವು. ಈ ಪಳೆಯುಳಿಕೆಗಳಿಂದ ಈ ಪ್ರಾಣಿಯ (ಸತ್ವ) ಅಂಶಗಳು ಹೊರಬಂದಾಗ, ಅಲ್ಲಿ ಚಕ್ರಗಳು ಮತ್ತು ಇತರ ಗುರುತುಗಳು ರೂಪುಗೊಂಡದ್ದನ್ನು ನೋಡಬಹುದು. ಈ ಜೀವಜಂತುಗಳು ಬಲದಿಕ್ಕಿನಿಂದಲೇ/ ಬಲಕ್ಕಾಗಿಯೇ ಕೋಶ ಮಾಡುತ್ತವೆ. ಈಗಿರುವ ಹಿಮಾಲಯ ಪರ್ವತ ಶ್ರೇಣಿಯು ಪ್ರಪಂಚದಲ್ಲಿರುವ ಉಳಿದ ಎಲ್ಲಾ ಪರ್ವತ ಶ್ರೇಣಿಗಳಿಗಿಂತ ಪ್ರಾಯದಲ್ಲಿ ಚಿಕ್ಕದು. ಈ ಪರ್ವತ ಶ್ರೇಣಿಗಳು ಸಹ ದಿನದಿಂದ ದಿನಕ್ಕೆ ಬೆಳೆಯುತ್ತವೆ. ಆದುದರಿಂದ ಸಿಖರವಾಗಿ ಅಲ್ಲದೆ, ಸುಮಾರು ೫೦ ಮಿಲಿಯ ವರ್ಷಗಳ ಹಿಂದೆ ಅಂದರೆ ಜುರಾಸಿಕ್ ಕಾಲದ್ದಾಗಿರಬಹುದು.
- ಪುರಾಣಗಳು ಶಾಲಗ್ರಾಮಶಿಲೆಗಳನ್ನು ಸಮುದ್ರಪ್ರಾಣಿಗಳ ಪಳೆಯುಳಿಕೆಗಳೆಂದು ತಿಳಿಸಿವೆ. ಆದರೆ ಅಮೋನೈಟ್‌ಗಳನ್ನು ನೀರಿನಲ್ಲಿ ವಾಸಿಸುವ 'ವಜ್ರಕೀಟ' ಎಂದು ಪುರಾಣಗಳು ವರ್ಣಿಸಿವೆ. ಈ ಹುಳುಗಳು ತಮ್ಮ ಕವಚಗಳನ್ನು ನಿರ್ಮಿಸಲು ಕಲ್ಲಿನಲ್ಲಿ ತೂತು ಕೊರೆಯುವಾಗ ಚಕ್ರಗಳು ಮತ್ತು ಇತರ ಗುರುತುಗಳು ರೂಪುಗೊಂಡಿವೆ ಎಂದು ಹೇಳಲಾಗಿದೆ.

**ವಜ್ರಕೀಟಶ್ಚ ಕ್ರಮಶೋ ವಜ್ರದಂಷ್ಟ್ರಾಶ್ಚ ತತ್ರ ವೈ ।**
**ತಚ್ಛಿಲಾ ಕುಹರೇ ಚಕ್ರಂ ಕರಿಷ್ಯಂತಿ ಮದೀಯಕಮ್ ॥**

ಎಂದು ಪುರಾಣಗಳು ಹೇಳುತ್ತವೆ. ಸಮುದ್ರರಾಕ್ಷಸರು, ಸಮುದ್ರಪ್ರಾಣಿಗಳು, ಚಿಪ್ಪಿನೊಳಗಿರುವ ಹುಳುಗಳು ಇವೆಲ್ಲವುಗಳ ಉಲ್ಲೇಖವಿದೆ. ಕಳೇಬರಗಳು ಕೊಳೆದು, ಕುಗ್ಗಿ ಪಳೆಯುಳಿಕೆಗಳಾಗಿರುವುದನ್ನು ಪುರಾಣಗಳು ವರ್ಣಿಸುತ್ತವೆ. ಪುರಾಣಗಳು ಇಂತಹ ೮೪ ಲಕ್ಷ ಸಮುದ್ರಪ್ರಾಣಿಗಳಿದ್ದವು ಎಂದು ಉಲ್ಲೇಖಿಸಿವೆ. ಅದರಲ್ಲಿ

ಕೆಲವು ಭೂಗರ್ಭದೊಳಗೆ, ಕೆಲವು ಅಗ್ನಿಜ್ವಾಲೆಗಳಲ್ಲಿ, ಕೆಲವು ಉತ್ತರಧ್ರುವ ಮತ್ತು ದಕ್ಷಿಣಧ್ರುವ ಸೇರಿಕೊಂಡಿವೆ ಎಂದಿದೆ. ಭೂಮಿಯಲ್ಲಿ ಹುದುಗಿದ ಕೀಟಗಳು ಭೂಗ್ರರ್ಭವೆಂದೂ, ಜ್ವಾಲಾಮುಖಿಗೆ ಸಿಕ್ಕಿ ಅದಕ್ಕೆ ಸೇರಿದವುಗಳನ್ನು ಅಗ್ನಿಶಾಲಿ ಎಂದೂ, ಇನ್ನು ಹಲವು ಹಿಮವತ್‌ಪ್ರದೇಶದಲ್ಲಿ ಅಂದರೆ, ಉತ್ತರ ಮತ್ತು ದಕ್ಷಿಣ ಧ್ರುವದಲ್ಲಿರುವುದನ್ನು ಹಿಮಶಾಲಿ ಎಂದೂ ಕರೆದಿವೆ. ಜಲಶಾಲಿಯಾದ ಕೀಟವು ಸಮುದ್ರದ ತಳಭಾಗದಲ್ಲಿ ಸೇರಿಹೋಗಿತ್ತು. ಅಥವಾ ಪರ್ವತಶ್ರೇಣಿಗಳಲ್ಲಿ ಹುದುಗಿಹೋಗಿತ್ತು. ಭಾರತದ (ಈಗ ನೇಪಾಳದಲ್ಲಿರುವ) ಗಂಡಕೀನದಿಯಲ್ಲಿ ಜಲಶಾಲಿಯು ಅಮೊನೈಟ್‌ಗಳು ಅಪಾರಸಂಖ್ಯೆಯಲ್ಲಿ ದೊರಕುತ್ತದೆ.

ಇನ್ನೊಂದು ಬಗೆಯ ಶಾಲಗ್ರಾಮದೊಂದಿಗೇ ಸಂಬಂಧ ಹೊಂದಿದಂತಹ- ಬಿಳಿಯ ಬಣ್ಣದ, Cuttle-fish ಜಾತಿಗೆ ಸೇರಿದಂತಹ ಪಳೆಯುಳಿಕೆಗಳು ಗೋಮತೀನದಿಯಲ್ಲಿ ದೊರೆಯುತ್ತವೆ. ಈ ನದಿ ದ್ವಾರಕೆಯಲ್ಲಿ ಸಮುದ್ರವನ್ನು ಸೇರುತ್ತದೆ.

ಭೂಗರ್ಭಶಾಸ್ತ್ರಜ್ಞರು ಹೇಳುವ ಪ್ರಕಾರ ಹಿಮಾಲಯ ಪರ್ವತವು ರೂಪುಗೊಳ್ಳುವ ಮೊದಲೇ ಗಂಡಕೀನದಿಯು ಅಸ್ತಿತ್ವದಲ್ಲಿತ್ತು. ಇದು ಹಿಮಾಲಯ ಪರ್ವತಗಳಿಂದಲೂ ಮುಂದೆ, ಅಂದರೆ ಟಿಬೇಟಿನಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ನೇಪಾಳದಲ್ಲಿ ಹರಿಯುತ್ತದೆ.

- ಶಾಲಗ್ರಾಮದ ಉಗಮಕ್ಷೇತ್ರವನ್ನು ನೇಪಾಳಿ ಸೈನಿಕರು ರಕ್ಷಿಸುವ ಬಗೆಯನ್ನು ಮೇಡಂ ಬ್ಲಾವ್‌ಟಸ್ಕಿ ಎಂಬ (ಥಿಯೊ ಸೊಫಿಕಲ್ ಸಂಸ್ಥೆಯ ಸ್ಥಾಪಕಿ) ಮಹಿಳೆ ವಿವರವಾಗಿ ಬರೆದಿದ್ದಾರೆ. Caves and Jungles of Hindustan ಎಂಬ ಗ್ರಂಥದಲ್ಲಿ ಉತ್ತಮ ಬ್ರಾಹ್ಮಣರನ್ನು ದೊರೆ ಸಂದರ್ಶಿಸಿ, ಶಾಲಗ್ರಾಮಗಳನ್ನು ಸಂದರ್ಶನ ಮಾಡಿಸಿದಾಗ ಅವು ಬ್ರಾಹ್ಮಣಹಸ್ತಗಳಿಂದ ಆಕರ್ಷಿತವಾಗಿ ಹಾರಿ ಅಂಟಿಕೊಂಡದ್ದನ್ನು ನೇಪಾಳದ ಬ್ರಿಟಿಷ್ ರೆಸಿಡೆಂಟ್ಸ್‌ನಾಗಿದ್ದ ಹಾಡ್‌ಸನ್ ಎಂಬವನು ಕಣ್ಣಾರೆ ಕಂಡದ್ದಾಗಿಯೂ, ಈ ಮಹಿಳೆ ಬರೆದಿದ್ದಾಳೆ. ಇವರೇ ಗ್ರಂಥವನ್ನು ಸಂಪಾದಿಸಿ, ಪ್ರಕಟಿಸಿದವರು. ಒಬ್ಬ ನೇಪಾಳಿ ರಾಜರಲ್ಲಿ ಉಗ್ರನರಸಿಂಹ, ಕಲ್ಯಾಣ ನರಸಿಂಹ, ಪ್ರಹ್ಲಾದವರದ ಮೊದಲಾದ ನಾನಾ ಬಗೆಯ ಶಾಲಗ್ರಾಮಗಳನ್ನು ನೋಡಿದ್ದಾಗಿಯೂ, ಅದನ್ನು ಕಂಡು ವಿಸ್ಮಯಪಟ್ಟ ಒಬ್ಬ ಕ್ರೈಸ್ತ ಪಾದ್ರಿಯು (ಬಹುಶಃ ರೆಸಿಡೆಂಟ್ಟಡೆ ಯವನಿರಬೇಕು) 'ಇದು ಪ್ರಕೃತಿ ವ್ಯಾಪಾರವಾಗಲು ಅಸಾಧ್ಯ. ಇದು ದೆವ್ವದ ಕೆಲಸ' ಎಂದು ಉದ್ಗರಿಸಿದ್ದಾಗಿಯೂ ಬರೆದಿದ್ದಾನೆ.
- ನೇಪಾಳದ ಭೌಗೋಳಿಕ, ಹವಾಮಾನ ಮತ್ತು ಪ್ರಾಕೃತಿಕ ವಿಭಾಗವು ನೇಪಾಳದಲ್ಲಿರುವ ಟ್ರೆಕ್ಕಿಂಗ್ ಮಾಡುವವರಿಗೆ ಈ ಬಗ್ಗೆ ಹಾಗೂ ಪ್ರಾಣಿಗಳ ದಾಳಿ ಎದುರಾಗಬಹುದಾದ ಬಗ್ಗೆ ಸೂಕ್ತ ಮಾಹಿತಿಯನ್ನು ಒದಗಿಸುತ್ತದೆ. Tribhuvan History Museum in Swayabhunath, Katmandu ಮತ್ತು ನೇಪಾಳ ಪ್ರಾಕೃತಿಕ ಸಂರಕ್ಷಣ ಸೊಸೈಟಿಯು ಈ ಬಗ್ಗೆ ನಿರ್ದಿಷ್ಟ ಮಾಹಿತಿಯನ್ನು ಒದಗಿಸುತ್ತದೆ. ಇದನ್ನು ಕಾಠ್ಮಂಡೋನ ಥಮೇಲ್‌ನಲ್ಲಿರುವ ಕಾಠ್ಮಾಂಡೋ ಅತಿಥಿಗೃಹದ ಮೂಲಕ ಸಂಪರ್ಕಿಸಬಹುದು).
- ಸಮುದ್ರದ ಅಲೆಗಳು ಹೆಚ್ಚಿದಾಗ (ಉಬ್ಬರ) ಭೂಮಿಯ ಮೇಲ್ಮೈ ಪದರುಗಳು ತೆಳುವಾಗಿ, ಅವುಗಳನ್ನು ಎಳೆತಕ್ಕೊಳ ಗಾಗಿ ತುಂಡಾಗುತ್ತವೆ. ಹಾಗೆಯೇ, ಸಮುದ್ರದ ಅಲೆಗಳು ಇಳಿದಾಗ (ಇಳಿತ) ಭೂಮಿಯ ಮೇಲ್ಮೈ ಪದರುಗಳು ಎಳೆತಕ್ಕೊಳಗಾಗಿ ಅವುಗಳನ್ನು ಕುಗ್ಗಿಸುತ್ತವೆ. ಇದನ್ನು geosyncline ಎಂದು ಕರೆಯುತ್ತಾರೆ. ಆಗ ಈ ಪದರುಗಳು ಒಂದರ ಮೇಲೊಂದು ಬಿದ್ದು, ಒತ್ತಡದಿಂದ

ಭೂಮಿಯ ಪದರುಗಳಿಗೆ ಕಾರಣವಾಗುತ್ತವೆ. ಭೂಮಿಯ ಕೊರೆತ ಮತ್ತು ಮೇಲ್ಮೈ ಸವೆತಗಳು ಅವುಗಳಿಗೆ ಈಗಿನ ಆಕಾರ ಕೊಟ್ಟಿರುತ್ತವೆ. ಅವುಗಳೇ ಈಗಿರುವ (ಹಿಮಾಲಯ)ಪರ್ವತಶ್ರೇಣಿಗಳು.

- ಭೌಗೋಳಿಕವಾಗಿ ಹಿಮಾಲಯಪರ್ವತವು Theory of Continental Drifting ಪ್ರಕಾರ ಏಷ್ಯಾಖಂಡ ದೊಂದಿಗೆ ಸೇರಿದಾಗ ರೂಪುಗೊಂಡಿದ್ದು ಇದು ಪ್ರತಿ ವರ್ಷ ಮಿಲಿಮೀಟರಿನಷ್ಟು ತಳ್ಳಲ್ಪಡುತ್ತದೆ. ಸುಮಾರು ೭೧ ಮಿಲಿಯ ವರ್ಷಗಳ ಹಿಂದೆ ಈ ಪರ್ವತದ ರಚನೆ ಆಗಿದ್ದಿರಬಹುದೆಂದು ಭೂಗೋಳ ತಜ್ಞರ ಅಭಿಪ್ರಾಯ. ೨೦೦ ಮಿಲಿಯ ವರ್ಷಗಳಿಂದ ಈಗಿರುವ ಭೌಗೋಳಿಕ ಬದಲಾವಣೆಯ ಚಿತ್ರಣವು ಇದಕ್ಕೆ ಪೂರಕವಾಗಿವೆ. ಈಗಿರುವ ಮೆದಿಟರೇನಿಯನ್ ಸಮುದ್ರವು (ಹಿಂದೆ ತೇತ್ಯಾ ಎಂದು ಕರೆಯಲ್ಪಡುತ್ತಿತ್ತು) ಏಷ್ಯಾಖಂಡ ಮತ್ತು ಭರತಖಂಡ ಸಂಘರ್ಷ ಎತ್ತುವ ಮೊದಲಿತ್ತು. ಈ ತೇತ್ಯಾ ಸಮುದ್ರಕ್ಕೆ ಈ ಖಂಡಗಳಿಂದ ೨ ನದಿಗಳು ಸಂಗಮಿಸುವ ಕಾರಣ ದಿಂದಾಗಿ ಅಲ್ಲಿ ಕೊಚ್ಚಿ ಬಂದ ಮಣ್ಣುಗಳ ಪದರಗಳುಂಟಾಯಿತು. ಏಷ್ಯಾಖಂಡದ ಉತ್ತರಭಾಗವು ನಿಧಾನವಾಗಿ ತೇತ್ಯಾ ಸಮುದ್ರ ಕ್ಕಿಳಿಯಲು, ಮತ್ತು ಅದರ ಪದರಗಳು ಟಿಬೇಟಿನ ಪ್ರಾಂತಕ್ಕೆ ಬಾಗಿದವು. ಅವುಗಳೇ ಈಗಿನ ಟಿಬೇಟಿನ ಪರ್ವತಭೂಮಿಯ. ಈ ಜಾಗವು ನೇಪಾಳ ಮತ್ತು ಟಿಬೇಟಿನ ಮಧ್ಯದಲ್ಲಿರುವ ಗಡಿಪ್ರದೇಶದಲ್ಲಿದೆ. ಅನಂತರದ ಒತ್ತಡದಿಂದ ಈ ಪದರುಗಳೇ ಮೇಲಕ್ಕೇರಿ ಅಲ್ಲಿಯ ಸಮುದ್ರವು ಇಲ್ಲದಂತಾಯಿತು. ಈ ಪ್ರದೇಶದಲ್ಲಿಯ ಪರ್ವತದಿಂದ ಹರಿದಂತಹ ನದಿಯು ಉತ್ತರ ಮತ್ತು ದಕ್ಷಿಣಾಭಿಮುಖಿವಾಗಿ ಹರಿಯಿತು.

ಅನಂತರದ ಹಂತದಲ್ಲಿ ೧೦ರಿಂದ ೧೫ ಮಿಲಿಯ ವರ್ಷಗಳ ಹಿಂದೆ ಮಯೋಸಿನ್ ಕಾಲದಲ್ಲಿ (Miocene period) ಜರಗಿತು. ಭರತಖಂಡವು ಮತ್ತು ಏಷ್ಯಾಖಂಡದ ಸಂಘರ್ಷದ ಒತ್ತಡದಿಂದ ಈಗಿನ ಹಿಮಾಲಯ ಪರ್ವತ ಶ್ರೇಣಿಯ ಉಗಮವಾಯಿತು. ಅದನ್ನು Main Central Thrust ಎಂದು ಕರೆಯು ತ್ತಾರೆ. ಹಾಗೆಯೇ ಟಿಬೇಟಿನ ಮಾರ್ಜಿನಲ್ ರೇಂಜ್ ಸಹ ಉಬ್ಬರಿಸಿತು. ಅಂತೆಯೇ ಟಿಬೇಟ್ ಪ್ರಸ್ಥ ಭೂಮಿಯು ಉಗಮವಾಯಿತು. ಭರತಖಂಡದಲ್ಲಿ ನದಿಗಳು ದಕ್ಷಿಣಾಭಿಮುಖವಾಗಿ ಆಳವಾಗಿ ಹರಿಯು ವಂತಾಯಿತು. (ಈ ಒತ್ತಡದಿಂದಾಗಿ) ಮೂರನೇ ಹಂತದಲ್ಲಿ ಸುಮಾರು ಆರು ಲಕ್ಷ ವರ್ಷಗಳ ಹಿಂದಿನದ್ದು [Pleistocene ಕಾಲ] ಭೂಮಿಯ ಹೆಚ್ಚು ಹೆಚ್ಚು ಒತ್ತಡದಿಂದಾಗಿ ಈ ಹಿಮಾಲಯ ಶ್ರೇಣಿಯು ಮತ್ತಷ್ಟು ಉಬ್ಬರಿಸಿತು. ಆಗ ನದಿಗಳ ಹರಿವು ನಿಂತುಹೋದದ್ದರಿಂದ ಸರೋವರಗಳು ಉದ್ಭವಿಸಿದವು– Tilico ಮತ್ತು RaRa ಎಂಬ ಎರಡು ಸರೋವರಗಳು ನೇಪಾಲ ಪರ್ವತಶ್ರೇಣಿಯಲ್ಲಿದ್ದು ಇದಕ್ಕೆ ಉತ್ತಮ ಉದಾಹರಣೆ.)

ಕೊನೆಯ ಹಂತದಲ್ಲಿ (Later Pleistocene period) ಮಹಾಭಾರತ ಸರೋವರ(Mahabharat -Lekh)ದಂತಹ ಬಾಹ್ಯ ತಪ್ಪಲು ಪ್ರದೇಶ ಉಂಟಾಯಿತು. ಆದ್ದರಿಂದ ಕೆಲವು ನದಿಗಳ ದಕ್ಷಿಣಾಭಿ ಮುಖವಾದ ಹರಿಯುವಿಕೆಯು ನಿಂತುಹೋದ ಕಾರಣ ಕಾಠ್ಮಂಡು ಕಣಿವೆಯಲ್ಲಿರುವಂತಹ ಇತಿಹಾಸಪೂರ್ವ ಸರೋವರಗಳ ಉಗಮವಾಯಿತು. ರಾಣಿಕಾ ಪೋಖರಾ ಇದಕ್ಕೆ ಉತ್ತಮ ಉದಾಹರಣೆ.

ಅವುಗಳು ೨ ಲಕ್ಷ ವರ್ಷಗಳ ಹಿಂದೆಯಷ್ಟೇ ಆರಿ (ಆವಿಯಾಗಿ) ಹೋದವು. ಅಕ್ಷಾಂಶದಿಕ್ಕಿನಲ್ಲಿ ಹರಿಯುವಂತಹ ೩ ನದಿಗಳ ಹರಿವು ಸುರುವಾಯಿತು. (೧) ಕರ್ನಾಲಿ ಪಶ್ಚಿಮದ ಚಿಸಪಾನಿಯಿಂದ, (೨) ಗಂಡಕೀನದಿಯು ನಡುವಿನ ದೇವಘಾಟ್‌ನಿಂದ ಮತ್ತು (೩) ಕೋಶಿ ನದಿಯು ಪೂರ್ವದ ಭರತಕ್ಷೇತ್ರದಿಂದ. ಹಿಮಾಲಯಪರ್ವತಗಳು ಭೂಮಂಡಲದಲ್ಲಿಯೇ ಎತ್ತರದವಾದುದರಿಂದ ಪರ್ವತಶ್ರೇಣಿಗಳಲ್ಲೂ ಶ್ರೇಷ್ಠ ವಾಗಿದೆ ಮತ್ತು ಉತ್ತರ ಟಿಬೇಟ್ ಪ್ರಸ್ಥಭೂಮಿಯ ಉತ್ತರಕ್ಕೂ ವಿಸ್ತರಿಸಿವೆ. ಇದರಿಂದಾಗಿ ಹಿಮಾಲಯದ ನದಿಗಳು ಭಾರತಾಭಿಮುಖವಾಗಿ ಹರಿಯುತ್ತವೆ.

ಹಿಮಾಲಯ ಪರ್ವತಶ್ರೇಣಿಗಳು ಪರ್ವತಶ್ರೇಣಿಗಳಲ್ಲಿಯೇ ಚಿಕ್ಕ ಪ್ರಾಯದವಾಗಿದ್ದು, ಇದು ದಿನೇ ದಿನೇ ಒತ್ತಡದಿಂದ ಬೆಳೆಯಲು ಸಾಧ್ಯವಿದೆ. ಇವತ್ತು ನೇಪಾಲದಲ್ಲಿ ೩ ಪ್ರಾಕೃತಿಕ ಪ್ರಾಂತಗಳನ್ನು ಗುರುತಿಸ ಬಹುದು ಹಾಗೂ ತುಂಬಾ ಪಳೆಯುಳಿಕೆಗಳನ್ನು ಶಿವಾಲಿಕ ಮತ್ತು ಪರ್ವತದ ಹೊರತಪ್ಪಲಿನಲ್ಲಿ ಕಾಣ ಬಹುದಾಗಿದೆ. ಚಿನ್ನ ಹಾಗೂ ಕಲ್ಲಿದ್ದಲ ಖನಿಜವನ್ನು ಕಾಣಬಹುದಾಗಿದೆ. ಪ್ರಾಕೃತಿಕ ಕಾರಣದಿಂದ ನೇಪಾಲದಲ್ಲಿ ಬಿಸಿನೀರಿನ ಬುಗ್ಗೆಗಳಿವೆ. ನೇಪಾಳಿಗಳು ಇವುಗಳನ್ನು ತಮ್ಮ ಆಧ್ಯಾತ್ಮಿಕ ರೀತಿರಿವಾಜುಗಳಲ್ಲಿ ಮತ್ತು ತೀರ್ಥಯಾತ್ರಿಗಳ ಪರವಾಗಿ ಅಳವಡಿಸಿಕೊಂಡಿದ್ದಾರೆ. ಭೋತಿಯಾ ಎಂಬವರು ಈ ಬಿಸಿನೀರ ಬುಗ್ಗೆಗಳಿಗೆ ಕಾಯಿಲೆಗಳನ್ನು ಗುಣಪಡಿಸುವ ಶಕ್ತಿ ಇದೆ ಎಂದಿದ್ದಾರೆ.

ಭಾರತ ಮತ್ತು ಟಿಬೇಟಿನ ಮಧ್ಯಭಾಗದಲ್ಲಿರುವ ಸುಮಾರು ೨೯೦೦ ಕಿ. ಮೀ. ವಿಸ್ತಾರವಾದ ಹಿಮಾಲಯದ ಪರ್ವತ ಶಿಖರಗಳು ಮತ್ತು ಪ್ರಸ್ಥಭೂಮಿಗಳು –ಈಗ ನಾವು ಏನನ್ನು ನೋಡುತ್ತಿದ್ದೇವೆ ಅವು– ಸುಮಾರು ೪೦ರಿಂದ ೫೦ ಮಿಲಿಯ ವರ್ಷಗಳ ಹಿಂದೆ ಭಾರತ ಮತ್ತು ಯುರೋಪ್ ಖಂಡಗಳ ಸಂಘರ್ಷದಿಂದ ಉಂಟಾದವು. ಉತ್ತರ ಅಮೇರಿಕಾ ಖಂಡ ಯುರೋಪಿನಿಂದ ಪ್ರತ್ಯೇಕಗೊಂಡು ದೂರ ಸರಿಯಿತು. ಸುಮಾರು ೨೨೫ ಮಿಲಿಯ ವರ್ಷಗಳ ಹಿಂದೆ ಭಾರತವು ತೈತ್ಯಾ ಸಮುದ್ರದ ಒಂದು ದ್ವೀಪವಾಗಿತ್ತು ಹಾಗೂ ಈ ಸಮುದ್ರವು ಭಾರತ ಹಾಗೂ ಏಷ್ಯಾಖಂಡಗಳನ್ನು ಬೇರ್ಪಡಿಸಿತ್ತು. ಭಾರತವು ೮೦ ಮಿಲಿಯ ವರ್ಷಗಳ ಹಿಂದೆ ಸುಮಾರು ೬೪೦೦ ಕಿ. ಮೀ. ಏಷ್ಯಾಖಂಡದ ದಕ್ಷಿಣಭಾಗದಲ್ಲಿ –ಅಂದರೆ ಆಸ್ಟ್ರೇಲಿಯಾ ತೀರದಲ್ಲಿತ್ತು ಮತ್ತು ಉತ್ತರಾಭಿಮುಖವಾಗಿ ಚಲಿಸಿತು. (ಭೂಮಧ್ಯರೇಖೆಯ ದಕ್ಷಿಣದಲ್ಲಿತ್ತು.) ಸುಮಾರು ೯ ಮೀಟರ್‌ನಷ್ಟು ಮೇಲ್ಮುಖವಾಗಿ ಚಲಿಸಿತು. ಯಾವಾಗ ಖಂಡಗಳು ಸಂಘರ್ಷಿಸಿದವೋ ಆಗ ಇದು ೧೦೦ ವರ್ಷಗಳಿಗೆ ಅರ್ಧ ಮೀಟರ್‌ನಷ್ಟು ಹಿಂಜರಿದು ಹಿಮಾಲಯದ ರಚನೆಯಾಯ್ತು ಅಥವಾ ಹಿಮಾಲಯ ತಲೆಯೆತ್ತಿತು. ವರ್ಷಕ್ಕೆ ಕನಿಷ್ಠ ೧ ಸೆ.ಮೀ.ಗಿಂತಲೂ ಜಾಸ್ತಿಯಾಗಿ ಬೆಳೆಯುತ್ತಿದ್ದು, ಒಂದು ಮಿಲಿಯ ವರ್ಷದಲ್ಲಿ ಇದು ೧೦ ಕಿ.ಮೀ.ಗಿಂತಲೂ ಹೆಚ್ಚಾಗಿದೆ. ಪ್ರಪಂಚದ ಚರಿತ್ರೆಯಲ್ಲಿಯೇ ಅತ್ಯಂತ ಭಯಾನಕವಾದ ಭೂಕಂಪವು ಸುಮಾರು ೫೦ ಮಿಲಿಯ ವರ್ಷಗಳ ಹಿಂದೆ ಭಾರತ ಮತ್ತು ಯುರೇಶಿಯನ್ ಖಂಡಗಳು ಮೊದಲು ಸಂಘರ್ಷಗೊಂಡಾಗ ಉಂಟಾಯಿತೆಂದು ಚರಿತ್ರೆ ಹೇಳುತ್ತದೆ. ಲಾಸಾದಿಂದ ೫೦ ಕಿ.ಮೀ. ಉತ್ತರದಲ್ಲಿ ವಿಜ್ಞಾನಿಗಳು ಭೂಗರ್ಭಶಾಸ್ತ್ರಜ್ಞರಿಗೆ ಗುಲಾಲಿ ಬಣ್ಣದ ಮರಳುಕಲ್ಲು ದೊರೆತಿದ್ದು ಇದರಲ್ಲಿಯ ಪಳೆಯುಳಿಕೆಗಳು (೧೦೦ ಮಿಲಿಯ ವರ್ಷಗಳಷ್ಟು ಹಿಂದಿನ) ಬಹಳಷ್ಟು ವಿಷಯಗಳನ್ನು ತಿಳಿಸುವಲ್ಲಿ ಉಪಯುಕ್ತವಾಗಿದೆ.

ಭೌತವಿಜ್ಞಾನಿಗಳು ಮತ್ತು ಭೂಗರ್ಭಶಾಸ್ತ್ರಜ್ಞರು ಈ ಪಳೆಯುಳಿಕೆಗಳನ್ನು ಸಂಗ್ರಹಿಸಿ, ಅದರ ಬಗ್ಗೆ ನಿರಂತರ ಅಧ್ಯಯನ ಮಾಡುತ್ತಿದ್ದಾರೆ. ವಿವಿಧ ರೀತಿಯ ಪಳೆಯುಳಿಕೆಗಳ ಚಿತ್ರವನ್ನು ಕೊಡಲಾಗಿದೆ. ಈ ಪಳೆಯುಳಿಕೆಗಳಲ್ಲಿ ಅಮೋನೈಟ್(ಶಾಲಗ್ರಾಮಶಿಲೆ)ಗಳು ಮಲಸ್ಕಾ ಜಾತಿಯ ಪಳೆಯುಳಿಕೆಗಳ ವರ್ಗಕ್ಕೆ ಸೇರುತ್ತವೆ. ಈ ಪಳೆಯುಳಿಕೆಗಳಲ್ಲಿ ಅಸಂಖ್ಯಾತ ವಿಧಗಳಿದ್ದು, ಅದರಲ್ಲಿ ಒಂದು ಜಾತಿಯ ಪಳೆಯುಳಿಕೆ ಯನ್ನು ಅಮೋನೈಟ್ ಅಥವಾ ಬೆನ್ನೆಲುಬಿಲ್ಲದ ಮೃದ್ವಂಗಿಗಳು ಎಂದು ಕರೆಯುತ್ತಾರೆ. ಕೆಲವು ಇದನ್ನು ತಪ್ಪಾಗಿ ತಿಳಿದು ನಾವು ಪೂಜಿಸುವ ಮೂರ್ತಿಯು ಪ್ರಕೃತಿದತ್ತವಾಗಿದ್ದು ಪ್ರಕೃತಿ ನಿರ್ಮಿತ ಪಳೆಯುಳಿಕೆ ಎಂದು ತಿಳಿದಿದ್ದಾರೆ. ಈ ಪ್ರಕೃತಿದತ್ತವಾದ ವಿಶಿಷ್ಟ ಶಿಲೆಗೆ ವಿಶೇಷ ಶಕ್ತಿ ಇದೆ ಎಂದು ಪುರಾಣಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಹೇಳಿದ್ದರಿಂದ ಇದನ್ನು ಬರೇ ಪಳೆಯುಳಿಕೆ ಎಂದು ತಿಳಿಯದೆ ವಿಷ್ಣುವಿನ ಅಂಶವನ್ನು ಹೊಂದಿದ, ದೇವರ ಸಾನ್ನಿಧ್ಯವಿರುವ ವಿಶೇಷವಾದ ಶಿಲೆ ಎಂದು ಭಾವಿಸಬೇಕು. ಶಾಲಗ್ರಾಮಗಳು ಹೇಗೆ ಉತ್ಪತ್ತಿಯಾಗುತ್ತವೆ ಎಂಬುದು ಮುಖ್ಯವಲ್ಲ. ಅಲ್ಲಿ ದೇವರ ಸದಾ ಜಾಗ್ರತ ಸಾನ್ನಿಧ್ಯವಿರುತ್ತದೆ ಎಂಬುದೇ ಮುಖ್ಯ.

ಈ ಮೂರ್ತಿಗಳ ಪೂಜೆಯನ್ನು ಮಾಡುವಾಗ ಶಾಸ್ತ್ರಗಳಲ್ಲಿ ಹೇಳಿದಂತೆ ಮಾಡಬೇಕು. ಅಂತೆಯೇ ಅವುಗಳ ಗುರುತಿಸುವಿಕೆಯನ್ನು, ಗುಣಲಕ್ಷಣಗಳನ್ನು ಬೇರೆ ಬೇರೆ ಪುರಾಣಗಳು (ವಿಶೇಷವಾಗಿ ನರಸಿಂಹ ಪುರಾಣವು) ತಿಳಿಸಿವೆ. ಜರ್ಮನಿ ದೇಶದಲ್ಲಿ ದೊರೆತಂತಹ ಅಮೋನೈಟ್ ಪಳೆಯುಳಿಕೆಯು, ಶಾಲಗ್ರಾಮ ಶಿಲೆಯಂತೆ ಕಂಡುಬರುವುದಿಲ್ಲ. ದಕ್ಷಿಣ ಸಾನ್ ಆಂಗ್ಲೋ ವೆಸ್ಟ್ ಆಫ್ ಮೆರ್ಟ್‌ಜಾನ್ ಯು. ಎಸ್. ಎ.ಯ ಅಮೋನೈಟ್ ಪಳೆಯುಳಿಕೆಗಳು ಈ ರೀತಿಯಾಗಿ ಕಂಡು ಬಂದಿವೆ: ಕಾಲೀಗಂಡಕೀನದಿಯಲ್ಲಿ ದೊರಕುವ ಸ್ವಯಂ ವ್ಯಕ್ತ ಶಾಲಗ್ರಾಮಶಿಲೆಯಂತೆ ಇದು ಕಂಡುಬಂದರೂ ಇದಕ್ಕೆ ಶಾಲಗ್ರಾಮಶಿಲೆಯಷ್ಟು ಮಹತ್ವ ಇರುವುದಿಲ್ಲ ಹಾಗೂ ಅಷ್ಟು ಗುಣಮಟ್ಟದ್ದೂ ಆಗಿರುವುದಿಲ್ಲ.

ಖಂಡಿತವಾಗಿಯೂ, ಪುರಾಣಕಾಲದಿಂದಲೂ ಜನರು ಪ್ರಕೃತಿದತ್ತವಾದ ಶಿಲೆಯನ್ನು ವಿಗ್ರಹರೂಪದಲ್ಲಿ ಪೂಜಿಸುತ್ತಾ ಅದರಲ್ಲಿ ದೇವರ ಸಾನ್ನಿಧ್ಯವನ್ನು ಅರಿತುಕೊಂಡು ಪ್ರಕೃತಿಯನ್ನು ಆರಾಧಿಸುವ ಕ್ರಮವು ಪುರಾತನಕಾಲದಿಂದಲೂ ನಡೆದುಬಂದಿದೆ. ಆದ್ದರಿಂದ ಶಾಸ್ತ್ರಗಳು ಉಲ್ಲೇಖಿಸಿದಂತೆ ನಾವು ಶಾಲಗ್ರಾಮಶಿಲೆ ಮತ್ತು ಲಿಂಗರೂಪದ ಶಿವನಿಗೆ ಅತಿ ಮಹತ್ವದ ಶಿಲೆಯೆಂದು ಆರಾಧಿಸುವ ಕ್ರಮವನ್ನು ಅನುಸರಿಸಿಕೊಂಡು ಬಂದಿರುತ್ತೇವೆ. ಈ ಶಾಸ್ತ್ರಗಳು ಅವುಗಳ ಗುಣ ಲಕ್ಷಣಗಳು, ರೂಪಗಳು ಮತ್ತು ದೊರಕುವ ಸ್ಥಳಗಳನ್ನು ಸಹ ತಿಳಿಸುತ್ತವೆ. ಆದ್ದರಿಂದಲೇ ನಾವು ನಮ್ಮ ಧರ್ಮಶಾಸ್ತ್ರ ಗಳಲ್ಲಿ, ಪುರಾಣಗಳಲ್ಲಿ ಹೇಳಿದ ಪ್ರಕಾರ ಪ್ರಕೃತಿಯಲ್ಲಿ ದೇವರ ರೂಪವನ್ನು ಕಂಡು ಅದನ್ನು ಭಕ್ತಿಯಿಂದ ಅರ್ಚಿಸುತ್ತಾ ಮುಕ್ತಿಮಾರ್ಗದಲ್ಲಿ ಮುನ್ನಡೆಯುತ್ತೇವೆ.

ಉದಾಹರಣೆಗಾಗಿ, ದೇಶದಲ್ಲಿಯ ಅಂಚೆಯ ಸರಬರಾಜು ವ್ಯವಸ್ಥೆ. ನ್ಯೂಝಿಲ್ಯಾಂಡ್ ದೇಶದ ಅಂಚೆ ವ್ಯವಸ್ಥೆಯಲ್ಲಿ ಕೆಂಪು, ಕಪ್ಪು ಮತ್ತು ಬಿಳಿ ಬಣ್ಣದ ಡಬ್ಬಗಳಿದ್ದು ಅದರ ಚಿಹ್ನೆಗಳನ್ನು ಸುಲಭವಾಗಿ ಗುರುತಿಸ ಬಹುದು. ಈ ಡಬ್ಬಗಳಿಗೆ ಹಾಕಿದಂತಹ ಪತ್ರಗಳು ನಿರ್ದಿಷ್ಟ ಸ್ಥಳಕ್ಕೆ ರವಾನೆಯಾಗುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಅಂತೆಯೇ, ರಸ್ತೆಯ ಪಕ್ಕಗಳಲ್ಲಿರಿಸಿದ ಡಬ್ಬದಲ್ಲಿ ಟಪ್ಪಾಲನ್ನು ಹಾಕಿದರೆ ಅದು ತಲುಪುತ್ತದೋ ಇಲ್ಲವೋ ಎಂಬ ಸಂದೇಹ ನಮ್ಮನ್ನು ಕಾಡುತ್ತದೆ. ಇದನ್ನೇ ವ್ಯವಸ್ಥಿತ ಅಂಚೆಯಲ್ಲಿ ಹಾಕಿದಾಗ ಆಗುವ ಬದಲಾವಣೆಗಳು ಎಷ್ಟು ಎಂಬುದನ್ನು ತಿಳಿಯಬಹುದು. ಇದೇ ತರಹ ಜಗತ್ತಿನೆಲ್ಲೆಡೆ ಅಮೋನೈಟ್‌ಗಳು ದೊರಕುತ್ತವೆ. ಉದಾಹರಣೆಗೆ– ಮೊರಾಕ್ಕೊ, ಉತ್ತರ ಆಫ್ರಿಕಾ, ಅಮೇರಿಕಾ, ಯುರೋಪ್ ಇತ್ಯಾದಿ. ಆದರೂ ನೋಡುವಾಗ ಕಣ್ಣಿಗೆ ಅದರಲ್ಲಿ ಕೆಲವು ವ್ಯತ್ಯಾಸಗಳಿರುವುದನ್ನು ಗುರುತಿಸ ಬಹುದು. ನಾವೆಲ್ಲ ತಿಳಿದಿರುವ ಪ್ರಕಾರ, ಮಾನವನು ಈ ಭೂಮಿಯಲ್ಲಿ ಮೊದಲು ಜೀವಿಸುತ್ತಿದ್ದ ಆದಿಕಾಲದಲ್ಲಿ ಡೈನೋಸಾರ್ ಎಂಬ ದೈತ್ಯಾಕಾರದ ಪ್ರಾಣಿಯು ಭೂಮಿಯಲ್ಲಿತ್ತು. ಆದರೆ ಈ ಬಗ್ಗೆ ಚಿತ್ರ ಅಥವಾ ಲಿಖಿತವಾದ ಮಾಹಿತಿಗಳು ದೊರಕಿರುವುದಿಲ್ಲ. ಇವುಗಳ ಪಳೆಯುಳಿಕೆಗಳಿಂದಷ್ಟೇ ಈ ದೈತ್ಯಾಕಾರದ ಜೀವಿಗಳು ಭೂಮಿಯಲ್ಲಿದ್ದವು ಎಂದು ತಿಳಿಯಲು ಸಾಧ್ಯವಾಯಿತು. ಪಳೆಯುಳಿಕೆಗಳು ಈ ಬಗ್ಗೆ ನಮಗೆ ಮಾಹಿತಿ ನೀಡಬಲ್ಲವು ಎಂದರೆ ಆಶ್ಚರ್ಯವೇ ಸರಿ.

೧೯೦೪ರಲ್ಲಿ ಅರ್ನೆಸ್ಟ್ ಹಾಕೆಲ್ ಎಂಬವನು ಬೇರೆಬೇರೆ ಅಮೋನೈಟ್‌ಗಳು ಬೇರೆಬೇರೆ ರೀತಿಯ ದ್ದಾಗಿರುತ್ತವೆ ಎಂಬುದನ್ನು ತಿಳಿಸಿದ್ದನು. ಅಮೋನೈಟ್‌ಗಳು ಪುರಾತನವಾದ ಹಾಗೂ ಸಾಗರಗಳಲ್ಲಿದ್ದ ಮೃದ್ವಂಗಜಾತಿಗೆ ಸೇರಿದ ಪ್ರಾಣಿಗಳು. ಈಗ ಇವನ್ನು ಆಕ್ಟೋಪಸ್ ಜಾತಿಗೆ ಸೇರಿದವು ಎಂದು ಪರಿಗಣಿಸ ಲಾಗಿದೆ. ಪ್ರತಿ ಅಮೋನೈಟ್ ಸಹ ತಮ್ಮಲ್ಲಿಯ ಜೀವಕಣಗಳನ್ನು ರಕ್ಷಿಸುವುದಕ್ಕೋಸ್ಕರ ಗಟ್ಟಿಯಾದ ಅನೇಕ ಘಟಕಗಳನ್ನು ಉತ್ಪಾದಿಸುತ್ತಿತ್ತು. ಇದು ಸುಮಾರಾಗಿ ೨೪೦ ಮಿಲಿಯ ವರ್ಷಗಳಿಂದ ಸುಮಾರು ೬೫ ಮಿಲಿಯ ವರ್ಷಗಳ ಹಿಂದಿನ ವರೆಗೆ ಜೀವಿಸಿದ್ದವು. ಇದು ಉತ್ತರ ಅಮೇರಿಕಾದಲ್ಲಿ ಸಾಮಾನ್ಯವಾಗಿತ್ತು. ಇದು ಅಸಂಖ್ಯಾತ ಹಾಗೂ ಅನೇಕ ವಿಧಗಳಿಂದ ಕೂಡಿದ್ದು ಭೌತವಿಜ್ಞಾನಿಗಳಿಗೆ ಭೂಮಿಯ ಪರ್ವತಗಳ ಬಗ್ಗೆ,

ಅವುಗಳ ಪ್ರಾಯದ ಬಗ್ಗೆ ತಿಳಿಯಲು ಅನುಕೂಲವಾಗಿದೆ. ಆದ ಕಾರಣ ಮಿಲಿಯ ವರ್ಷಗಳ ಹಿಂದೆಯೇ ಪರ್ವತಶ್ರೇಣಿಗಳಿಂದ ಹುಟ್ಟಿಕೊಂಡವು ಎಂದು ಸುಲಭವಾಗಿ ತಿಳಿಯಬಹುದು. ಈ ಬಗ್ಗೆ ಹೆಚ್ಚಿನ ಆಸಕ್ತಿಯುಳ್ಳವರು ಈ ಕೆಳಗಿನ ಕೆಲವು ಪರಾಮರ್ಶನಗ್ರಂಥಗಳನ್ನು ಗಮನಿಸಬಹುದು:


**Larson, P.L.** : "*What is an Ammonite?*", Blade Will Institute of Geological Research, South Dakota, 1988.

**Alexander R. Mc Neill** : "*Dynamics of Dinosaurs and other Extinct Giants*", Crown Publishers, New York, 1989.

**Arduini P. Teruzzi-a-** : "*Guide to Fossils*", Simon & Schuster, New York, 1986.

**Norman David** : "*The Illustrated Encyclopaedia of Dinosaurs*", Crescent Books, New York, 1985.

**Pellant C. Rocks** : "*Minerals and Fossils of the World*", Little Brown and Co., Bosten, 1990.

**Pinna, Giovanni** : "*The Illustrated Encyclopaedia of Fossils*", Facts on File, New York, 1990.

**Tylor, Paul D.** : "*Eye-witness Fossils*", Alfred A Knopf, New York, 1990.

**Turek T. Marck J & Benes J.** : "*Fossils of the World*", Crown Publishers Inc., New York, 1988.


ಶಾಲಗ್ರಾಮಶಿಲೆಗಳು Palaeontelogits on an ammoniteನ ಪಳೆಯುಳಿಕೆಗಳು. ಇವು ಸಮುದ್ರತೀರದ ಪ್ರಾಣಿಗಳು. ಈ ಅಮೋನೈಟ್‌ಗಳಲ್ಲಿ ನಾಲ್ಕು ಜಾತಿಯವುಗಳಿದ್ದು ಅವುಗಳಲ್ಲಿ ಆಕ್ಟೋಪಸ್ (Octopuses), ಕಟ್ಲ್ ಮೀನು (Cuttle fish), ಸ್ಕ್ವಿಡ್ (squid) ಮತ್ತು ನಾಟಿಲಾಡ್ಸ್(nautiloids -ಮುತ್ತನ್ನು ಸೃಷ್ಟಿಸುವಂತಹ ವರ್ಗದವು)ಗಳು ಸೇರಿವೆ.

ಈ ಅಮೋನೈಟ್‌ಗಳನ್ನು ಅಮೇರಿಕನ್ನರು ಹಾವಿನ ಕಲ್ಲು(snake-stone)ಗಳೆಂದೂ ಕರೆಯುತ್ತಿದ್ದರು. (ಅಮೇರಿಕಾ ದೇಶದಲ್ಲಿ ಇದನ್ನು ಹಾವಿನ ಕದಿತದಿಂದ ರಕ್ಷಿಸಲು ಬಳಸುತ್ತಿದ್ದರು.) ಅಮೋನೈಟ್‌ಗಳು whitby harbourಯಲ್ಲಿ ಅಪಾರ ಸಂಖ್ಯೆಯಲ್ಲಿ ಸಿಗುತ್ತವೆ. ಶಾಲಗ್ರಾಮಶಿಲೆಯನ್ನೇ ಹೋಲುವ ಇವುಗಳನ್ನು ದೇವರೆಂದು ಪೂಜಿಸುವುದಿಲ್ಲ. ಇದು ಈಜಿಪ್ಟಿನ ದೇವರಾದ Ammon ಎಂಬುದರಿಂದ ಅಮೋನೈಟ್ ಎಂಬ ಪದ ಬಂದಿರುತ್ತದೆ. ಈ Ammon ದೇವರ ಪವಿತ್ರವಾದ ಪ್ರಾಣಿ Ram ಮತ್ತು Ammoniteಗಳು ramsನ ಕೊಂಬುಗಳಂತೆ ಕಾಣುತ್ತದೆ. Pliny the Elder ಎಂಬವನು ಇದನ್ನು Ammonಗಳ ಕೊಂಬು ಎಂದು ಕರೆದನು. Ammoniteಗಳು ಸಮುದ್ರದಲ್ಲಿದ್ದಂತಹ ಪ್ರಾಣಿಗಳು. ಶಂಖವು ಸಹ ಇಂತಹದೇ (ಮಲಸ್ಕಾ) ಪ್ರಾಣಿಜಾತಿಗೆ ಸೇರಿದ ಪ್ರಾಣಿಗಳ ಕವಚವಾಗಿದೆ. ಇವುಗಳು ದುಂಡಾಕಾರ ಮತ್ತು ಮೊಟ್ಟೆಯಾಕಾರಗಳಾಗಿದ್ದವು. ಇವುಗಳು ಕಪ್ಪಾಗಿ ಮಲಗಿರುವ ಕೋಣಗಳಂತೆ ಕಾಣುವುದರಿಂದ ಇವುಗಳನ್ನು ಕೋಣದ ಕಲ್ಲುಗಳೆಂದೂ ಕರೆಯುತ್ತಿದ್ದರು. ಇವುಗಳನ್ನು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಬಳಸಲಾಗುತ್ತಿತ್ತು. ಹಳೆಯ ಗ್ರೀಕರು, ದೇವರಾದ 'ಜ್ಯುಪಿಟರ್ ಅಮೋನ್'ರೊಂದಿಗೆ ದುಂಡಗಾಗಿ, ವೃತ್ತಾಕಾರವಾದ ಆದಿನ ಕೊಂಬುಗಳನ್ನು ಪವಿತ್ರವಾದ ಸಂಕೇತವೆಂದು ಬಳಸುತ್ತಿದ್ದರು. ಈ ಕೊಂಬುಗಳನ್ನು ಹೋಲುವಂತಹ ಈ ಅಮೋನೈಟ್‌ಗಳನ್ನು ದೇವರೆಂದು ಪೂಜಿಸುತ್ತಿದ್ದರು. ಆಕ್ಸ್‌ಫರ್ಡ್‌ನ ವಿಶ್ವವಿದ್ಯಾಲಯದ ಲಾಂಛನದ ಸ್ಟೆಂಟ್

ಹಿಲ್ಡಾರವರ ಕೈಯಲ್ಲಿ ಹಾವಿನ ಕಲ್ಲು ಹಿಡಿದ ಸಂಕೇತದೆ. ಪಾಶ್ಚಾತ್ಯದೇಶಗಳಲ್ಲಿ ಇದನ್ನು ಆಭರಣವಾಗಿಯೂ, ಗೃಹಾಲಂಕಾರ ಸಾಮಗ್ರಿಯಾಗಿಯೂ ಬಳಸುವ ಕ್ರಮವಿದೆ. ಪ್ರಪಂಚದ ವಿವಿಧೆಡೆ ಸಿಕ್ಕಿರುವಂತಹ ಅಮೋನೈಟ್‌ಗಳ ಸಂಗ್ರಹಗಳನ್ನು ತೋರಿಸಲಾಗಿದೆ. ಅಂತೆಯೇ ಇದನ್ನು ಗೃಹಾಲಂಕಾರಗಳಲ್ಲಿ ಹೇಗೆ ಬಳಸಲಾಗುತ್ತದೆ ಎಂಬುದನ್ನೂ ಕಾಣಬಹುದು.

Western Isles, Scotlandನಲ್ಲಿ ಈ ಅಮೋನೈಟ್‌ಗಳನ್ನು Cramp-stone ಎಂದೂ ದನಗಳಿಗೆ ಮಾಂಸಖಂಡಗಳು ಹಿಡಿದುಕೊಂಡಾಗ ಇವುಗಳನ್ನು ನೀರಿನಲ್ಲಿ ಮುಳುಗಿಸಿ ಅನಂತರ ದನಗಳ ಮೈಗಳನ್ನು ತೊಳೆಯಲು ಉಪಯೋಗಿಸುತ್ತಿದ್ದರು. ಜರ್ಮನಿಯಲ್ಲಿ ಇದನ್ನು Dragon Stone ಎಂದೂ ಕರೆಯುತ್ತಾರೆ. ಇದನ್ನು ಹಾಲು ಕರೆಯುವ ಪಾತ್ರೆಗಳಲ್ಲಿಟ್ಟು, ದನ ಹೆಚ್ಚು ಹಾಲು ಕೊಡುವಂತೆ ಮಾಡಲು ಉಪಯೋಗಿಸುತ್ತಿದ್ದರು.

ಭಾರತದಲ್ಲಿ ಇಂತಹ ಅಮೋನೈಟ್‌ಗಳ ಪಳೆಯುಳಿಕೆಗಳನ್ನು ನೇಪಾಲದ ಗಂಡಕೀನದಿಯ ಕಣಿವೆಯಲ್ಲಿ ಕಾಣಬಹು ದಾಗಿದೆ. ಮತ್ತು ಉತ್ತರ ಭಾರತದವರು ಇದು ಶಾಲಗ್ರಾಮಗಳು ಎಂದೂ ಕರೆಯುತ್ತಾರೆ. ಇದು ಭಗವಾನ್ ವಿಷ್ಣುವಿನ ಚಿಹ್ನೆಯೆಂದೂ ಹಾಗೂ ಭಗವಂತನ ಅವತಾರ ಎಂದೂ ಭಾವಿಸಲಾಗುತ್ತದೆ. ವಿಷ್ಣುವಿನ ನಾಲ್ಕು ಕೈಗಳಲ್ಲಿ ಧರಿಸುವ ಆಯುಧಗಳಲ್ಲಿ ಒಂದಾದ ಚಕ್ರದ ಚಿಹ್ನೆಯು ಈ ಶಿಲೆಯಲ್ಲಿ ಮುದ್ರಿತವಾಗಿದೆ ಎಂದೂ ನಂಬುತ್ತಾರೆ. ಈ ಚಕ್ರಗಳಲ್ಲಿರುವ ಗುರುತುಗಳು ಅಮೋನೈಟ್ ಪ್ರಾಣಿಗಳ ಎಲುಬಿನ ಅಚ್ಚುಗಳು. ಈ ಪ್ರಕೃತಿದತ್ತವಾದ ಶಾಲಗ್ರಾಮಗಳನ್ನು ಮನೆಯಲ್ಲಿ, ದೇವಾಲಯಗಳಲ್ಲಿ ಮತ್ತು ಬೌದ್ಧದೇಗುಲಗಳಲ್ಲಿ ಇರಿಸಿ, ಅವುಗಳನ್ನು ವಿಷ್ಣುವಿನ ಪ್ರತೀಕವೆಂದು ನಂಬಿ, ಅವುಗಳನ್ನು ತೊಳೆದ/ಸ್ನಾನ ಮಾಡಿಸಿದ/ಅಭಿಷೇಕ ಮಾಡಿದ ನೀರನ್ನು ತೀರ್ಥದ ರೂಪದಲ್ಲಿ ಸೇವಿಸುತ್ತಾರೆ. ಅಂತೆಯೇ, ಗೃಹಪ್ರವೇಶ, ಮದುವೆ ಸಮಾರಂಭ, ಶ್ರಾದ್ಧಾದಿಕ್ರಿಯೆಗಳಲ್ಲಿ ಅದನ್ನು ಮುಂದಿಟ್ಟು ಪೂಜೆ ಮಾಡಿ ಅನಂತರ ದಾನಗಳನ್ನು ಮಾಡುವ ಕ್ರಮ ಇದೆ. ಕ್ರಯಕ್ಕೆ ಮಾರದೆ/ತೆಗೆದುಕೊಳ್ಳದೆ, ಗುರುಹಿರಿಯರಿಂದ ದಾನರೂಪದಲ್ಲಿ ಸ್ವೀಕರಿಸಿ ಮರಣಕಾಲದಲ್ಲಿ ಇದರ ಅಭಿಷೇಕದ ನೀರನ್ನು ಕುಡಿದರೆ ಸ್ವರ್ಗಪ್ರಾಪ್ತಿಯಾಗುವುದೆಂಬ ನಂಬಿಕೆಯಿದೆ.

ಇತ್ತೀಚಿಗಿನ ಕಾಲದಲ್ಲಿ ಕಾಲೀಗಂಡಕೀನದಿಗೆ ಹಲವಾರು ಕಡೆಗಳಲ್ಲಿ ಜಲವಿದ್ಯುಚ್ಛಕ್ತಿ ಯೋಜನೆಯನ್ನು ಆರಂಭಿಸಿರುವುದರಿಂದ, ಅಲ್ಲಲ್ಲಿ ಅಣೆಕಟ್ಟುಗಳ ನಿರ್ಮಾಣವಾಗಿ, ಶಾಲಗ್ರಾಮ ಹೆಕ್ಕುವುದನ್ನು ನಿಷೇಧಿಸಲಾಗಿದೆ. ಕಾಲೀಗಂಡಕೀನದಿಯಲ್ಲಿ ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯರು ಉತ್ತಮ ಕ್ರೀಡೆಯಾಗಿ ರ್‍ಯಾಫ್ಟಿಂಗ್ ನಡೆಸುತ್ತಿದ್ದಾರೆ. ಇದರಿಂದಾಗಿ ಭಾರತ–ನೇಪಾಳ ಗಡಿಪ್ರದೇಶದಲ್ಲಿ ಹರಿಯುವಂತಹ ತ್ರಿವೇಣೀನದಿಯಲ್ಲಿ ದೊರಕುವಂತಹ ಅಮೋನೈಟ್ ಪಳೆಯುಳಿಕೆಗೆ (ಶಾಲಗ್ರಾಮಕ್ಕೆ) ಹೆಚ್ಚಿನ ಬೇಡಿಕೆಯಿದೆ. ಗಂಡಕೀನದಿಯಲ್ಲಿ ದೊರೆಯುವಂತಹ ಶಾಲಗ್ರಾಮಶಿಲೆಗಳಂತೆಯೇ ಇವುಗಳಲ್ಲಿ ಚಕ್ರಗಳಿದ್ದರೂ, ತ್ರಿವೇಣೀಶಿಲೆಗಳು ನೋಡಲು ಅಷ್ಟೊಂದು ಅಂದವಾಗಿರುವುದಿಲ್ಲ. ಬಹು ಸಂಖ್ಯೆಯಲ್ಲಿ ಚಕ್ರಚಿಹ್ನೆಗಳನ್ನು ಹೊಂದಿರುವುದಿಲ್ಲ. ದ್ವಾರಗಳೂ ಚೆನ್ನಾಗಿ ಮೂಡಿಬಂದಿರುವುದಿಲ್ಲ. ಈ ತ್ರಿವೇಣೀಶಿಲೆಗಳು ಕಪ್ಪುಮಿಶ್ರಿತ ಕಂದುಬಣ್ಣದಿಂದ ಕೂಡಿದ್ದು, ತುಂಬಾ ಶಿಲೆಗಳು ಕೇಸರಿಬಣ್ಣಗಳಿಂದ ಕೂಡಿವೆ. ಅಂತೆಯೇ ಕಂದು, ಹಳದಿ, ಕೆಂಪುಮಿಶ್ರಿತ ಕಂದು, ಜೇನಿನಂತಹ ಬಣ್ಣ, ಕೇಸರಿ, ಬೂದುಬಣ್ಣ, ಬಿಳಿಬಣ್ಣ, ಹಸಿರು, ನೀಲ ಹಾಗೂ ವಿಧವಿಧದ ಬಣ್ಣಗಳಲ್ಲಿ ಸುಲಭವಾಗಿ ಸಿಗುತ್ತವೆ. ಮಾಯಾ ಪುರದಲ್ಲಿ ಲಭಿಸುವಂತಹ ಚಕ್ರಾಂಕಿತ ಶಾಲಗ್ರಾಮಶಿಲೆಯನ್ನು ಹೋಲುವಂತಹ ಶಿಲೆಯನ್ನು ನೋಡಬಹುದು.

ಗಂಡಕೀನದಿಯಲ್ಲಿ ದೊರೆಯುವಂತಹ ಶಾಲಗ್ರಾಮಗಳು ವಿಶಿಷ್ಟರೀತಿಯಾಗಿದ್ದು, ಅವುಗಳು ತ್ರಿವೇಣೀ ಶಾಲಗ್ರಾಮಶಿಲೆಗಳಿಗಿಂತ ಭಾರವಾಗಿ, ಗಟ್ಟಿಯಾಗಿರುತ್ತವೆ. ಗಂಡಕೀಶಾಲಗ್ರಾಮವು ತ್ರಿವೇಣೀನದಿಯಲ್ಲಿ ಸಿಗಲಾರದು. ಅಂತೆಯೇ ತ್ರಿವೇಣೀಶಿಲೆಗಳು ಗಂಡಕಿನದಿಯಲ್ಲಿ ಸಿಗಲಾರವು.

# III

## ಕಾಲೀಗಂಡಕೀ ಯಾತ್ರೆ / ಶಾಲಗ್ರಾಮ ತೀರ್ಥಯಾತ್ರೆ

ಲೇಖಕನು ಸ್ವತಃ ೨೦೦೬ರಲ್ಲಿ ನೇಪಾಳದರ್ಶನ ಮಾಡಿರುತ್ತಾನೆ. ಆದರೆ ೨೬ ದಿನಗಳ ನೇಪಾಲದಲ್ಲಿನ ಬೃಹತ್ ಹರತಾಳದಿಂದಾಗಿ ದುರದೃಷ್ಟವಶಾತ್ ಶಾಲಗ್ರಾಮತೀರ್ಥ ದರ್ಶನ ಮಾಡಲು ಸಾಧ್ಯವಾಗಲಿಲ್ಲ. ನೇಪಾಳದ ನೀಲನಕಾಶೆಯನ್ನು ಕಾಣಬಹುದು.

೧. ಉಡುಪಿಯಿಂದ ಗಯಾಕ್ಷೇತ್ರ–ವಾರಣಾಸಿ–ಅಲಹಾಬಾದ್–ಅಯೋಧ್ಯಾ–ಘೋರಖಪುರದ ಮಾರ್ಗವಾಗಿ ನೇಪಾಳ ಗಡಿಯ ಸುನೋಲಿ ಎಂಬ ಸ್ಥಳ ತಲುಪಬೇಕು. ಭಾರತ–ನೇಪಾಳದ ಗಡಿಯನ್ನು ರಿಕ್ಷಾ/ಸೈಕಲ್‌ರಿಕ್ಷಾ/ಕಾಲ್ನಡಿಗೆ ಯಿಂದ ಕ್ರಮಿಸಬಹುದು. ಗಡಿಯಲ್ಲಿ ಪರಿಚಯವಿದ್ದರೆ ಕಡಿಮೆ ತಪಾಸಣೆ ನಡೆಸುತ್ತಾರೆ. ಇಲ್ಲವಾದಲ್ಲಿ ಸಂಪೂರ್ಣ ಪರೀಕ್ಷೆಗೆ ಒಳಪಡಬೇಕಾಗಬಹುದು. ಅನಂತರ ಬಸ್ಸಿನಲ್ಲಿ ಪೋಖರಾವನ್ನು ೯ ಗಂಟೆಗಳಲ್ಲಿ ತಲುಪಬಹುದು. ಇದರ ವೆಚ್ಚ ೧೫೦ ನೇಪಾಲಿ ರೂಪಾಯಿಗಳು. ಸೋನಾಲಿಯಲ್ಲಿ ತುಂಬಾ ಟ್ರಾವೆಲ್ಸ್ ಮತ್ತು ಟೂರ್ ಓಪರೇಟರ್ಸ್ ಯಾತ್ರೆಯ ವ್ಯವಸ್ಥೆ ಮಾಡುತ್ತಾರೆ. ನಾವು ರೋಯಲ್ ನೇಪಾಲ ವಾಯುಸಾರಿಗೆಯಲ್ಲಿ ರೂಪಾಯಿ ೩,೧೪೦/- ಕೊಟ್ಟು ಕಾಠ್ಮಾಂಡೋಗೆ ತಲುಪಿದೆವು. ಅನಂತರದ ದಿನಗಳಲ್ಲಿ ನೇಪಾಲದ ರಾಜರ ಅರಮನೆ, ರಾಣಿ ಕಾ ಪೋಖರಾ, ಕಾಠ್ಮಾಂಡು ದರ್ಬಾರ್ ಚೌಕ, ಪಠಾಣ್ ಚೌಕ, ಭಕ್ತಪುರ ಚೌಕ, ಸ್ವಯಂಭೂನಾಥ, ಪಶುಪತಿನಾಥ, ಬುದ್ಧನಾಥ, ಬುಡಾ ನೀಲಕನಾಥ, ನಾಗರಕೋಟ್‌ಗಳನ್ನು ನೋಡಿದೆವು.

**ಬುಡಾನೀಲಕನಾಥ** (ವಿಷ್ಣುಜಲಾಶಯನ ಮೂರ್ತಿ) ಎಂಬ ಸ್ಥಳವು ಥಮೆಲ್‌ನಿಂದ ೧೫ ಕಿ.ಮೀ. ದೂರದಲ್ಲಿದೆ. ಇಲ್ಲಿಗೆ ಒಂದು ಗಂಟೆಯ ದಾರಿ. ಸುಮಾರು ೫೦೦೦ ವರ್ಷಗಳ ಹಿಂದೆ ಶ್ರೀಕೃಷ್ಣನು ಪ್ರದ್ಯುಮ್ನನ ವಿವಾಹ ಸಂದರ್ಭದಲ್ಲಿ ಹಾವಿನ ಮೇಲೆ ಮಲಗಿರುವ ವಿಷ್ಣುವಿನ ಮೂರ್ತಿಯನ್ನು ಸ್ಥಾಪಿಸಿದ ಎಂಬ ಪ್ರತೀತಿಯಿದೆ. (ಲೇಖಕನು ಇಲ್ಲಿಗೆ ಭೇಟಿ ನೀಡಿದ್ದಾನೆ.) ಈ ವಿಷ್ಣುವಿನ ತಲೆಯ ಸುತ್ತಲೂ ೭ ಹೆಡೆಯ ಸರ್ಪವಿದ್ದು, ತಲೆ ಮತ್ತು ಹೆಡೆಯ ಮಧ್ಯೆ ಸಹಸ್ರಸಂಖ್ಯೆಯಲ್ಲಿ ಶಾಲಗ್ರಾಮಶಿಲೆಯನ್ನು ಇರಿಸಿರುತ್ತಾರೆ. ಇಲ್ಲಿಗೆ ನೇಪಾಳದ ರಾಜಮನೆತನದವರು ಭೇಟಿ ನೀಡುವಂತಿಲ್ಲ. ಇದು ನೋಡಲು ಬಲು ಸುಂದರ ಮೂರ್ತಿಯಾಗಿದ್ದು, ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ವಿಷ್ಣು ಮಲಗಿ ಕೈಯಲ್ಲಿ ಹಿಡಿದುಕೊಂಡಿರುತ್ತಾರೆ. ೫ ಮೀಟರ್ ಉದ್ದದ ಈ ಬುಡಾ ನೀಲಕನಾಥ ಮೂರ್ತಿಯು ೧೩ ಮೀಟರಿನ ಸರೋವರದಲ್ಲಿದೆ. ಇದು ೭–ಲನೆಯ ಶತಮಾನಕ್ಕೆ ಸೇರಿದ್ದಿರಬೇಕು. ಪಾಶ್ಚಾತ್ಯರು (ಅನ್ಯಧರ್ಮೀಯರು) ಇದನ್ನು ಮುಟ್ಟುವಂತಿಲ್ಲ. ಹಿಂದೂಗಳು ಮಾತ್ರ ಮುಟ್ಟಬಹುದು ಎಂಬ ನಿಯಮವಿದೆ.

ಆ ಬಳಿಕ ಮನಕಾಮನಾ ದೇವಸ್ಥಾನದ ಮೂಲಕ ಪೋಖರಾ ತಲುಪಬಹುದು. ನಮಗೆ ನೇಪಾಳದಲ್ಲಿ ೨೬ ದಿನಗಳ ಹರತಾಳವಿದ್ದ ಕಾರಣ ಲೇಖಕನಿಗೆ ಮುಂದಿನ ಪಯಣ ನಡೆಸಲಾಗಲಿಲ್ಲ.

೨. ಪೋಖರಾದಿಂದ ಜೋಮ್ಸಮ್‌ಗೆ ಹೋಗಬೇಕು. ಸಮುದ್ರಮಟ್ಟದಿಂದ ಸುಮಾರು ೨೭೦೦ ಮೀ. ಎತ್ತರದಲ್ಲಿದೆ. ಈ ಸ್ಥಳವನ್ನು ಪೋಖರಾ–ಜೋಮ್ಸಮ್ ಹೆಲಿಕಾಪ್ಟರ್‌ನ ಮೂಲಕ ರೂಪಾಯಿ ೨೧,೦೦೦/- ಕೊಟ್ಟು ಸುಮಾರು ೪೦ ನಿಮಿಷಗಳಲ್ಲಿ ತಲುಪಬಹುದು. ಜೋಮ್ಸಮ್‌ನ (ಸ್ಟೂಲ್

ವಿಮಾನ ನಿಲ್ದಾಣದಿಂದ) ೨೨ ಕಿ.ಮೀ. ದೂರವಿರುವ ಮುಕ್ತಿನಾಥ ಕ್ಷೇತ್ರವನ್ನು (ಸಮುದ್ರಮಟ್ಟದಿಂದ ೩೮೦೦ ಮೀ.) ಕಾಲ್ನಡಿಗೆಯಿಂದ ಸುಮಾರು ೯ರಿಂದ ೧೦ ಗಂಟೆಗಳಲ್ಲಿ ತಲುಪಬಹುದು. ತದನಂತರ ಪವಿತ್ರ ಶಾಲಗ್ರಾಮವಿರುವ ಕಾಲೀಗಂಡಕೀನದಿ ಕಾಣಬಹುದು. ಈ ದೂರವನ್ನು ವೇಗದಿಂದ ಕೇವಲ ೭ ಗಂಟೆಗಳಲ್ಲಿಯೂ ಕ್ರಮಿಸಲು ಸಾಧ್ಯವಿದೆ.

೩. ಪ್ರೋಖರಾದಿಂದ ಕಾಂಗ್‌ಬೇಗಿ ಎಂಬ ಸ್ಥಳಕ್ಕೆ ಬಸ್ಸಿನಲ್ಲಾದರೆ ೫ ಗಂಟೆಗಳು ತಗಲುತ್ತವೆ. ಅಲ್ಲಿಂದ ಮುಂದೆ ಕಾಲ್ನಡಿಗೆಯಲ್ಲಿಯೇ ಶಾಲಗ್ರಾಮಕ್ಷೇತ್ರಕ್ಕೆ ತಲುಪಬೇಕು. ಇದಕ್ಕೆ ೫ರಿಂದ ೬ ದಿನಗಳು ಬೇಕು.

೪. ಮುಕ್ತಿನಾಥಕ್ಷೇತ್ರದಿಂದ ದಾಮೋದರಕುಂಡಕ್ಕೆ ೨ ದಿನಗಳ ಕಾಲ್ನಡಿಗೆ ದೂರವಿದೆ. ಯಾವ ಆಹಾರಗಳಾಗಲೀ ದಾರಿ ಮಧ್ಯೆ ಸಿಕ್ಕುವುದಿಲ್ಲ. ಮಾರ್ಚ್-ಎಪ್ರಿಲ್ ತಿಂಗಳು ಅಂದರೆ ಶಿವರಾತ್ರಿಯ ಸಮಯದಲ್ಲಿ ದರ್ಶನಕ್ಕೆ ಪ್ರಶಸ್ತ. ಈ ಗಂಡಕೀ ಕಣಿವೆಯು ಅನ್ನಪೂರ್ಣ ಮತ್ತು ಧವಳಗಿರಿ ಪರ್ವತದ ಮಧ್ಯಭಾಗದಲ್ಲಿದ್ದು, ಇಲ್ಲಿ ಬಲವಾದ ಗಾಳಿ ಬೀಸುತ್ತಿರುತ್ತದೆ.

ನನ್ನ ಮಿತ್ರರಾದ ನಟರಾಜ ಉಪಾಧ್ಯಾಯರು ಹಾಗೂ ಅನಿಲ್ ಆಚಾರ್ಯ, ಓಂತಿಬೆಟ್ಟು ಅವರು ಪೋಖರಾದಿಂದ ಮುಕ್ತಿನಾಥವನ್ನು ರಸ್ತೆ ಮೂಲಕ ಒಂದೇ ದಿನದಲ್ಲಿ (೨೦೦೯ರಲ್ಲಿ) ತಲುಪಿದ್ದಾರೆ. ಶಾಲಗ್ರಾಮ ತೀರ್ಥಸ್ಥಳಕ್ಕೆ ಸಾಗುವಂತಹ ಕಾಲ್ನಡಿಗೆಯಲ್ಲಿ ಸಾಗುವ ನಕ್ಷೆ ಹಾಗೂ ACAP (Annapoorna Conservation Area Project) ನಕ್ಷೆ ಹಾಗೂ ACAPಯವರು ನೀಡುವಂತಹ ಅನುಮತಿಪತ್ರಗಳ ಮಾದರಿಗಳನ್ನು ಕಾಣಬಹುದು.

**ಪೋಖರಾದಿಂದ ಮುಕ್ತಿನಾಥದವರೆಗಿನ ಕಾಲ್ನಡಿಗೆಯ ದಾರಿ ಈ ರೀತಿಯಾಗಿದೆ:** (ಮಕ್ತಿನಾಥ ಕ್ಷೇತ್ರಕ್ಕೆ) ಪ್ರೊಖರಾ, ಸಾರನ್‌ಕೋಟ್, ಪೂನ್ ಹಿಲ್, ಟೋಟೋಪಾನಿ, ಲೇತೇ, ದಾನಾ, ಘಾಸಾ, ಘೋಪಕೋಲಾ, ಲಾರ್‌ಜಂಗ್, ಕೋಬಾಂಗ್, ತುಕ್ಚೆ, ಮರ್ಫ, ಸ್ಯಾಂಗ್, ಜೋಮ್ಸಮ್, ಕಾಂಗ್‌ಬೇನಿ, ಏಕ್ಲೋಭಟ್ಟಿ, ಖೀನಗರ, ಝೂರ್‌ಕೋಟ್ ರಾನಿಪಾವ (Ranipauwa) ಅಪ್ಪರ್ ಮತ್ಸಂಗ, ಮಕ್ತಿನಾಥ.

## ಜೋಮ್ಸಮ್‌ನ ವಿಶೇಷತೆಗಳು :

- ಇದು ಸಮುದ್ರಮಟ್ಟಕ್ಕಿಂತ ಸುಮಾರು ೨೭೦೦ ಮೀಟರ್ ಎತ್ತರದಲ್ಲಿದೆ.
- ಇಲ್ಲಿರುವ ಕಾಲೀಗಂಡಕೀನದಿಯು ಹಿಮಾಲಯಪರ್ವತಶ್ರೇಣಿಗಿಂತಲೂ ಹಳೆಯದು.
- ಇದು ಟಿಬೇಟಿಯನ್ ಪ್ರಸ್ಥಭೂಮಿ ಮತ್ತು ಹಿಮಾಲಯ ತಪ್ಪಲಿನ ಸಂಧಿಯಲ್ಲಿದೆ.
- ಇದು ಶಾಲಗ್ರಾಮಕ್ಷೇತ್ರ ಎಂಬ ಪವಿತ್ರಭೂಮಿಯನ್ನು ಹೊಂದಿದೆ.
- ಕಾಲೀಗಂಡಕೀ ಕಣಿವೆಯು ಪ್ರಪಂಚದ ಅತ್ಯಂತ ಆಳವಾದ ಕಣಿವೆಯಲ್ಲಿ ಒಂದಾಗಿದೆ.
- ಇದು ಜುರಾಸಿಕ್ ಕಾಲದ ಅತೀ ಹಳೆಯ ಕಾಲದ ಪಳೆಯುಳಿಕೆಯನ್ನು ಹೊಂದಿದೆ ಹಾಗೂ ಇದು ಕಾಳೀಗಂಡಕೀ ಪ್ರದೇಶದಲ್ಲಿ ದೊರಕುತ್ತದೆ.
- ಈ ಪ್ರದೇಶದಲ್ಲಿ (ಹಿಮವತ್ಪರ್ವತದ ತಪ್ಪಲಲ್ಲಿ) ಸೇಬುಹಣ್ಣು ಮತ್ತು ಟುಲಿಪ್ ಹೂವುಗಳು ಬೆಳೆಯುತ್ತವೆ. (ಟುಲಿಪ್ ಹೂಗಳನ್ನು ಕಾಶ್ಮೀರದ ಉದ್ಯಾನದಲ್ಲೂ ಕಾಣಬಹುದು.)
- ಇದು ಮಾತ್ರ ೨೮೦೦ ಕಿ.ಮೀ.ಗಿಂತ ಕೆಳಗಿದ್ದು, ಪರ್ವತ ಹತ್ತಿರವಿದ್ದು (ನೀಲಗಿರಿ ಮತ್ತು ಟಿಲಿಕೋ ಶ್ರೇಣಿಗಳು) ಅತ್ಯಂತ ಸುರಕ್ಷಿತವಾಗಿದೆ.

– ಇಲ್ಲಿರುವ ಉಪಾಹಾರಗೃಹ ಮತ್ತು ಅತಿಥಿಗೃಹಗಳು ಸ್ಥಳೀಯ ಕಲ್ಲು, ಮಣ್ಣು ಮತ್ತು ಮರಳು ಗಳಿಂದ ಕಟ್ಟಲ್ಪಟ್ಟಿದ್ದು ಪ್ರಾಕೃತಿಕ/ನೈಸರ್ಗಿಕ ಸಂಪನ್ಮೂಲಗಳನ್ನು ರಕ್ಷಿಸಲಾಗಿದೆ. ಇಲ್ಲಿ ಎಲ್ಲವನ್ನೂ ಹೆಲಿಕಾಪ್ಟರ್‌ನ ಮೂಲಕವೇ ಸಾಗಾಟ ಮಾಡುತ್ತಾರೆ.

– ಇಲ್ಲಿ ಜನರೇಟರ್, ನೀರು ಸಂಸ್ಕರಣ ಕೇಂದ್ರ, ನೀರು ಹರಿಯಲು ವ್ಯವಸ್ಥೆ, ಬಟ್ಟೆ ಒಗೆದು ಇಸ್ತ್ರಿ ಕೊಡಲು ವ್ಯವಸ್ಥೆ, ಬಿಸಿನೀರಿನ ವ್ಯವಸ್ಥೆ, ಅಡುಗೆಮನೆಯ ಎಲ್ಲ ವಸ್ತುಗಳು, ದೂರಸಂಪರ್ಕವ್ಯವಸ್ಥೆ, ದೂರದರ್ಶನ, ಈಜುಕೊಳ, ಮಾಲಿಶ್ ಹಾಗೂ ಧ್ಯಾನಮಾಡಲು ಪ್ರಾರ್ಥನಮಂದಿರ –ಹೀಗೆ ಎಲ್ಲವುಗಳ ವ್ಯವಸ್ಥೆ ಇದೆ.

– ಇಲ್ಲಿ ಸಾಧಾರಣವಾಗಿ ಮಳೆ ಬೀಳುವುದು. ಹಾಗೂ ಮೋಡ ಕವಿದ ವಾತಾವರಣ ಇರುತ್ತದೆ.

– ಇಲ್ಲಿ ಹಸಿರು ಪ್ರದೇಶ, ಎತ್ತರವಾದ ಪರ್ವತಶ್ರೇಣಿಗಳು, ಪವಿತ್ರ ಮಂದಿರಗಳು ಮತ್ತು ಬುದ್ಧ ದೇವಾಲಯ ಮತ್ತು ಭೋರ್ಗರೆವ ನದಿಗಳನ್ನು ಕಾಣಬಹುದಾಗಿದೆ.

– ಇಲ್ಲಿ Stol ಎಂಬ ವಿಮಾನ ನಿಲ್ದಾಣ (Air port) ಇರುವುದು ಮತ್ತು ಹಿಮಾಲಯ ಪ್ರಾಂತಕ್ಕೆ ತುಂಬಾ ವಿಮಾನಯಾನಿಗಳನ್ನು ಕರೆದು ತರುವುದು.

– ಇಲ್ಲಿಗೆ ಅತಿ ಹೆಚ್ಚು ಸಂಖ್ಯೆಯಲ್ಲಿ ಕಾಲ್ನಡಿಗೆಯಲ್ಲಿ ಸಾಗಲು (ಪರ್ವತಾರೋಹಣಕ್ಕೆ) ಜನಸ್ತೋಮ ಬರುತ್ತದೆ.

– ಇದು ಪೋಖರಾದಿಂದ ಬರೀ ೨೦ ನಿಮಿಷಗಳ ವಿಮಾನಯಾನ ತಾಣವಾಗಿದೆ.

– ಅನ್ನಪೂರ್ಣ ಮತ್ತು ಧವಲಗಿರಿ ಎಂಬ ಎರಡು ಪರ್ವತಶ್ರೇಣಿಗಳ ಮಧ್ಯೆ (ಸು. ೮೦೦೦ ಮೀ.ಗಿಂತಲೂ ಎತ್ತರದ ಶ್ರೇಣಿಗಳ ನಡುವೆ) ಯಾನ ಮಾಡಬೇಕಾಗುವ ತಾಣ.

– ಈ ಕಣಿವೆಯಲ್ಲಿ ಸಾಗುವಾಗ ಮಧ್ಯಾಹ್ನದ ಹೊತ್ತಿನಲ್ಲಿ ಮಾತ್ರ ಸೂರ್ಯನ ಕಿರಣಗಳು ಬೀಳುತ್ತವೆ.

– ಇದು ಮತ್ಸಂಗ ಎಂಬ ಪ್ರಾಂತಕ್ಕೊಳಪಡುತ್ತದೆ. ಹಾಗೂ ನೇಪಾಲ ರಾಜ್ಯದ ಪ್ರಮುಖ ಪ್ರಾಂತ ವಾಗಿದೆ.

– ಇಲ್ಲಿ ಜನ ಗುಹೆಯಲ್ಲಿ ವಾಸ ಮಾಡುತ್ತಿದ್ದರು. ಅವುಗಳ ಗುರುತುಗಳನ್ನು ಕಾಣಬಹುದು.

– ಇದು ಒಂದು ಕಾಲದಲ್ಲಿ ಸಮುದ್ರವಾಗಿದ್ದು, ಮಹಾವಿಷ್ಣುವಿನ ವರದಾನದಿಂದ ಹಿಮಾಲಯಪರ್ವತ ವಾಗಿರುವುದಕ್ಕೆ ಸಾಕ್ಷಿಯಾಗಿದೆ.

– ಇಲ್ಲಿ ಪ್ರತಿವರ್ಷ ಸೈಬೀರಿಯಾದ ಕೊಕ್ಕರೆಗಳು ಜೋಮ್ಸಮ್‌ನ ದಕ್ಷಿಣಕ್ಕಾಗಿ, ಆಕಾಶ ತುಂಬಾ ಹಾರಿಹೋಗುತ್ತವೆ.

– ಇಲ್ಲಿರುವ ಟಿಲಿಚೊ ಸರೋವರವು ೧೬,೭೦೦ ಅಡಿ ಎತ್ತರದಲ್ಲಿದ್ದು ಪ್ರಪಂಚದ ಅತಿ ಎತ್ತರದ ಸರೋವರವಾಗಿರುತ್ತದೆ.

– ಮುಕ್ತಿನಾಥದಲ್ಲಿ ಭಗವಾನ್ ಶ್ರೀವಿಷ್ಣುವು ತನ್ನ ಬಲ ಮತ್ತು ಎಡ ಬದಿಗಳಲ್ಲಿ ತನ್ನ ಪತ್ನಿಯರಾದ ಲಕ್ಷ್ಮೀದೇವಿ ಮತ್ತು ಭೂದೇವಿಯರೊಂದಿಗೆ ಇರುವನು. ದೇವರ ಈ ಮೂರ್ತಿಯ ದರ್ಶನ ನಿಜ ವಾಗಿಯೂ ರೋಮಾಂಚಕ. ಇದರೊಂದಿಗೆ ದೊಡ್ಡ ಸುದರ್ಶನ ಮತ್ತು ಹೃಷೀಕೇಶ ಶಾಲಗ್ರಾಮವೂ ಪೂಜಿಸಲ್ಪಡುವುದು. ಈ ದೇವಾಲಯವನ್ನು ಸುತ್ತುವರೆದ ಹಿಮಾಚ್ಛಾದಿತ ಪರ್ವತಗಳಂತೂ

ರುದ್ರರಮಣೀಯ. ಹೆಸರೇ ವ್ಯಕ್ತಪಡಿಸುವಂತೆ ಮುಕ್ತಿನಾಥ ಕ್ಷೇತ್ರವು ಧರ್ಮಶಾಸ್ತ್ರದ ಪ್ರಕಾರ ಮುಕ್ತಿಯನ್ನು ಕೊಡುವ ದೇಗುಲವಾಗಿದೆ.

– ಮುಕ್ತಿನಾಥ ಕ್ಷೇತ್ರವು ಹಿಂದೂ ಹಾಗೂ ಬೌದ್ಧಧರ್ಮದವರಿಗೆ ಪವಿತ್ರವಾದ ತೀರ್ಥಯಾತ್ರಾ ಸ್ಥಳವಾಗಿದೆ. ಇದನ್ನು ಕನಕವಿಮಾನಗೋಪುರ ಗರ್ಭಗೃಹ ಎಂದೂ ಕರೆಯುತ್ತಾರೆ.

– ಇಲ್ಲಿಯ ಲಕ್ಷ್ಮೀನಾರಾಯಣ ದೇವಸ್ಥಾನವು ಬೌದ್ಧರ ದೇವಾಲಯ ಮತ್ತು ಪಗೋಡ ಶೈಲಿಯಲ್ಲಿ ರಚಿಸಲ್ಪಟ್ಟಿದೆ.

– ಈ ದೇವಾಲಯದ ಸುತ್ತಲೂ ೧೦೮ ನೀರಿನ ಝರಿ(ಧಾರೆ)ಗಳಿವೆ. ದನದ ತಲೆಯ ಆಕಾರವನ್ನು ಹೊಂದಿರುವ, ದನದ ಬಾಯಿಯಿಂದ ಪವಿತ್ರಜಲವಾಗಿ ಧಾರೆಯು ಹೊರಹೊಮ್ಮುತ್ತದೆ.

– ಈ ಪವಿತ್ರವಾದ ನೀರಿನ ಚಿಲುಮೆಯು ಪುರಾತನವಾದ ಟಿಬೇಟಿಯನ್ ಶೈಲಿಯ ಜ್ವಾಲಾಮಾಯಿ ದೇವಸ್ಥಾನದ ಒಳಗಿನ ಬಂಡೆಯಿಂದ ಒಸರುತ್ತದೆ. ಇದು ಮುಕ್ತಿನಾಥ ದೇಗುಲದ ಸ್ವಲ್ಪವೇ ದೂರದಲ್ಲಿದೆ.

– ಇದರ ಇನ್ನೊಂದು ಬದಿಯಲ್ಲಿಯೇ ಸ್ವಾಭಾವಿಕವಾದ ಸಣ್ಣ ಜ್ವಾಲೆಯೂ ಇರುವುದು. ಜ್ವಾಲೆ ಮತ್ತು ನೀರು ಒಟ್ಟಾಗಿರುವುದೇ ಇಲ್ಲಿಯ ವಿಶೇಷ. (ವಿಷ್ಣುವು ನೀರಿನ ರೂಪದಲ್ಲಿ ಹಾಗೂ ಶಿವನು ಜ್ವಾಲಾರೂಪದಲ್ಲಿರುವರೆಂಬ ಪ್ರತೀತಿಯೂ ಇದೆ.

– ಈ ಬೆಂಕಿ ಮತ್ತು ನೀರುಗಳ ಒಟ್ಟಾಗಿರುವಿಕೆಯೇ ಮುಕ್ತಿನಾಥಕ್ಷೇತ್ರವು ಅತಿ ಮಹತ್ವ ಹಾಗೂ ಪವಿತ್ರವಾದ ಧಾರ್ಮಿಕ ಕೇಂದ್ರವಾಗಲು ಕಾರಣವಾಗಿದೆ.

– ಜೋಮ್ಸುಮ್‌ನವರೆಗೆ ವಿಮಾನಯಾನ ಕೈಗೊಂಡು, ತದನಂತರ ಮುಕ್ತಿನಾಥಕ್ಷೇತ್ರವನ್ನು ಪೋನಿ ಅಥವಾ ಕಾಲ್ನಡಿಗೆಯಿಂದ ಸಾಗಬಹುದಾಗಿದೆ.

– ಬಟ್ಟೆ ಇಲ್ಲದೆ, ಅರೆಬಟ್ಟೆ ಧರಿಸಿ, ಮೈಗೆ ವಿಭೂತಿ ಬಳಿದುಕೊಂಡು ಜಟೆ ಧರಿಸಿ, ತ್ರಿಶೂಲ ಹಿಡಿದು ಕೊಂಡು ಸಾಗುವ ಸಾಧುಸನ್ಯಾಸಿಗಳನ್ನು ಹೆಚ್ಚಾಗಿ ಕಾಣಬಹುದು.

– ಕಾಂಗ್‌ಬೇಸಿಯಿಂದ ಮುಕ್ತಿನಾಥಕ್ಷೇತ್ರವನ್ನು ಎಕ್ಲೊ ಭಟ್ಟಿ ಎಂಬಲ್ಲಿಂದ ನೇರವಾಗಿ ಹತ್ತಲು ಸುರು ಮಾಡಬಹುದು. ಇದು ಕಾಂಗ್‌ಬೇನಿಯಿಂದ ಪಶ್ಚಿಮದಿಕ್ಕಿನಲ್ಲಿದೆ. ಝೂಂಗ್ ಖೋಲಾ ಎಂಬ ಆಳವಾದ ಕಣಿವೆಯ ಮೂಲಕ ಹತ್ತಬೇಕು. ದಾರಿಯಲ್ಲಿ ಗಾಳಿಯಂತ್ರವು ದೊರಕುತ್ತದೆ. ಇದು ಕಾಂಗ್‌ಬೇಸಿ ಮತ್ತು ಕಿಂಗರ್‌ಗೆ ವಿದ್ಯುಚ್ಛಕ್ತಿ ಪೂರೈಸುತ್ತದೆ. ದಾರಿಯಲ್ಲಿ ಯಾತ್ರಿಗಳು ಕಲ್ಲುಬಂಡೆ ಗಳನ್ನು ಪೇರಿಸಿ, ಇರಿಸಿ ತಮ್ಮ ಪೂರ್ವಜರಿಗೆ ಗೌರವ/ ನಮಸ್ಕಾರ ಸಲ್ಲಿಸುವುದನ್ನು ಕಾಣಬಹುದು.

– ಎಕ್ಲೊ ಭಟ್ಟಿಯಿಂದ (ಜೋಮ್ಸುಮ್‌ನಿಂದ ೯.೫ ಕಿ.ಮೀ. ದೂರದಲ್ಲಿದೆ.) ಮುಕ್ತಿನಾಥಕ್ಷೇತ್ರಕ್ಕೆ (ಕಾಲೀಗಂಡಕಿಯ ಮೇಲಿರುವ) ಝೂಂಗ್ ಖೋಲಾ ಕಣಿವೆಯ ಮೂಲಕ ಸಾಗುವಾಗ ಗಾಳಿ ಯಿಂದ ಕೂಡಿದ ಕಡಿದಾದ ದಾರಿಯು ಸಿಗುತ್ತದೆ. ಧವಲಗಿರಿ ಮತ್ತು ನೀಲಗಿರಿ ಪರ್ವತಶ್ರೇಣಿಗಳ ದೃಶ್ಯಗಳು ನಯನಮನೋಹರ ಮತ್ತು ರೋಮಾಂಚಕ!

– ಎಕ್ಲೊ ಭಟ್ಟಿ ಮುಕ್ತಿನಾಥ ಕ್ಷೇತ್ರವನ್ನು ಹತ್ತಲು ಶುರು ಮಾಡುವ ಮೊತ್ತ ಮೊದಲ ಶಿಬಿರ (Base camp.) ಇಲ್ಲಿಂದ ಎರಡೂವರೆ ಗಂಟೆಯ ಕಾಲ್ನಡಿಗೆ.

– ದಾರಿಯಲ್ಲಿ ಸಿಗುವ ಟಿಬೇಟಿಯನ್ ವರ್ತಕರು ಅವರು ತಯಾರಿಸಿದ ಕರಕುಶಲ ವಸ್ತುಗಳು, ಬಟ್ಟೆಬರೆಗಳನ್ನು ಮತ್ತು ಶಾಲಗ್ರಾಮಶಿಲೆಗಳನ್ನು ತೆಗೆದುಕೊಳ್ಳುವಂತೆ ಯಾತ್ರಾರ್ಥಿಗಳ ಮನ ಒಲಿಸಲು ಪ್ರಯತ್ನಿಸುತ್ತಾರೆ. ಈ ಶಿಲೆಗಳನ್ನು ಒಡೆದಾಗ ಸುಮಾರು ೧೩೦ ಮಿಲಿಯ ವರ್ಷಗಳ ಹಿಂದೆ ರೂಪಾಂತರಗೊಂಡ ಅಮೋನೈಟ್ ಪಳೆಯುಳಿಕೆಗಳನ್ನು ಅದರೊಳಗೆ ಕಾಣಬಹುದು. ಪ್ರತಿಯೊಬ್ಬ ಹಿಂದೂ ಯಾತ್ರಾರ್ಥಿ ಇದನ್ನು ವಿಕ್ರಯಿಸುತ್ತಾನೆ. ಮೊತ್ತ ಮೊದಲ ಬಾರಿ, ೧೮೬೪ರಲ್ಲಿ ಮಣಿಸಿಂಗ್ ಎನ್ನುವ ಪಂಡಿತನೊಬ್ಬ ಕೆಳಗಿನ ಮತ್ಸಂಗದಿಂದ ಮುಕ್ತಿನಾಥ ಮತ್ತು ಕಾಂಗ್‌ಬೇಸಿಯ ಮಾರ್ಗವಾಗಿ ಕಾಠ್ಮಾಂಡೋ ತಲಪಿದ. ಇದರ ಬಗ್ಗೆ Survey of Indiaದಿಂದ ಯಾವ ವಿಷಯವೂ ಲಭ್ಯವಾಗಿಲ್ಲ. ಅನಂತರ ೧೮೭೩ರಲ್ಲಿ ಪಂಡಿತ ಹರಿರಾಂ ಈ ಮಾರ್ಗವನ್ನು ಜನರಿಗೆ ತಿಳಿಸಿದ. ಅವನು ಪಶ್ಚಿಮ ನೇಪಾಳವಾಗಿ ಟಿಬೇಟಿಗೆ ಹೋಗಿದ್ದನು. ಜುಮ್ಲಾ, ಚಕ್ರಾ, ಕಾಂಗ್‌ಬೇನಿ, ಮುಕ್ತಿನಾಥದ ಮೂಲಕ ಲೋ ಮನ್‌ತಾಂಗ್‌ಗೆ ಹೋದನು. ಇತರ ಪ್ರಯಾಣದ ಬಗ್ಗೆ ೧೯೭೫ರಲ್ಲಿ ಈ ಬಗ್ಗೆ ಸಾರ್ವಜನಿಕರಿಗೆ ಸಾರ್ವತ್ರಿಕವಾಗಿ ತಿಳಿಯಪಡಿಸಲಾಯಿತು.

– ಅನಂತರದ ದಿನಗಳಲ್ಲಿ ೧೮೯೯ರಲ್ಲಿ Ekai Kawaguchi ಎನ್ನುವ ಜಪಾನಿನ ಬೌದ್ಧಸನ್ಯಾಸಿಯು ಟಿಬೇಟಿನ ಪ್ರಾಂತ್ಯದಿಂದ ಮತ್ಸಂಗಕ್ಕೆ ಪ್ರಯಾಣಿಸಿದ. ಈತ ಟಿಬೇಟಿನ ಬೌದ್ಧಮತದ ಬಗ್ಗೆ ಅಧ್ಯಯನ ಮಾಡಲು ಕುತೂಹಲವಾಗಿದ್ದ. ಈತನೇ ಮೊತ್ತಮೊದಲ ಜಪಾನೀ ಹಾಗೂ ಪರದೇಶೀಯ ಯಾತ್ರಾರ್ಥಿ. ಈತನು ಟಿಬೇಟಿನ ಧಾರ್ಮಿಕತತ್ವ, ರೀತಿರಿವಾಜು, ಭಾಷೆಯನ್ನು ಕರಗತ ಮಾಡಿಕೊಳ್ಳಲು ಪ್ರಯತ್ನಪಟ್ಟು ಸೋತುಹೋಗಿದ್ದನು. ಅನಂತರ ಸಫಲನಾದನು. ಈತನು ಆ ಕಷ್ಟಕರ, ಕಠಿನ ದಾರಿಯನ್ನು ಪರಿಕ್ರಮಿಸಲು ಬೇಕಾದ ಸಲಕರಣೆಗಳನ್ನು ಹೊಂದಿರದೆ, ದಾರಿಯುದ್ದಕ್ಕೂ ನಡೆದ ದರೋಡೆಯಿಂದ ತಪ್ಪಿಸಿಕೊಂಡು, ಆಹಾರವಿಲ್ಲದೆ ಬಳಲಿದವನಾಗಿ, ಶೀತಲ ವಾತಾವರಣ ಹಾಗೂ ಮಾರ್ಗದರ್ಶಕನಿಲ್ಲದ್ದರಿಂದ ದಿಕ್ಕು-ಮಾರ್ಗ ತೋಚದವನಾಗಿದ್ದ. ಈತನ ಟಿಬೇಟಿಯನ್ನ ರೊಂದಿಗಿನ ಜೀವನ ಮತ್ತು ಯಾತ್ರೆಯ ಬಗ್ಗೆ ತನ್ನ ಹೆಸರಾಂತ ಪುಸ್ತಕ 'ಟಿಬೇಟಿನ ಮೂರು ವರ್ಷಗಳು' ಎನ್ನುವುದರಲ್ಲಿ ವಿವರಿಸಿದ್ದಾನೆ. ೧೯೫೦-೬೦ ನಡುವೆ ಅಪಾರ ಸಂಖ್ಯೆಯಲ್ಲಿ ವಿದೇಶೀಯರು ಪರ್ವತಾರೋಹಣ ಕ್ಕಾಗಿ ಇಲ್ಲಿಗೆ ಭೇಟಿ ನೀಡಿರುತ್ತಾರೆ.

– ಸತ್ಯಂ ಟ್ರಾವೆಲ್ಸ್‌ನವರು ಪೋಖರಾದಿಂದ ದಾಮೋದರಕುಂಡ ಮತ್ತು ಮುಕ್ತಿನಾಥ ಯಾತ್ರೆಯನ್ನು ಪೋನಿ/ಕಾಲ್ನಡಿಗೆಯಲ್ಲಿ ಮಾಡಲು ವ್ಯವಸ್ಥೆ ಮಾಡುತ್ತಾರೆ. ಪರ್ವತಾರೋಹಣ ಮಾಡುವುದಾದರೆ ಹದಿನಾಲ್ಕು ದಿನ ಬೇಕು (ಜೂನ್-ಸಪ್ಟಂಬರ್ ಮಧ್ಯಭಾಗದಲ್ಲಿ ಪ್ರಶಸ್ತ.)

ಮೂರು ರಾತ್ರಿ ನಾಲ್ಕು ಹಗಲುಗಳಲ್ಲಿ ಸತ್ಯಂ ಟ್ರಾವೆಲ್ಸ್‌ನವರು ಪೋಖರಾ-ಜೋಮ್ಸಮ್‌ಗೆ ವಿಮಾನದಲ್ಲಿ ಕರೆದು ಕೊಂಡು ಬಂದು ಜೋಮ್ಸಮ್‌ನಲ್ಲಿ ತಂಗುತ್ತಾರೆ. ಎರಡನೆಯ ದಿನ ಪೋನಿಯಲ್ಲಿ ಮುಕ್ತಿನಾಥ ದರ್ಶನ ಮಾಡಿಸಿ, ಅನಂತರ ಜೋಮ್ಸಮ್‌ಗೆ ಬಂದು ತಂಗುತ್ತಾರೆ. ಮೂರನೆಯ ದಿನ ಹೆಲಿಕಾಪ್ಟರ್‌ನಲ್ಲಿ ದಾಮೋದರಕುಂಡಕ್ಕೆ ಹೋಗಿ, ಪೂಜಿಸಿ, ವಾಪಾಸು ಜೋಮ್ಸಮ್‌ಗೆ ಬಂದು ತಂಗುತ್ತಾರೆ. ನಾಲ್ಕನೇ ದಿನ ಜೋಮ್ಸ್‌ಮ್‌ನಿಂದ ವಿಮಾನದಲ್ಲಿ ಪೋಖರ ತಲುಪಿಸುತ್ತಾರೆ. ಇದರ ಒಟ್ಟು ಖರ್ಚು ಒಬ್ಬನಿಗೆ ರೂಪಾಯಿ ೪೯,೯೯೯/- ಮಾತ್ರ. ಒಂದು ತಂಡದಲ್ಲಿ ಕನಿಷ್ಠ ೧೫ ಜನರ ಆವಶ್ಯಕತೆ ಇದೆ.

ಹೆಲಿಕಾಪ್ಟರ್‌ನಿಂದ ಪ್ರಯಾಣಿಸಬಹುದು. ಕಾಲ್ನಡಿಗೆಯಲ್ಲಿ ಸಾಗಬೇಕಾದರೆ ಮೇ-ಜೂನ್ ತಿಂಗಳುಗಳ ಮಧ್ಯಭಾಗ ಪ್ರಶಸ್ತ ಸಮಯ. ಭಾರತೀಯರು ಮತ್ತು ಇತರ ಸಾರ್ಕ್ ರಾಷ್ಟ್ರಗಳು ರೂಪಾಯಿ ೨೦೦/- (ACAP) [Annapurna Conservation Project] ನಿಗದಿತ ಶುಲ್ಕ ಮತ್ತು ಗುರುತುಪತ್ರ ನೀಡಿದ

ಬಳಿಕ ಮುಂದೆ ಸಾಗಲು ಅನುಮತಿಯನ್ನು ಕೊಡುತ್ತದೆ. ಇಲ್ಲಿ (ಕಾಂಗ್‌ಬೇನಿ ಗ್ರಾಮದ ಉತ್ತರದಿಕ್ಕಿನಲ್ಲಿ) ಪ್ರೊಲೀಸರ ಬಿಗು ಪಹರೆಯಿದೆ. ಇತರ ರಾಷ್ಟ್ರದವರು ರೂಪಾಯಿ ೨೦೦೦/- ಫೀಸ್ ಕೊಡಬೇಕು. ಗುರುತು ಪತ್ರ (ಪಾಸ್‌ಪೋರ್ಟ್ ಉತ್ತಮ) ಹೊಂದಿರಬೇಕು.

## ದಾಮೋದರ ಹಿಮಾಲಯ :

ಇದು ಹಿಮಾಲಯಪರ್ವತಶ್ರೇಣಿಯ ಮತ್ಸಂಗ ಜಿಲ್ಲೆಯಲ್ಲಿದೆ. ಮುಕ್ತಿನಾಥ ಹಿಮಾಲಯ (೬೭೦೬ ಕಿ.ಮೀ.) ಎತ್ತರದ ಪರ್ವತಶ್ರೇಣಿಗಳನ್ನೊಳಗೊಂಡು ಸುಮಾರು ೬೫ ಶ್ರೇಣಿಗಳಿಂದ ಕೂಡಿದೆ. ಮುಕ್ತಿನಾಥ ದಿಂದ ದಾಮೋದರಕುಂಡಕ್ಕೆ ಎರಡು ದಿನದ ಪ್ರಯಾಣವಿದೆ. ದಾಮೋದರಕುಂಡ ಎಂಬ ಆಳದ ಸರೋವರವು ದಾಮೋದರ ಪರ್ವತಶ್ರೇಣಿಗಳ ತಪ್ಪಲಿನಲ್ಲಿ, ಅನ್ನಪೂರ್ಣಾಪರ್ವತಶ್ರೇಣಿಯ ಪೂರ್ವ ದಿಕ್ಕಿನಲ್ಲಿ, ದಕ್ಷಿಣಾಭಿಮುಖವಾಗಿ ಹರಿಯುತ್ತದೆ. ಕಾಲೀಗಂಡಕೀನದಿಯು ಉಗಮದ ಕತೆಯನ್ನು ಎರಡು ರೀತಿಯಲ್ಲಿ ಹೇಳುತ್ತಾರೆ. ಒಂದು ರೀತಿಯಲ್ಲಿ ಹೇಳುವುದಾದರೆ, ಈ ನದಿಯು ಟಿಬೇಟಿನ ಗಡಿಯಲ್ಲಿಯ ದಾಮೋದರಕುಂಡ ಎಂಬ ಸರೋವರದಿಂದ ಇದು ಮುಕ್ತಿನಾಥಕ್ಷೇತ್ರದ ಉತ್ತರ ಪೂರ್ವದಿಕ್ಕಿನಿಂದ (ದಾಮೋದರಕುಂಡದಿಂದ) ಹರಿದುಬರುತ್ತದೆ. ಇನ್ನು ಕೆಲವರು ಈ ನದಿಯು ಲೋ ಮಂಗ್‌ತಾಂಗ್‌ನ ಉತ್ತರ ಪಶ್ಚಿಮಕ್ಕಿರುವ 'ಡೋಂಗ್‌ಮಾರ್' ಪರ್ವತಶ್ರೇಣಿಯ ಬಿರುಕಿನಿಂದ ಹರಿದು ಬರುವುದು ಎನ್ನುತ್ತಾರೆ. ದಾಮೋದರಕುಂಡದ ನೀರಿಗೆ ಅದರದ್ದೇ ಆದ ವೈಶಿಷ್ಟ್ಯವಿದೆ. ಇಲ್ಲಿ ಅನೇಕ ಇತರ ಸರೋವರಗಳಿದ್ದು ಸ್ಥಳೀಯರು ಇದನ್ನು 'ಪರ್ವತಸರೋವರ' ಎಂದು ಕರೆಯುತ್ತಾರೆ.

ದಾಮೋದರಕುಂಡವು ಮತ್ಸಂಗದಿಂದ ಪೂರ್ವದಿಕ್ಕಿನಲ್ಲಿ –ಟಿಬೇಟ್ ಗಡಿಯ ಅಂಚಿನಲ್ಲಿ– ಇದೆ. ಇಲ್ಲಿಗೆ ಮೂರು ದಿನಗಳಲ್ಲಿ ಕಾಲ್ನಡಿಗೆಯಿಂದ ಕ್ರಮಿಸಬಹುದಾಗಿದೆ. ಈ ಸರೋವರದ ಮೇಲ್ಭಾಗದಲ್ಲಿ ಕೆಲವೇ ಪರ್ವತಶ್ರೇಣಿಗಳನ್ನು ಹತ್ತಿ ನೋಡಬಹುದಾದ ಸುಂದರ ತಾಣಗಳಿವೆ. ದಾಮೋದರ ಕುಂಡವು ತೀರ ಕಷ್ಟವಲ್ಲದ ಆದರೆ ಅತಿ ಆಳ ಹಾಗೂ ಎತ್ತರ ಜಾಗದಿಂದ ಕಾಲ್ನಡಿಗೆಯಿಂದಲೇ ಸಾಗಬೇಕಾದ ತಾಣ.

ಇದು ಸಮುದ್ರ ಮಟ್ಟಕ್ಕಿಂತ ೬,೧೦೦ ಮೀಟರ್ ಅಂದರೆ, ಸುಮಾರು ೨೧,೦೦೦ ಅಡಿ ಎತ್ತರದಲ್ಲಿರುವ ಕಾರಣ ಉಸಿರಾಟದ ಸಮಸ್ಯೆ, ಹೃದಯದ ಸಮಸ್ಯೆ, ದೇಹ ಹೆಚ್ಚು ಭಾರ ಇರುವವರಿಗೆ ಅಧಿಕ ರಕ್ತದೊತ್ತಡ, ತಲೆನೋವು –ಇವೇ ಮುಂತಾದ ಸಮಸ್ಯೆಗಳು ಎದುರಾಗಬಹುದು. ಆದ್ದರಿಂದಲೇ ಇಲ್ಲಿಗೆ ಹೋಗುವ ಮುಂಚಿತವಾಗಿ ದೇಹದ ತಪಾಸಣೆ ಅತ್ಯಗತ್ಯ. ಈ ದಾಮದೋದರ ಕುಂಡವು ಮತ್ಸಂಗ ಜಿಲ್ಲೆಯ ಮೇಲ್ಭಾಗದಲ್ಲಿದ್ದು– ನೇಪಾಳ ಸರಕಾರವು ಇದನ್ನು ನಿರ್ಬಂಧಿತ ಸ್ಥಳವನ್ನಾಗಿ ಪರಿಗಣಿಸಿದೆ. ಆದ್ದರಿಂದ ಇಲ್ಲಿಗೆ ತೆರಳಲು ಸರಕಾರಕ್ಕೆ ಶುಲ್ಕ ಪಾವತಿ ಮಾಡಿ, ಗುರುತು ಚೀಟಿಯೊಂದಿಗೆ ಅನುಮತಿ ಪತ್ರ ಪಡೆಯಬೇಕು. ಆದರೆ ಬಹಳಷ್ಟು ವರ್ಷಗಳ ಕಾಲ –ಅದೂ ಭಾರತ–ಚೀನಾ–ನೇಪಾಲ ರಾಷ್ಟ್ರಗಳು ಟಿಬೇಟಿನ ಮೇಲೆ ದಾಳಿ ಮಾಡುತ್ತಿದ್ದ ಕಾಲದಲ್ಲಿ ಹಣ ಪಾವತಿ ಮಾಡಿದರೂ ಅಥವಾ ಪ್ರೀತಿಯಿಂದ ಸಮಜಾಯಿಸಿದರೂ ಕಾಲ್ನಡಿಗೆ ಯಿಂದ ಕ್ರಮಿಸಲೂ ಅನುಮತಿ ದೊರಕುತ್ತಿರಲಿಲ್ಲ. ಈಗ ಕಾಡಿಬೇಡಿ, ಹಣ ಕೊಟ್ಟು ಅನುಮತಿ ಪಡೆಯಲು ಸಾಧ್ಯ. ಇದರ ಇ–ಮೇಲ್ ಮತ್ತು ನೀಲನಕಾಶೆಗಳು ಸಹ ಲಭ್ಯವಿರುತ್ತವೆ.

## ಮತ್ಸಂಗಕ್ಕೆ ಹೋಗುವ ದಾರಿ :

ಜೋಮ್ಸುಮ್‌ನಿಂದ ಲೇಮನ್‌ಟಂಗ್‌ನ ವರೆಗೆ ಅನುಕ್ರಮವಾಗಿ, ಜೋಮ್ಸುಮ್–ಕಾಂಗ್‌ಬೆಂಟ್, ಛೈ, ತಾಂಗ್‌ಬೇ, ಚುಸಂಗ್, ಚೇಲೇ, ಸಮಾರ್, ರಾನ್‌ಚುಂಗ್, ಚೋರ್‌ಟೇನ್‌ಗುಹೆ, ಶ್ಯಾಮ್ಮೋ ಚೈನ್,

ಗೇಲಿಂಗ್ ಘಾಮಿ, ಟ್ರಾಮರ್, ತ್ಸರಂಗ್, ಲೋಮಾನ್‌ತಂಗ್, ಚೋರ್ಸಂ, ಸುರ್ಕಾನ್, ಲೋರಿ, ದಾಮೋದರಕುಂಡ, ತೇತಂಗ್ಕಾ, ತೇತಂಗ, ಮುಕ್ತಿನಾಥ ಮತ್ತು ಕಾಂಗ್‌ಬೇನಿ.

ಇಲ್ಲಿಗೆ ಹೋಗಲು ಮಾರ್ಚ್-ಎಪ್ರಿಲ್‌ನ ಮಧ್ಯೆ, ಇನ್ನು ಹಲವರು ಆಕ್ಟೋಬರ್-ನವಂಬರ್‌ನ ಮಧ್ಯ ಭಾಗ ಪ್ರಶಸ್ತ ಸಮಯವು. ಜೋರಾಗಿ ಬೀಳುವಂತಹ ಮಳೆಯ ನೀರಿನಲ್ಲಿ ಹೊಸಹೊಸ ಶಾಲಗ್ರಾಮ ಶಿಲೆಗಳು ಹರಿದುಬರುತ್ತವೆ. ಭಗವಂತನು ನಮ್ಮ ಸನಿಹದಲ್ಲಿಯೇ ಇದ್ದು, ಅವನ ದರ್ಶನಕ್ಕಾಗಿ ಅವನ ಹತ್ತಿರದಿಂದಲೇ ಹೋಗಿಯೂ ನಮಗೆ ಅವನು ಕಾಣಸಿಗುವುದಿಲ್ಲ. ಆತನ ಕಣ್ಣಿನಲ್ಲಿ ಯೋಗಮಾಯೆಯು ಆವರಿಸಿಕೊಂಡಿರುತ್ತದೆ ಎನ್ನುವುದು ಅಕ್ಷರಶಃ ಸತ್ಯ.

ಭದ್ರತಾ ದೃಷ್ಟಿಯಿಂದ ಜೂನ್-ಜುಲೈ ತಿಂಗಳಿನಲ್ಲಿ ಈ ಯಾತ್ರೆಯನ್ನು ಕೈಬಿಡುವುದೇ ಲೇಸು. ಪೊಖರಾದಲ್ಲಿ ತುಂಬ ನೀರು ಹರಿಯುತ್ತದೆ. ಅಂದರೆ ದಪ್ಪನೆಯ ಹಿಮ ಕರಗಿ ಕೆಳಗೆ ಹರಿಯುತ್ತದೆ. ಈ ಕಾರಣದಿಂದಾಗಿ ಪ್ರತಿ ವರ್ಷವೂ ಅನೇಕ ಯಾತ್ರಾರ್ಥಿಗಳು ಮರಣವನ್ನಪ್ಪುತ್ತಾರೆ. ಭಾರತದಲ್ಲಿ ಬಿಸಿಲು ಇದ್ದು, ಅದು ನೇಪಾಳದಲ್ಲಿ ತಂಪಿರಬಹುದೆಂದೆಣಿಸಿ, ಪರ್ವತದ ನೀರು, ಮಳೆ, ಮಂಜುಗಡ್ಡೆ ಹಾಗೂ ಹಿಮಪಾತದ ಬಗ್ಗೆ ಸರಿಯಾದ ಮಾಹಿತಿ ಮತ್ತು ಮುಂಜಾಗರೂಕತೆಯ ಕ್ರಮ ಕೈಗೊಳ್ಳುವುದಿಲ್ಲ. ಇಲ್ಲಿ ಜೂನ್ ತಿಂಗಳಿನಿಂದ ಸೆಪ್ಟೆಂಬರ್ ಮಧ್ಯಭಾಗದವರೆಗೆ ಅಧಿಕ ಮಳೆಯಾಗುವುದು ಹಾಗೂ ಉಳಿದ ಎಂಟು ತಿಂಗಳಲ್ಲಿ ಶುಷ್ಕವಾದ ವಾತಾವರಣ ಇರುವುದು. ಪರ್ವತಪ್ರಾಂತದಲ್ಲಿ ದಶಂಬರದಿಂದ ಮಾರ್ಚ್ ತಿಂಗಳ ವರೆಗೆ ತುಂಬಾ ತಂಪಾದ ವಾತಾವರಣ ಇರುವುದು.

ಸಾಧಾರಣ ಮನುಷ್ಯರಿಗೆ ಈ ೮೦ ಕಿ.ಮೀ.ನ ದಾರಿಯನ್ನು ಕಂಡುಹಿಡಿಯಲು ಅಸಾಧ್ಯವಾದ ಕಾರಣ ದಪ್ಪವಾದ ಮಂಜುಗಡ್ಡೆಗಳು ಈ ದಾರಿಯನ್ನು ಆವರಿಸಿಕೊಂಡಿರುತ್ತವೆ. ಇದು 'ಯಾರಿಗೂ ಸೇರದ ಜಾಗ' ಅಂದರೆ ಮನುಷ್ಯರೇ ಇರದಂತಹ ಜಾಗ. ಅದೇ ತರಹ ಈ ಪ್ರಾಂತಕ್ಕೆ ಭೇಟಿ ನೀಡುವವರ ಸಂಖ್ಯೆಯೂ ಅತಿ ವಿರಳ. ಇದು ಒಂದು ಲೆಕ್ಕಾಚಾರದಲ್ಲಿ ಅತ್ಯುತ್ತಮ. ಪಟ್ಟಣದಿಂದ ರಜೆಯಲ್ಲಿ ಯಾತ್ರೆಗೆ ಹೊರಟಂತಹ ಯಾತ್ರಾರ್ಥಿಗಳು- ಅದರಲ್ಲೂ ಈ ತನಕ ಹಿಮವತ್‌ಪರ್ವತವನ್ನು ನೋಡದಿದ್ದವರು, ಪ್ರತಿದಿನ ಇಲ್ಲಿಗೆ ಬಂದು, ಬಲಾತ್ಕಾರವಾಗಿ ಈ ಪ್ರಾಂತವನ್ನು ಹಾಳು ಮಾಡುವ ಪ್ರಮೇಯವೇ ಇಲ್ಲ. ಆದ್ದರಿಂದಲೇ ಇಲ್ಲಿ ಮನಬಂದಂತೆ ಹೋಟೇಲು ಉದ್ಯಮವಾಗಲಿ, ಚಹಾ-ಕಾಫಿಯ ಅಂಗಡಿಯಾಗಲಿ ಇರುವುದಿಲ್ಲ. ಇದ್ದರೂ ತೀರ ವಿರಳ.

ಈ ಪ್ರಾಂತಕ್ಕೆ ಒಬ್ಬನಾಗಲಿ ಅಥವಾ ಸಣ್ಣಗುಂಪಿನಲ್ಲಾಗಲಿ ಹೋಗುವಂತಿಲ್ಲ. ಒಂದು ವೇಳೆ ಹೋದರೂ ನಾನು ಇಂತಿಷ್ಟು ದಿನಗಳವರೆಗೆ ಹೋಗುತ್ತಿದ್ದೇನೆ ಮತ್ತು ಇಷ್ಟು ದಿನಗಳ ಬಳಿಕ ವಾಪಸ್ಸಾಗುತ್ತಿದ್ದೇನೆ ಎಂದು ಹೇಳುವಂತಿಲ್ಲ. ಒಂದು ವೇಳೆ ನನಗೆ ಸಹಾಯ ಬೇಕು ಎಂದಾದಲ್ಲಿ ಯಾರಾದರೂ ಯಾತ್ರಿಯ ಸಹಾಯ ದಿಂದ ಸಂದೇಶ ರವಾನೆ ಮಾಡಬಹುದು. ದೊಡ್ಡ ಚೀಲದಲ್ಲಿ ತುಂಬಿಸಿಕೊಂಡು ಬರುವ ಶಾಲಗ್ರಾಮದ ಭಾರವು ನಮ್ಮನ್ನು ಕುಗ್ಗಿಸುತ್ತದೆ. ನಾವು ನಡೆಯುವ ಮೂರು ಪಟ್ಟಿಗಿಂತ ಇದರ ಭಾರವಿರುತ್ತದೆ. ಶಾಲ ಗ್ರಾಮವು ಕಾಂಗ್‌ಬೇನಿ ಮತ್ತು ಮರ್ಫಾಗಳ ಮಧ್ಯೆ ಹೇರಳವಾಗಿ ಗಂಡಕೀನದಿಬುಡದಲ್ಲಿ ಸಿಗುತ್ತದೆ. ಯಾಕ್ ಎಂಬ ಹಿಮಕುದುರೆಯು ಸಾಮಾನು ಸರಂಜಾಮುಗಳನ್ನೂ ಯಾತ್ರಿಕರನ್ನೂ ಕರೆದೊಯ್ಯುತ್ತದೆ. ಈ ಪ್ರಾಂತ್ಯಕ್ಕೆ ತೀರ ವಿರಳ ಸಂಖ್ಯೆಯಲ್ಲಿ ಯಾತ್ರಾರ್ಥಿಗಳು ಭೇಟಿ ನೀಡುವ ಕಾರಣ, ಇಲ್ಲಿ ಒಂದರ ಹಾಗೆ ಇನ್ನೊಂದು ಶಾಲಗ್ರಾಮವಿರದೇ ಅಪರೂಪದ, ಅಸ್ವಾಭಾವಿಕ, ಚೆನ್ನಾಗಿ ಮುದ್ರಿತಗೊಂಡ ಶಾಲಗ್ರಾಮಗಳು ಕೂಡಲೇ ಸಿಗುತ್ತವೆ. ಅದರಲ್ಲೂ ಚಿನ್ನದಂತೆ ಹೊಳೆಯುವ, ಚಿನ್ನದ ರೇಖೆಯಿರುವ ಶಾಲಗ್ರಾಮಗಳು ಸೂರ್ಯನ ಬೆಳಕಿಗೆ ಮಿರುಗುತ್ತಿರುತ್ತವೆ. ಅದ್ಭುತ ಹಾಗೂ ಅಪರೂಪದ ಶಾಲಗ್ರಾಮಗಳು ಯಾತ್ರಿಕರನ್ನು

ಅರ್ಧದಾರಿಯಲ್ಲಿಯೇ ನಿಲ್ಲಿಸಿ, ನನ್ನನ್ನು ನಿಮ್ಮೊಂದಿಗೆ ಕರೆದೊಯ್ಯಿರಿ ಎಂದು ಕೂಗಿ ಕರೆದಂತಾಗುತ್ತದೆ. ಇಲ್ಲಿಗೆ ಹೋಗುವವರಿಗೆ ತಂಪುಕನ್ನಡಕದ ಆವಶ್ಯಕತೆ ತುಂಬ ಇದೆ. ಹಿಮದ ಮೇಲೆ ಬಿದ್ದಂತಹ ಸೂರ್ಯಕಿರಣಗಳು ಪ್ರತಿಬಿಂಬಿಸಿದಾಗ ಕಣ್ಣಿನ ದೃಷ್ಟಿ ಹೋಗಿ ಅಂಧರಾಗಬಹುದು. ಜೋಮ್ಸಮ್ ಸಮುದ್ರಮಟ್ಟದಿಂದ ೨೭೦೦ ಮೀಟರ್ ಎತ್ತರದಲ್ಲಿದ್ದು, ಮೊದಲ ದಿನ ೩೬೦ ಅಡಿ ಎತ್ತರವಿರುವ ಕಾಂಗ್‌ಬೇನಿಯನ್ನು ತಲಪಬಹುದು.

ರಾಯಲ್ ನೇಪಾಳ ಏರ್‌ಲೈನ್ಸ್, ನಿಕೋನ್ ಏರ್, ಬುದ್ಧ ಏರ್, ಶಾಂಗ್ರಿಲಾ ಮತ್ತು ಕಾಸ್ಮಿಕ್ ಏರ್ ಇವೇ ಮೊದಲಾದ ವಿಮಾನಗಳು ನೇಪಾಳರಾಷ್ಟ್ರದ ವಿಮಾನ ಸಾರಿಗೆಗಳಾಗಿವೆ. ಇದರಲ್ಲಿ ಮೊದಲನೆಯದ್ದು ನೇಪಾಳ ಸರಕಾರವೇ ನಡೆಸುತ್ತಿದ್ದು ಉಳಿದವು ಖಾಸಗೀ ಸಂಸ್ಥೆಗಳಿಗೆ ಸೇರಿದವುಗಳಾಗಿವೆ. ಖಾಸಗಿ ವಿಮಾನಯಾನವು ಸರಕಾರದ ವಾಯುಯಾನ ಕ್ಕಿಂತ ಹೆಚ್ಚು ವಿಶ್ವಾಸಾರ್ಹವಾಗಿದೆ. ಪ್ರಯಾಣಿಕರ ಕೊರತೆ ಹಾಗೂ ವೈಪರೀತ್ಯ ತಾಪಮಾನಗಳಿಂದಾಗಿ ವಿಮಾನ ಸಾರಿಗೆ ಯಾನವು –ಇವುಗಳು ಸರಿಯಾಗುವರೆಗೆ ರದ್ದಾಗುವುದೇ ಜಾಸ್ತಿ ಎನ್ನಬಹುದು.

ಕಾಠ್ಮಾಂಡೊವಿನಿಂದ ಪೋಖರಾಗೆ ೧೦೦ ಮೈಲು ದೂರವಿದ್ದು ಅನ್ನಪೂರ್ಣ, ಧವಲಗಿರಿ ಮತ್ತು ಮತ್ಸಂಗ ಪರ್ವತಾರೋಹಣಕ್ಕೆ ಪ್ರಮುಖವಾದದ್ದು. ವಿಮಾನಯಾನ ಮಾಡುವಾಗ ಬಲಬದಿಯಲ್ಲಿ ಹಿಮಾಚ್ಛಾದಿತ ಹಿಮಾಲಯ ಪರ್ವತಶ್ರೇಣಿಯು ಚೀನಾ ಮತ್ತು ನೇಪಾಲದ ಮಧ್ಯೆ ಇರುವ ದೊಡ್ಡ ಗೋಡೆಯಂತೆ ಗೋಚರಿಸುವುದು. ಎಡಬದಿಯಲ್ಲಿ ಎತ್ತರದ ಪರ್ವತಶ್ರೇಣಿಗಳಿದ್ದು ಅವು ಹಿಮಾಚ್ಛಾದಿತ ವಾಗಿರುವುದಿಲ್ಲ. ಕೆಳಗೆ ಆಳವಾದ ಕಣಿವೆಯಿದ್ದು ನದಿಯು ಹರಿಯುತ್ತಿರುತ್ತದೆ. ಪೋಖರಾದಿಂದ ಜೋಮ್ಸಮ್‌ಗೆ ಬರಲು ವಿಮಾನಮಾರ್ಗದಲ್ಲಿ ೧೫ ನಿಮಿಷಗಳು ಸಾಕು. ಜೋಮ್ಸಮ್ ಸಮುದ್ರಮಟ್ಟದಿಂದ ಸುಮಾರು ೨,೭೨೦ ಮೀಟರ್ ಎತ್ತರದಲ್ಲಿದೆ. ಕಾಲೀಗಂಡಕೀ ಕಣಿವೆಯಿಂದ ಕಾಂಗ್‌ಬೇನಿ (೨೮೦೦ ಮೀ. ಎತ್ತರದಲ್ಲಿದೆ) ವರೆಗೆ ಕಾಲ್ನಡಿಗೆಯಿಂದ ಸಾಗಬಹುದು. ಕಾಂಗ್‌ಬೇನಿಯಲ್ಲಿ ಉತ್ತಮ ಬಾಡಿಗೆ ಕೋಣೆಗಳು ಕೈಗೆಟಕುವ ದರದಲ್ಲಿ (ರೂ.೧೦೦/-) ಸಿಗುತ್ತವೆ.

ಕಾಂಗ್‌ಬೇನಿಯಿಂದ ಮುಕ್ತಿನಾಥಕ್ಷೇತ್ರದವರೆಗೆ ಕಾಲ್ನಡಿಗೆಯಲ್ಲಿ ಪರ್ವತದ ಮಧ್ಯೆಯಿರುವ ಗಂಡಕೀ ಯಲ್ಲಿ ಸಾಗಬೇಕು. ನದಿಯ ದಾರಿಯಲ್ಲಿಯೇ ಸಾಗಿದರೆ ಅಮೂಲ್ಯ ಶಾಲಗ್ರಾಮಗಳೂ ಸಿಗಬಹುದು. ಏತನ್ಮಧ್ಯೆ ಈ ನದಿಬುಡದಲ್ಲಿ ವಿಶೇಷ ರೀತಿಯ ಶಾಲಗ್ರಾಮಗಳು ದೊರಕಿದರೂ, ಎಲ್ಲವನ್ನೂ ಕೊಂಡೊಯ್ಯುವುದು ಕಷ್ಟಕರ. ನೀಲಗಿರಿಪರ್ವತವು ಹಿಮಾಚ್ಛಾದಿತವಾಗಿ, ಬಹು ಸುಂದರವಾಗಿ ಕಂಡುಬರುವುದು. ಇಲ್ಲಿಂದ ಮೆಟ್ಟಲಿನ ದಾರಿಯೂ ಸಹ ಮುಕ್ತಿನಾಥಕ್ಕಿದೆ.

ಧವಲಗಿರಿ ಪರ್ವತ ಶಿಖರದ ಎತ್ತರ ೮೧೬೭ ಮೀಟರ್ ಹಾಗೂ ಅನ್ನಪೂರ್ಣಾಪರ್ವತಶ್ರೇಣಿಯು ೮೦೯೧ ಮೀಟರ್ ಎತ್ತರವಿದೆ.

ನೇಪಾಳಿ ಮತ್ತು ಭಾರತೀಯರಿಗೆ ಇಲ್ಲಿಯ ವಿಮಾನಯಾನದಲ್ಲಿ ಅರ್ಧದಷ್ಟು ರಿಯಾಯಿತಿ ಇರುವುದು. ವಿಮಾನವು ಜೋಮ್ಸಮ್‌ಗೆ ಹಾರುವಾಗ ಯಾವುದಾದರೊಂದು ಪರ್ವತಶ್ರೇಣಿಯ ಮಗ್ಗುಲಲ್ಲಿ (ಕಣಿವೆ ಯಲ್ಲಿ) ಹಾರುತ್ತದೆ. ಇದಕ್ಕೆ ಕಾರಣ ಅತಿಯಾದ ಬಿರುಸಾದ ಗಾಳಿ. ಕೆಲವೊಮ್ಮೆ ವಿಮಾನ ಅಪಘಾತಗಳಾಗಿ, ಅವಶೇಷಗಳೂ ಸಿಗದ ಪರಿಸ್ಥಿತಿ ಇದೆ. ಹಗಲು ಹೊತ್ತು ಬಿಸಿಲಿನಿಂದ ಕೂಡಿದ್ದು, ದಪ್ಪನೆಯ ಬಟ್ಟೆಯ ಆವಶ್ಯಕತೆ ಇರುವುದು. ವಿಭಿನ್ನ ಕಲ್ಲುಗಳಿಂದ ಕೂಡಿರುವ ನದೀತೀರದಲ್ಲಿ ಮುಂದೆಮುಂದೆ ಸಾಗುವಾಗ ಬಲವಾದ ಗಾಳಿಯೂ ಸಹ ಬೀಸುತ್ತದೆ. ಸೂರ್ಯಾಸ್ತದ ಬಳಿಕ ಹಿಮ ಗಾಳಿಯು ಆರಂಭವಾಗುತ್ತದೆ.

ಮುಕ್ತಿನಾಥಕ್ಷೇತ್ರವು ಶ್ರೀರಾಮಾನುಜಾಚಾರ್ಯರಿಂದ ಸ್ಥಾಪಿಸಲ್ಪಟ್ಟಿದ್ದು, ಇಲ್ಲಿ ಲಕ್ಷ್ಮೀನಾರಾಯಣ ದೇಗುಲವಿದೆ. ಇದುವೇ ಈ ದೊಡ್ಡ ಹಿಮಾಲಯ ಪರ್ವತಶ್ರೇಣಿಯ ತಳಹದಿ/ತಪ್ಪಲು. ಇಲ್ಲಿಂದ ಮುಂದೆ

ಪರ್ವತ ಹತ್ತುವುದು ಬಹಳ ಕ್ಲಿಷ್ಟಕರ. ಕಾರಣ, ಆಮ್ಲಜನಕ ಬಹಳಷ್ಟು ಕಡಿಮೆ ಇರುವುದು. ಪ್ರತಿಯೊಂದು ಮೆಟ್ಟಲನ್ನು ಹತ್ತಲು ಮಗದೊಂದು ಉಸಿರಾಟ ಅತ್ಯಗತ್ಯ. ಮೇಲೆ ಮೇಲೆ ಏರಿದ ಹಾಗೆ ಗಾಳಿಯ ಸಾಂದ್ರತೆಯು ಕಡಿಮೆ ಕಡಿಮೆ ಆಗುತ್ತಾಬರುತ್ತದೆ. ಮೇಲೆ ತಲುಪಲು ಕೆಲವರಿಗೆ ೩ ಗಂಟೆಗಳು ಬೇಕಾದರೆ ಇನ್ನು ಕೆಲವರಿಗೆ ೬ ಗಂಟೆಗಳು ಬೇಕಾಗುತ್ತವೆ. ಕಾಂಗ್‌ಬೇನಿಯಿಂದ ಉತ್ತರಕ್ಕೆ ನದಿಯ ಬುಡ/ಪಕ್ಕದಲ್ಲಿಯೇ ಸಾಗಿದರೆ ಹೇರಳ ಶಾಲಗ್ರಾಮಶಿಲೆಗಳು ದೊರಕುತ್ತವೆ. ಮುಕ್ತಿನಾಥ ದೇವಾಲಯದಲ್ಲಿ ನೀರಿನ ೧೦೮ ಕಾರಂಜಿಗಳಿವೆ. ಇವು ಹಿಮ ಕರಗಿ ಬಂದ ನೀರಿನ ಕಾರಂಜಿಗಳು. ಈ ೧೦೮ ಜಲಧಾರೆಗಳಲ್ಲಿ ಪವಿತ್ರಸ್ನಾನ ಮಾಡಬಹುದು ಅಥವಾ ನೀರಿನ ಪ್ರೋಕ್ಷಣೆ ಮಾದಿಕೊಳ್ಳಬಹುದು. ಆಯ್ಕೆ ಮಾಡಿದ ಶಾಲಗ್ರಾಮಗಳನ್ನು ಇದರಲ್ಲಿ ಸ್ನಾನ ಮಾಡಿಸಿದರೆ ಹೆಚ್ಚು ವಿಶೇಷ. ಬದರೀನಾಥನೇ ಮುಕ್ತಿನಾಥನನ್ನು ಇಲ್ಲಿಗೆ ಕಳುಹಿಸಿದನೆಂಬ ಪ್ರತೀತಿಯೂ ಇದೆ. ಇಲ್ಲಿಯ ಪವಿತ್ರ ಧಾರೆಯಲ್ಲಿ ಸ್ನಾನ ಮಾಡಿದಾಗ ಎಲ್ಲ ಕಷ್ಟಗಳೂ ಕ್ಷಣಮಾತ್ರದಲ್ಲಿ ಪರಿಹಾರಗೊಳ್ಳುವುದು ಎಂಬ ನಂಬಿಕೆಯಿದೆ.

ನಗುಮೊಗದ ಮುಕ್ತಿನಾಥದೇವರ ವಿಗ್ರಹವು ಹಿತ್ತಾಳೆಲೋಹದಿಂದ ಮಾಡಲ್ಪಟ್ಟಿದೆ. ದೇವರ ಬಲಬದಿ ಯಲ್ಲಿ ಶ್ರೀದೇವಿಯಿದ್ದು ಎಡಬದಿಯಲ್ಲಿ ಭೂದೇವಿ ವಿಗ್ರಹವಿದೆ. ಕಾಂಗ್‌ಬೇನಿಯಿಂದ ಇಲ್ಲಿಗೆ ಬರಲು ೬ ಗಂಟೆ ತಗಲುವುದು.

ಗಂಡಕೀನದಿಬುಡದಲ್ಲಿ ಎಣಿಸಲಾಗದ, ವಿಭಿನ್ನ ಗಾತ್ರಗಳ, ಕಂದು, ಬಿಳಿ, ಕಡು ಬೂದುಬಣ್ಣದ ಹಾಗೂ ಶಾಲಗ್ರಾಮಶಿಲೆಗಳು ಕಂಡುಬರುತ್ತವೆ. ಶಾಲಗ್ರಾಮಶಿಲೆಯು ಮಸಿಯಂತೆ ಕಡು ಕಪ್ಪುಬಣ್ಣದಿಂದ ಕೂಡಿರು ತ್ತದೆ. ಜನರು ಅದರಲ್ಲಿರುವ ಚಿನ್ನಕ್ಕಾಗಿ, ಅವುಗಳನ್ನು ಒಡೆದು ಬಿಸಾಡುವುದು ನೋಡುವವರ ಕಣ್ಣಿಗೆ ರಾಚುತ್ತದೆ. ಗಂಡಕಿಯಲ್ಲಿ ದೊರಕುವ ಶಾಲಗ್ರಾಮ ಶಿಲೆಗಳು ಬೇರೆ ಶಿಲೆಗಳಿಗಿಂತ ವಿಭಿನ್ನವಾಗಿರುವುದು ಮತ್ತು ಅವುಗಳ ಗುರುತಿಸುವಿಕೆ ಬಹಳ ಕಷ್ಟಕರ. ಸಾಧಾರಣ ಶಿಲೆಗಳನ್ನು ಅಲ್ಲಿಯೇ ಎಸೆಯುತ್ತಾರೆ. ಆದರೆ ವಿಶೇಷವಾದ ಶಾಲಗ್ರಾಮ ಗುರುತಿಸಿದವನು ನಿಜವಾಗಿಯೂ ಭಾಗ್ಯಶಾಲಿಯೇ. ಹಾಗೆಯೇ ಇವುಗಳನ್ನು ಜಾಗ್ರತೆ ವಹಿಸಿ ತರಬೇಕಾಗುತ್ತದೆ. ಮುಕ್ತಿನಾಥದಿಂದ ಕಾಂಗ್ ಬೇನಿಗೆ ಎರಡೂವರೆಯಿಂದ ನಾಲ್ಕು ಗಂಟೆಯ ದಾರಿ; ಅಲ್ಲಿಂದ ಜೋಮ್ಸಮ್‌ಗೆ ಎರಡೂವರೆಯಿಂದ ಎಂಟು ಗಂಟೆ ತಗಲುತ್ತದೆ. ಈ ಮಾರ್ಗವಾಗಿ ಕಾಟ್ಮಂಡೋಗೆ ಬರಬೇಕು. ಶಾಲಗ್ರಾಮ ಶಿಲೆಯು ತುಂಬ ಭಾರವಿರುವುದರಿಂದ ಹೆಚ್ಚು ಶಿಲೆಗಳನ್ನು ತೆಗೆದು ಕೊಂಡು ಬರುವುದು ಕಷ್ಟಕರ. ಅಲ್ಲದೆ, ೧೫ ಕಿಲೋಗ್ರಾಂಗಿಂತ ಜಾಸ್ತಿ ಭಾರದ ಶಾಲಗ್ರಾಮಗಳನ್ನು ಕೊಂಡೊಯ್ಯುವಂತಿಲ್ಲ. ಅಂದರೆ, ಬ್ಯಾಗಿನ ಭಾರ/ತೂಕ ೧೫ ಕೆ.ಜಿ.ಯೊಳಗೆ ಮಾತ್ರ ಇರಬೇಕು. ಇದನ್ನು ನೇಪಾಲಿ ಸೈನಿಕರು/ಪೊಲೀಸರು ವಿಮಾನ ನಿಲ್ದಾಣದಲ್ಲಿ ತಪಾಸಣೆ ಮಾಡುತ್ತಾರೆ.

ಇಲ್ಲಿಯ ವಿಮಾನಯಾನವು ಅನಿಶ್ಚಿತ ಹಾಗೂ ಅನಿಯಮಿತ. ಇದು ಇಲ್ಲಿಯ ಹವಾಮಾನವನ್ನು ಹಾಗೂ ಯಾತ್ರಿಕರನ್ನು ಹೊಂದಿಕೊಂಡಿರುತ್ತದೆ. ಒಬ್ಬನು ಇಂತಿಷ್ಟೇ ದಿನಗಳಲ್ಲಿ ವಾಪಾಸಾಗಬೇಕೆಂದು ಎಣಿಸಿ ಯಾತ್ರೆ ಮಾಡುವಂತಿಲ್ಲ. ಕಾಂಗ್‌ಬೇನಿಯಿಂದ ಜೋಮ್ಸಮ್‌ಗೆ ಕಾಲ್ನಡಿಗೆಯಲ್ಲಿ ಎರಡು-ಮೂರು ದಿನ ತಗಲುತ್ತದೆ. ಅಥವಾ ವಿಮಾನ ಯಾನ ಇಲ್ಲವೇ ಕುದುರೆಸವಾರಿಯ ಮೂಲಕವೂ ಕ್ರಮಿಸಬಹುದಾಗಿದೆ. ಪಾಶ್ಚಾತ್ಯರು ಗಾಯತ್ರೀಮಂತ್ರದ ಪ್ರಾರ್ಥನೆ ಯನ್ನು ಧ್ಯಾನಶ್ಲೋಕವಾಗಿ ಹೇಳಿ, ಶಾಲಗ್ರಾಮಶಿಲೆಯನ್ನು ಹುಡುಕುವ ಕ್ರಮವನ್ನು ಈ ಕಾಲೀಗಂಡಕೀಯಾತ್ರೆಯಲ್ಲಿ ಇಟ್ಟುಕೊಂಡಿರುತ್ತಾರೆ. ಏನಾಶ್ಚರ್ಯ!! ಕಾಳೀ ನದಿಯು ಮಧ್ಯ ಭಾಗದಲ್ಲಿ ಹರಿಯುವುದರಿಂದ, ನದೀತೀರದಲ್ಲಿ ಹುದುಗಿರುವ ಶಾಲಗ್ರಾಮಶಿಲೆಗಳನ್ನೂ ತಡಕಿ ಹುಡುಕುವುದು ಸುಲಭ. ಯಾತ್ರಿಗಳು ಹಿಂದೆ ಬರುವಾಗ ಮುಂದೆ ಸಾಗುವ ಯಾತ್ರಿಗಳಿಗೆ ಅನನ್ಯ ಶಾಲಗ್ರಾಮಗಳನ್ನೂ ದಾನ ಮಾಡುತ್ತಾರಂತೆ.

# IV

## 1. ಶಾಲಗ್ರಾಮಶಿಲೆಗಳ ಬಗೆಗೆ ವಿಶೇಷ ಮಾಹಿತಿ

ಹಿಮಾಲಯ ಪರ್ವತದ, ಗಂಡಕೀನದಿಯಿಂದ ಆರಿಸಿತಂದಂತಹ ಶಾಲಗ್ರಾಮಶಿಲೆಗಳನ್ನು ಮಾತ್ರ ಪೂಜಿಸುತ್ತಾರೆ. ಪುರಾಣಗಳಲ್ಲಿ ಮಹಾತ್ಮರು ತಿಳಿಸಿರುವ ಪ್ರಕಾರ, ಶಾಲಗ್ರಾಮಶಿಲೆಯು ಗಂಡಕೀನದಿಯಲ್ಲಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಹೇರಳವಾಗಿ ಸಿಗುವಂತಹ ಶ್ರೇಷ್ಠ ಹಾಗೂ ಪವಿತ್ರವಾದ ಶಿಲೆ. ಈ ಸ್ಥಳವು ಒಂದು ಕಾಲದಲ್ಲಿ ಹಳ್ಳಿಯಾಗಿದ್ದು, ಶಾಲ ಎಂಬ ಒಂದು ಜಾತಿಯ ಮರಗಳಿಂದ ಕೂಡಿತ್ತು. ಕನ್ನಡದಲ್ಲಿ 'ಶಾಲ' ಮರಕ್ಕೆ ಛತ್ರೀಮರ/ಅಚ್ಚುಮರ ಎನ್ನುತ್ತಾರೆ. ಇದನ್ನು ಸಸ್ಯಶಾಸ್ತ್ರೀಯವಾಗಿ Shorea robusta, sukhua ಎಂದು ಕರೆಯುತ್ತಾರೆ. ಈ ಬಗೆಯ ವೃಕ್ಷಗಳು ಗುಂಪುಗುಂಪಾಗಿ ಬೆಳೆದು (ಇದನ್ನು ಗ್ರಾಮ ಎನ್ನುತ್ತಾರೆ) ಆ ಸಮೀಪದ ಊರೇ ಶಾಲಗ್ರಾಮ ಎಂದಾಯಿತು. ಈ ಜಾತಿಯ ಮರಗಳು ಹಿಮಾಲಯದ ತಪ್ಪಲಲ್ಲಿ ಬೆಳೆಯುತ್ತವೆ. ಇದನ್ನು ಇಂದಿಗೂ ಅಸ್ಸಾಂ ರಾಜ್ಯದ ಕಾಂಗ್ರಾ ಕಣಿವೆಯಲ್ಲಿ ಕಾಣಬಹುದು.

ಇನ್ನೊಂದು ಅರ್ಥದ ಪ್ರಕಾರ ಹೇಳುವುದಾದರೆ 'ಶಾಲಿ' ಎಂದರೆ ಭಗವಂತ, ಗ್ರಾಮ ಎಂದರೆ ಗುಂಪು, ಒಟ್ಟಾಗಿ ಇರುವಿಕೆ. ಆದುದರಿಂದ ಶಾಲಿಗ್ರಾಮ ಎಂದರೆ ಎಲ್ಲ ದೇವರುಗಳೂ ಒಂದೇ ಕಡೆ ಇರುವುದು. ಸರ್ವದೇವರ ಸಾನ್ನಿಧ್ಯ ವಿರುವಿಕೆ.

ಉತ್ತರ ಭಾರತದಲ್ಲಿ ಇದನ್ನು 'ಶಾಲಗ್ರಾಮ' ಎಂದೂ ದಕ್ಷಿಣ ಭಾರತದಲ್ಲಿ ಸಾಲಿಗ್ರಾಮ ಎಂದೂ ಜನರು ಕರೆಯುತ್ತಾರೆ. ಆದರೆ ಪುರಾಣಗಳ ಪ್ರಕಾರ ಇದು ಶಾಲಗ್ರಾಮವೇ ಆಗಿರುತ್ತದೆ. ವಾರಾಹಪುರಾಣವು ಗಂಡಕೀನದಿಯ ತೀರದಲ್ಲಿದ್ದ ಈ ಗ್ರಾಮಕ್ಕೆ ಹೇಗೆ ಶಾಲಗ್ರಾಮ ಎಂಬ ಹೆಸರು ಬಂತು ಎಂಬುದನ್ನು ಉಲ್ಲೇಖಿಸಿದೆ. ವಿಶ್ವಾಮಿತ್ರಋಷಿಯ ಮಗನಾದ ಶಾಲಂಕಾಯನಋಷಿಯು ಬಹಳ ಹೆಸರುವಾಸಿಯಾಗಿದ್ದನು. ಅವನು ಭಗವಾನ್ ವಿಷ್ಣುವಿನಿಂದ ಜ್ಞಾನಸಿದ್ಧಿಗಾಗಿ ಘೋರವಾದ ತಪಸ್ಸನ್ನು ಆಚರಿಸಲು ಈ ಸ್ಥಳವನ್ನು ಆರಿಸಿದನು. ಅದುವೇ ಗಂಡಕೀನದಿಯ ಸ್ಥಳ. ಈ ಜಾಗದಲ್ಲಿ ದೊಡ್ಡದಾಗಿ, ವಿಶಾಲವಾಗಿ, ತುಂಡಾಗದೇ ಹಸಿರಾಗಿ ಹರಡಿದ್ದ ಒಂದು ಶಾಲವೃಕ್ಷವಿತ್ತು. ಇದರ ಬುಡದಿಂದ ಹಿಮವತ್ಪರ್ವತವು ಸುಂದರವಾಗಿ ತೋರು ತ್ತಿತ್ತು. ವಿಷ್ಣುವಿನ ಸಾಕ್ಷಾತ್ಕಾರಕ್ಕಾಗಿ ತದೇಕಚಿತ್ತದಿಂದ ಕಟುವಾದ ಬೇಸಿಗೆಯ ಬೇಗೆಯಲ್ಲೂ ಸೂರ್ಯನ ಕೆಳಗೆ ಕಠಿನವಾಗಿ ತಪಸ್ಸನ್ನು ಆಚರಿಸುತ್ತಿದ್ದ ಋಷಿಯು, ಬಳಿಕ ಬಳಲಿ, ನೆರಳಿಗಾಗಿ ಈ ಮರದ ನೆರಳನ್ನು ಆಶ್ರಯಿಸಿದ. ಮರದ ಕೆಳಗೆ ಪೂರ್ವಾಭಿಮುಖವಾಗಿ ಕುಳಿತು ತನ್ನ ಮುಖವನ್ನು ಪಶ್ಚಿಮಾಭಿಮುಖವಾಗಿ ತಿರುಗಿಸಿ ತಪಸ್ಸನ್ನು ಮಾಡುತ್ತಿರಲು ಈ ಶಾಲಮರವು ನೆರಳನ್ನೀಯಿತು. ಋಷಿಯನ್ನು ಹರಸಲು ವಿಷ್ಣುವು ಪೂರ್ವದಿಕ್ಕಿನಲ್ಲಿ ಗೋಚರಿಸಲು, ಪಶ್ಚಿಮಾಭಿಮುಖನಾಗಿ ತಪಸ್ಸನ್ನಾಚರಿಸುತ್ತಿದ್ದ ಋಷಿಗೆ ಇದು ಕಾಣಲಿಲ್ಲ. ಋಷಿಯು ವಿಷ್ಣುವಿನ ಸಾಕ್ಷಾತ್ಕಾರಕ್ಕಾಗಿ ಕಠಿನ ತಪಸ್ಸನ್ನಾಚರಿಸಿದುದು ವೈಶಾಖದ ೧೨ನೆಯ ದಿನವಾಗಿತ್ತು. ಭಗವಂತನ ಸಾಕ್ಷಾತ್ಕಾರಕ್ಕಾಗಿ ಹಾತೊರೆಯುತ್ತಾ, ಸಂತೋಷದಿಂದ ವೇದಮಂತ್ರಗಳಿಂದ ವಿಷ್ಣುವನ್ನು ಸ್ತುತಿಸತೊಡಗಿದನು. ಪ್ರಸನ್ನಗೊಂಡಂತಹ ವಿಷ್ಣುವು ಪ್ರತ್ಯಕ್ಷನಾಗಿ, ಬೇಕಾದ ವರವನ್ನು ಕೇಳು, ಅನುಗ್ರಹಿಸು ತ್ತೇನೆ ಎಂದಾಗ ಋಷಿಯು "ಭಗವಂತ, ನಾನು ನಿನ್ನ ಬೇರೆಬೇರೆ ರೂಪಗಳನ್ನು ತಿಳಿಯುವುದಕ್ಕೋಸ್ಕರ ನನ್ನನ್ನು ನಾನೇ ದಂಡಿಸಿ ತಪಸ್ಸನ್ನಾಚರಿಸಿದೆ. ಅದನ್ನು ನಾನೀಗ ತಿಳಿದುಕೊಂಡಿದ್ದೇನೆ. ಆದುದರಿಂದ ನನಗೆ ಬೇರಾವ ವರದ ಆವಶ್ಯಕತೆ ಇರುವುದಿಲ್ಲ" ಎಂದನು. ವಿಷ್ಣುಪರಮಾತ್ಮನು ಆ ಋಷಿಯನ್ನು ಕುರಿತು– "ಭಕ್ತ, ನೀನು ಆಶ್ರಯಿಸಿದ ನಿನಗೆ ನೆರಳಾಗಿ, ನೀನು ತಪಸ್ಸು ಮಾಡುವಂತೆ ಉತ್ತೇಜಿಸಿದ, ನಿನಗೆ ನೆರಳು ನೀಡಿದಂತಹ

ಈ ಶಾಲವೃಕ್ಷದ ನೆರಳೂ ನನ್ನದೇ ಆದ ರೂಪ. ಅದರೊಳಗೆ ನಾನಿದ್ದು ನಿನಗೆ ನೆರಳಾದೆ. ನಿನ್ನೆದುರು ಇರುವಂತಹ, ಅದ್ಭುತವಾದ ಈ ಪರ್ವತರೂಪವು ಸಹ ನನ್ನದೇ" ಎಂದು ಹೇಳಿ ಅದೃಶ್ಯನಾದನು. ಋಷಿಯು ಆ ಶಾಲವೃಕ್ಷಕ್ಕೆ ಭಕ್ತಿಯಿಂದ ಪ್ರದಕ್ಷಿಣೆ ಹಾಕಿ ತನ್ನ ಗುಡಿಸಲಿನೊಳಗೆ ಬಂದು ತದೇಕಚಿತ್ತದಿಂದ ಪರ್ವತದತ್ತ ದೃಷ್ಟಿ ಹಾಯಿಸಿದ. ಅಂದಿನಿಂದ ಆ ಗ್ರಾಮವು ಅತ್ಯಂತ ಪವಿತ್ರಗ್ರಾಮ ಎಂದೆನಿಸಿತು ಹಾಗೂ ಅದುವೇ ಶಾಲಗ್ರಾಮತೀರ್ಥವಾಯಿತು. ಋಷಿಯು ನೋಡಿದ ಪರ್ವತವೇ ಶಾಲಗ್ರಾಮಗಿರಿಯಾಯಿತು. ವಿಷ್ಣುಪುರಾಣದಲ್ಲಿ ಸಹ ಈ ಪರ್ವತ ಹಾಗೂ ನದಿಯ ಬಗ್ಗೆ ಹೇಳುತ್ತದೆ. ಈ ಪವಿತ್ರವಾದ ನದಿಯಲ್ಲಿ ದೊರೆಯುವಂತಹ ಶಿಲೆಗಳು ಈ ನದಿಯ ದಡದ ಪರ್ವತಗಳಿಂದ ತೆಗೆಯಲ್ಪಟ್ಟವುಗಳಲ್ಲ. **ವಾರಾಹಪುರಾಣ** ಇದನ್ನು ಸ್ಪಷ್ಟವಾಗಿ ಹೇಳಿದೆ.

ಈ ಗಂಡಕೀ ನದಿಯಲ್ಲಿ 'ಚಕ್ರತೀರ್ಥ' ಎಂಬ ನಿರ್ದಿಷ್ಟ ಸ್ಥಳದಲ್ಲಿ ಈ ಪವಿತ್ರವಾದ ಶಿಲೆಯು ಲಭಿಸುತ್ತದೆ. **'ಚಕ್ರತೀರ್ಥ ಅವಚ್ಛಿನ್ನಾ ಗಂಡಕೀ ನದ್ಯುತ್ಪಾದನಾ ಶಿಲಾಸು ಶಾಲಗ್ರಾಮಪದವಾಚ್ಯಾಃ'.** ಈ ಪವಿತ್ರವಾದ ಸ್ಥಳವು ಮೂರು ಯೋಜನ ದೂರದಷ್ಟಿದೆ. ಅಂದರೆ, ಸುಮಾರು ೨೪ ಮೈಲುಗಳು. ನದಿಯ ನೀರು ತನ್ನನ್ನು ತಾನೇ ಸುತ್ತು ಹಾಕಿ ಹರಿಯುತ್ತದೆ. ಆದಕ್ಕಾಗಿಯೇ ಇದನ್ನು 'ಚಕ್ರತೀರ್ಥ' ಎಂದು ಕರೆಯುತ್ತಾರೆ.

ಇಲ್ಲಿಯೇ ಮತ್ತೊಂದು 'ಚಕ್ರಾನದಿ'(ಈಗಿನ ಹೆಸರು ಕಾಂಗ್‌ಬೇನಿ)ಯು ಗಂಡಕೀನದಿಯತ್ತ ಹರಿದು ಮುಂದೆ ಗಂಡಕಿಯನ್ನು ಸೇರಿಕೊಳ್ಳುತ್ತದೆ. **ಗರುಡಪುರಾಣ**ದಲ್ಲಿ ಈ ನದಿಯು ಬ್ರಹ್ಮನಿಂದ ಸೃಷ್ಟಿಯಾಯಿತು ಎಂದು ಉಲ್ಲೇಖಿಸ ಲಾಗಿದೆ. ಈ ನದಿಯ ಉತ್ತರಕ್ಕಿರುವ ಪರ್ವತಶಿಖರದಲ್ಲಿ ವಿಷ್ಣುವಿನ ಸಾನ್ನಿಧ್ಯವಿದೆ ಎನ್ನಲಾಗಿದೆ. ಈ ಪರ್ವತದಲ್ಲಿ ಹಾಗೂ ನದಿಯಲ್ಲಿ ದೊರಕುವ ಎಲ್ಲ ಶಿಲೆಗಳಲ್ಲಿ ಸಾಕ್ಷಾತ್ ವಿಷ್ಣುವಿನ ಚಿಹ್ನೆ ಇರುತ್ತದೆ ಎಂದು ಭಾವಿಸಲಾಗುತ್ತದೆ. ಪುರಾಣಗಳ ಲೆಕ್ಕಾಚಾರ ಪ್ರಕಾರ, ಈ ಎಲ್ಲಾ ಪ್ರದೇಶವನ್ನು, ಅಂದರೆ, ಮುಕ್ತಿನಾಥಕ್ಷೇತ್ರದ ಉತ್ತರಭಾಗದ ನದಿ ಹಾಗೂ ಪರ್ವತಭಾಗ ಗಳ ಸುಮಾರು ೧೨ ಯೋಜನ (೯೬ ಮೈಲುಗಳಷ್ಟು) ದೂರವನ್ನು ಪವಿತ್ರಸ್ಥಳ ಎನ್ನಲಾಗಿದೆ. **ವಾರಾಹಪುರಾಣ**ದ ಪ್ರಕಾರ, ಇಲ್ಲಿ ದೊರಕುವಂತಹ ಶಾಲಗ್ರಾಮಗಳು ಕೆಲವು ಜಲಜ (ನೀರಿನಲ್ಲಿ ದೊರಕುವಂತಹವು) ಇನ್ನು ಕೆಲವು ಸ್ಥಲಜ (ಪರ್ವತದ ಬಳಿ ಸಿಕ್ಕುವಂತಹವು).

# 2. ಶಾಲಗ್ರಾಮಗಳ ಮಾಹಿತಿ ಬಗ್ಗೆ ಇರುವಂತಹ ಗ್ರಂಥಗಳು, ಪುರಾಣಗಳು ಮತ್ತು ಮೂಢನಂಬಿಕೆಗಳು ಹಾಗೂ ಪಾಲಿಸಬೇಕಾದ ಕಡ್ಡಾಯ ಕ್ರಮಗಳು :

ಎಲ್ಲಾ ಶಾಲಗ್ರಾಮಶಿಲೆಗಳು ವಿಷ್ಣುವಿನ ಬೇರೆಬೇರೆ ಅವತಾರಗಳಾದರೂ ಅವುಗಳೆಲ್ಲವೂ ಆಕರ್ಷಕ ವಾಗಿದ್ದರೂ ಅವುಗಳನ್ನು ವಿಸ್ತಾರವಾಗಿ ಅವುಗಳ ಆಕಾರಪ್ರಕಾರ ಗುರುತಿಸುವಿಕೆಯ ಪ್ರಯತ್ನಗಳು ನಡೆದಿವೆ. ಈ ಶಾಲಗ್ರಾಮಶಿಲೆಗಳು ಸ್ವಾಭಾವಿಕವಾಗಿ ವಿಷ್ಣುವಿನೊಂದಿಗೆ ಸಂಬಂಧ ಹೊಂದಿದ್ದು ಇವುಗಳು ವಿಷ್ಣುವಿನ ಪ್ರತೀಕ ಎಂದೇ ತಿಳಿಯಲಾಗಿದೆ. ಅದರಲ್ಲೂ ಇನ್ನು ಕೆಲವು ಶಾಲಗ್ರಾಮಗಳು ಶಿವನ ಪ್ರತೀಕವಾದಂತೆ, ಇನ್ನು ಕೆಲವು ದೇವಿಯ ಅಥವಾ ಲಕ್ಷ್ಮಿಯ ಪ್ರತೀಕದಂತೆ, ಸೂರ್ಯನ ಪ್ರತೀಕದಂತೆ, ಗಣಪತಿಯ ಪ್ರತೀಕದಂತೆ ಕಾಣಿಸುತ್ತವೆ. ಈ ಶಾಲಗ್ರಾಮವು ಐದು ದೇವರುಗಳನ್ನು ಹೊಂದಿ, ಅದರ ಪ್ರತೀಕವಾಗಿರುವುದರಿಂದಲೇ ಪಂಚಾಯತನ ಪೂಜೆ ನಡೆಸುವಂತಾಯಿತು.

## ಬ್ರಹ್ಮಾಂಡಪುರಾಣದ ಪ್ರಕಾರ :

ಯಾವನು ಶಾಲಗ್ರಾಮವನ್ನು ಪೂಜಿಸುತ್ತಾನೋ –ಅವನು ಮಾಡುವ ಪೂಜೆಯ ಸಾರ್ಥಕತೆಗಾಗಿ– ಅವನು ಆರಾಧಿಸುವಂತಹ ಶಾಲಗ್ರಾಮದ ಮಾಹಿತಿಯನ್ನು ಹೊಂದಿರಬೇಕು.

ಬ್ರಹ್ಮವೈವರ್ತಪುರಾಣ, ಅಗ್ನಿ, ಪದ್ಮ, ಗರುಡ, ನೃಸಿಂಹ, ಸ್ಕಂದ, ಬ್ರಹ್ಮ ಮತ್ತು ಬ್ರಹ್ಮಾಂಡಪುರಾಣ ಗಳಲ್ಲಿ ಶಾಲ ಗ್ರಾಮದ ಬಗ್ಗೆ ವಿವರಗಳಲ್ಲದೇ ಶಾಲಗ್ರಾಮದ ಮಹಾತ್ಮೆಯನ್ನು ಗೌತಮೀಯ ತಂತ್ರ, ಪದ್ಮಪುರಾಣದ ಮಾಘ ಮಾಹಾತ್ಮ್ಯೆಯಲ್ಲಿ ಶಾಲಗ್ರಾಮಪರೀಕ್ಷೆ ಎಂಬುದನ್ನು ಪೂಜಾಪ್ರಯೋಗ, ಗೋಪಾಲ ಭಟ್ಟರ ಹರಿಭಕ್ತಿವಿಲಾಸದಲ್ಲಿ, ಶಾಲಗ್ರಾಮಾರ್ಚನಚಂದ್ರಿಕಾ, ಪೂಜಾಪಂಕಜಭಾಸ್ಕರ, ಸೋಮನಾಥ ವ್ಯಾಸರ ಶಾಲಗ್ರಾಮಮೀಮಾಂಸ, ಶಾಲಗ್ರಾಮಲಕ್ಷಣಪಂಚಿಕಾ, ಅನೂಪಸಿಂಹನ ಶಾಲಗ್ರಾಮಪರೀಕ್ಷಾ, ಶಾಲಗ್ರಾಮ ಮೂಲಲಕ್ಷಣಪದ್ಧತಿ, ಶಾಲಗ್ರಾಮಶಿಲಾಪರೀಕ್ಷಣ ಪದ್ಧತಿ ಮತ್ತು ಸಂಪೂರ್ಣ ವೈಷ್ಣವೈಧಿಪಾಠದ ಶ್ರೀತತ್ವನಿಧಿ – ಮೈಸೂರಿನ ೩ನೆಯ ಕೃಷ್ಣರಾಜ ಒಡೆಯರು –ಇವರೇ ಮೊದಲಾದವರು ಪ್ರಯತ್ನ ಮಾಡಿರುತ್ತಾರೆ.

ಈ ಎಲ್ಲ ಗ್ರಂಥಗಳು ವಿಷ್ಣುವಿನ ಪ್ರತೀಕವಾಗಿರುವ ಒಂದೊಂದು ಶಾಲಗ್ರಾಮಗಳ ಮೂರ್ತಿಲಕ್ಷಣ ವನ್ನು ನೀಡುತ್ತವೆ. ಈ ಎಲ್ಲಾ ಲಕ್ಷಣ, ಗುಣವಿಶ್ಲೇಷಣ, ವಿಶೇಷಣಗಳು ಪುರಾಣಗಳಲ್ಲಿ ವಿವರಿಸಿರುವಂತೆ, ಆ ಆಧಾರದ ಮೇಲೇ ಗುರುತಿಸಲಾಗಿದೆ ಹಾಗೂ ಇವು ಪುರಾಣಗಳ ಉಲ್ಲೇಖವನ್ನೂ ನೀಡುತ್ತವೆ. ಅನಂತರದ ಕೆಲಸಗಳು ಅಂದರೆ, ಶಾಲಗ್ರಾಮಶಿಲೆಯ ಬಗ್ಗೆ ನೀಡಿರುವ ಗುಣವಿಶೇಷಗಳು, ಲಕ್ಷಣಗಳು ಪುರಾಣಗಳಲ್ಲಿ ಹೇಳಿರುವುದಕ್ಕಿಂತ ಭಿನ್ನವಾಗಿದ್ದು, ವಿವಾದಾಸ್ಪದ ವಾಗಿರುವುದು. ಆದರೆ ಪುರಾಣಗಳು ಈ ಶಾಲಗ್ರಾಮ ಶಿಲೆಗಳ ಬಗ್ಗೆ ನೀಡಿರುವಂತಹ ಉಲ್ಲೇಖವು ಒಂದೇ ರೀತಿಯಾಗಿದೆ. ಹೀಗಾಗಿ ಈ ಪವಿತ್ರಶಿಲೆಗಳ ಗುರುತಿಸು ವಿಕೆಯಲ್ಲಿ ನಿಖರವಾಗಿ ಹೀಗೆಯೇ ಎಂದು ಹೇಳುವುದು ಕಷ್ಟ.

ಬಾಹ್ಯರೂಪದಿಂದ, ಈ ಪವಿತ್ರಶಿಲೆಯನ್ನು ಶಾಲಗ್ರಾಮಗಳೆಂದು ಕರೆಯಬಹುದು. ಬೇರೆ ಎಲ್ಲಾ ಶಿಲೆಗಳಿಗಿಂತಲೂ ಇದು ವಿಭಿನ್ನವಾಗಿರುವುದರಿಂದ ಅನುಭವ ಇಲ್ಲದ ಹಾಗೂ ಸಾಮಾನ್ಯ ವ್ಯಕ್ತಿಯು ಇದನ್ನು ನೋಡಿದ ಕೂಡಲೇ ಇದು ಶಾಲಗ್ರಾಮಶಿಲೆ ಎಂದು ಬಾಹ್ಯರೂಪದಿಂದಲೇ ಗುರುತಿಸಬಹುದು. ಆದರೆ ಸೂಕ್ಷ್ಮವಾಗಿ ಪರಿಶೀಲನೆ ಮಾಡಿದಾಗ, ಅವುಗಳ ಲಕ್ಷಣ, ಗುಣವಿಶೇಷಗಳು ಒಂದು ಮತ್ತೊಂದರಿಂದ

ವಿಭಿನ್ನವಾಗಿರುವುದರಿಂದ ಹೇಳುತ್ತದೆ. ಈ ಶಿಲೆಗಳ ಗುರುತಿಸುವಿಕೆಯು ಹಲವು ರೀತಿಯಿಂದ ಕೂಡಿದ್ದು ಅವುಗಳಲ್ಲಿ ಇರುವ ಚಕ್ರಗಳ ಸಂಖ್ಯೆ, ಚಕ್ರಗಳು ಇರುವಂತಹ ಸ್ಥಳ ಮತ್ತು ಅವುಗಳ ಆಕಾರ, ಅವುಗಳ ಬಣ್ಣ, ಶಿಲೆಗಳ ಗಾತ್ರ, ಶಿಲೆಗಳು ಯಾವ ಮೂಲದಿಂದ ಬಂದದ್ದು, ವಿಷ್ಣುವಿನ ಆಯುಧಗಳನ್ನು ಪ್ರತಿಬಿಂಬಿಸುವಂತಹ ಶಿಲೆಗಳ ಮೇಲಿರತಕ್ಕಂತಹ ಗೆರೆಗಳು ಮತ್ತು ಬಿರುಕುಗಳ ಆಧಾರದಿಂದ ಗುರುತಿಸಲ್ಪಡುತ್ತಿವೆ. ಈ ಶಾಲಗ್ರಾಮ ಶಿಲೆಯನ್ನು ಪೂಜಿಸುವ ಮೊದಲು, ಪೂಜಿಸುವವನು ಈ ಶಾಲಗ್ರಾಮಶಿಲೆಯು ವಿಷ್ಣುವಿನ ಯಾವ ರೂಪ ಎಂದು ತಿಳಿಯಬೇಕಾಗುವುದು ಅತ್ಯವಶ್ಯ. ಸಾಮಾನ್ಯವಾಗಿ ಶಾಲಗ್ರಾಮಶಿಲೆಯು ಯಾವುದೇ ದೇವರದ್ದಾಗಿರಲಿ/ವಿಷ್ಣುರೂಪವೇ ಆಗಿರಲಿ ಶಾಲಗ್ರಾಮವು ಪೂಜಿಸಲ್ಪಡಲು ಯೋಗ್ಯವೇ ಎಂಬ ಸಾಮಾನ್ಯ ನಂಬಿಕೆಯಿದೆ. ಶಾಲಗ್ರಾಮವು ಸಂಪ್ರದಾಯದಂತೆ, ಬಹುಶಃ ಮಧ್ಯ ಶತಮಾನದಿಂದ ಇರಬಹುದು, ಆಯಾ ಶಿಲೆಗಳ ಮೇಲೆ ಉತ್ತಮ ಫಲಿತಾಂಶ ಹಾಗೂ ಕೆಟ್ಟ ಫಲಿತಾಂಶಗಳನ್ನು ಕೊಡುವಂತದ್ದಾಗಿದೆ.

**ಪದ್ಮಸಂಹಿತೆಯ (ಕ್ರಿಯಾಪದ 32) ಪ್ರಕಾರ** ಗಂಡಕೀನದಿಯ ಚಕ್ರತೀರ್ಥದಲ್ಲಿ ದೊರಕುವಂತಹ ವಿಷ್ಣುವಿನ ಲಾಂಛನವನ್ನು ಹೊಂದಿದಂತಹ ಎಲ್ಲಾ ಶಾಲಗ್ರಾಮ ಶಿಲೆಗಳು ಯಾವ ರೂಪ(ಅವತಾರ)ದ್ದೇ ಆಗಿರಲಿ ಅಥವಾ ಯಾವ ವರ್ಣನೆಯದ್ದೇ ಆಗಿರಲಿ ಅವು ಪೂಜಾರ್ಹವೆ. ಈ ಶಿಲೆಗಳನ್ನು ಪೂಜಿಸುವುದರಿಂದ ಅಭಿವೃದ್ಧಿ ಹಾಗೂ ಮುಕ್ತಿಹೊಂದುತ್ತಾರೆ ಎಂಬುದರಲ್ಲಿ ಖಂಡಿತ ಸಂಶಯವಿಲ್ಲ.

[**ವಿಷ್ಣುತಿಲಕಸಂಹಿತೆ** (7500-501)ಯ ಪ್ರಕಾರ ಬಿನ್ನಗೊಂಡಂತಹ ಶಾಲಗ್ರಾಮದಲ್ಲಿ ಚಕ್ರದ ಚಿಹ್ನೆ ಸರಿಯಾಗಿದ್ದಲ್ಲಿ, ಅಂತಹ ಭಿನ್ನ ಶಾಲಗ್ರಾಮಶಿಲೆಯನ್ನು ಪೂಜೆ ಮಾಡುವುದರಿಂದ, ಪೂಜಿಸುವವನ ಅಭಿವೃದ್ಧಿ ಮತ್ತು ಮುಕ್ತಿಯುಂಟಾಗುತ್ತದೆ. ಶಾಲಗ್ರಾಮಶಿಲೆಯನ್ನು ಪೂಜಿಸುವ ಕ್ರಮದಲ್ಲಿ ಯಾವುದೇ ಶಾಂತಿ ಮತ್ತು ದಾನಾದಿಗಳನ್ನು ಮಾಡಬೇಕೆಂದಿಲ್ಲ ಅಥವಾ ಪ್ರತಿಷ್ಠೆ ಮತ್ತು ಆವಾಹನಾದಿಗಳ ಕ್ರಮಗಳು ಆವಶ್ಯಕತೆ ಇರುವುದಿಲ್ಲ. ಹಾಲಿನ ಅಭಿಷೇಕವನ್ನು ಈ ಶಿಲೆಗೆ ಮಾಡುವುದರಿಂದ ಹಾಗೂ ಶಿಲೆಯನ್ನು ಮುಟ್ಟುವುದರಿಂದ ಪಾಪಗಳೆಲ್ಲವೂ ನಾಶವಾಗುತ್ತದೆ.]

**ಶಾಂಡಿಲ್ಯ ಸಂಹಿತೆಯ** (3, 40) ಪ್ರಕಾರ ಪೂಜಿಸುವವನು ಶಾಲಗ್ರಾಮಶಿಲೆಯನ್ನು ಪೂಜೆ ಮಾಡುವಾಗ ತಪ್ಪಾದ ಕ್ರಮದಿಂದ ಪೂಜಿಸಿದರೂ ಅಥವಾ ಪೂಜಿಸುವಲ್ಲಿ ಅಪ್ಪಿತಪ್ಪಿ ಪೂಜೆಗೊಂಡರೂ ಅದು ಮನ್ನಿಸಲ್ಪಡುವುದು. ಹಾಗೆಯೇ ಯಾವ ಕಾರಣಕ್ಕಾಗಿ ಪೂಜಿಸಲ್ಪಡುವುದೋ ಅದು ಪರಿಪೂರ್ಣ ಗೊಳ್ಳುತ್ತದೆ. ಇಂತಹ ಅಭಿಪ್ರಾಯಗಳನ್ನು ಅನಂತರದ ಪುರಾಣಗಳೂ ಸಹ ತಿಳಿಸುತ್ತವೆ.

ಕೆಲವರು ಇವುಗಳು ಲಾಭದಾಯಕಗಳೆಂದೂ ಇನ್ನು ಹಲವರು ಅಶುಭದಾಯಕಗಳೆಂದೂ ಹೆದರುತ್ತಾರೆ. ಕೆಲವರು ಇದು ಗೃಹಸ್ಥರಿಗಾಗಿ ಹಾಗೂ ಇನ್ನು ಕೆಲವರು ಇದು ಬಹಳ ಗಂಭೀರದ ವಿಷಯವೆಂದೂ ಹಾಗೂ ಇನ್ನು ಹಲವರು ಇದನ್ನು ಕಟ್ಟುನಿಟ್ಟಾಗಿ ಪೂಜಿಸಬೇಕಾದುದೆಂದೂ ಭಿನ್ನವಿಭಿನ್ನ ಅಭಿಪ್ರಾಯಗಳನ್ನು ಹೊಂದಿರುತ್ತಾರೆ. ಎಲ್ಲಾ ಶಿಲೆಗಳೂ ಪೂಜಿಸುವ ಎಲ್ಲರಿಗೂ ಸರಿಹೊಂದುವುದಿಲ್ಲ. ಪೂಜಿಸುವವರಿಗೆ ಯಾವುದು ಕೆಟ್ಟದ್ದು ಯಾವುದು ಒಳ್ಳೆಯದು ಎಂದು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ. ಯಾವ ಶಾಲಗ್ರಾಮವನ್ನು ಪೂಜೆ ಮಾಡಿದ್ದರಿಂದ ಅಂತಹವನಿಗೆ ಕೆಟ್ಟದ್ದಾಯಿತು ಅಥವಾ ಮರಣ ಬಂದಿತು ಅಥವಾ ಸರ್ವನಾಶವಾಯಿತು ಎಂದು ತಿಳಿದು ಮನವರಿಕೆ ಮಾಡಲು ಕಷ್ಟವೇ ಇಲ್ಲ. ಹಾಗೂ ಅದಕ್ಕೆ ಸಂಬಂಧಿಸಿದ ಪೂಜೆಯು ಪೂಜೆ ಮಾಡುವವನನ್ನು ಉದ್ಧರಿಸುವುದನ್ನು ತಿಳಿಯಲು ಕಷ್ಟವಿಲ್ಲ. ಆದರೆ ಕೆಲವೊಂದು ಶಾಲಗ್ರಾಮ ಶಿಲೆಗಳನ್ನು ಗೃಹಸ್ಥರು ಮನೆಯಲ್ಲಿಟ್ಟು ಪೂಜೆ ಮಾಡುವಂತಿಲ್ಲ ಮತ್ತು ಅದನ್ನು ಮಾಡದಿರುವುದೇ ಆತನಿಗೆ

ಒಳಿತು. ಮುಷ್ಟಿಪ್ರಮಾಣದ ಶಾಲಗ್ರಾಮಗಳನ್ನು ಗೃಹಸ್ಥನು ಪೂಜಿಸಬೇಕು. ಆದರಿಂದ ಶ್ರೇಯಸ್ಸಾಗುವುದು ಎಂಬ ನಿಯಮಗಳನ್ನು ಶಾಸ್ತ್ರಗಳು ಉಲ್ಲೇಖಿಸಿವೆ.]

ಹಿಂದಿನ ಕಾಲದಲ್ಲಿ ಶಾಲಗ್ರಾಮಶಿಲೆಗಳನ್ನು ಒಂದಕ್ಕೆ ಇನ್ನೊಂದನ್ನು ಹೋಲಿಸಿ ನೋಡುತ್ತಿರಲಿಲ್ಲ. ಯಾವುದೇ ಶಾಲಗ್ರಾಮವಿರಲಿ ಅದು ಕಣ್ಣಿಗೆ ಕಾಣುವಂತಹ ವಿಷ್ಣುದೇವರ ಪ್ರತೀಕ. ಪುರಾಣಾನಂತರದ ಸಂಪ್ರದಾಯದಂತೆ ಹಾಗೂ ಶಾಲಗ್ರಾಮಸಂಪ್ರದಾಯದಂತೆ ಪೂಜೆ ಮಾಡುವವನು ಪೂಜೆ ಮಾಡಿದ್ದರ ಫಲಿತಾಂಶವನ್ನು ತಿಳಿಯುವುದಕ್ಕೋಸ್ಕರ ವಿಭಿನ್ನ ಶಿಲೆಗಳು ವಿಷ್ಣುವಿನ ಯಾವ ಯಾವ ರೂಪಗಳು ಎಂದು ತಿಳಿಯುವುದು ಅತ್ಯವಶ್ಯ.

ನಿತ್ಯಕರ್ಮವೆಂದರೆ ಯಾವ ಅಪೇಕ್ಷೆಯಾಗಲಿ ಅಭಿಲಾಷೆಯಾಗಲಿ ಇಲ್ಲದೇ ಕರ್ಮ ನಡೆಸಿಕೊಂಡು ಬರುವುದು. ಕಾಮ್ಯ ಇದರ ವಿರುದ್ಧ.

ಶಾಲಗ್ರಾಮ ಪೂಜೆಯು ನಿತ್ಯಕರ್ಮವೋ ಅಥವಾ ಕಾಮ್ಯ ಎಂಬುದರ ಬಗ್ಗೆ ಶಾಸ್ತ್ರಗಳಲ್ಲಿ ಉಲ್ಲೇಖ ವಿದೆ. ಸಂಧ್ಯಾ ವಂದನೆ ಒಂದು ನಿತ್ಯಕರ್ಮ. ಸಂಧ್ಯಾವಂದನಕರ್ಮದ ಪ್ರಕಾರ ಪ್ರತಿಯೊಬ್ಬರೂ ಯಾವ ಉದ್ದೇಶವಿಲ್ಲದೇ ಭಾವೋದ್ವೇಗ ಕ್ಕೊಳಗಾಗದೇ ತನ್ನ ಕರ್ತವ್ಯವೆಂದರಿತುಕೊಂಡು ನಡೆಸಿಕೊಂಡುಹೋಗ ಬೇಕು. ಯಾವನು ಈ ಕರ್ಮವನ್ನು ಅನುಸರಿಸುವುದಿಲ್ಲವೋ ಅಂತಹವನಿಗೆ ಪಾಪ ಬರುತ್ತದೆ. ಅಂತಯೇ ಯಾವನು ಈ ಕರ್ಮವನ್ನು ಅನುಸರಿಸುವನೋ ಅವನು ಜೀವನದ ಪರಮೋಚ್ಚ ಸಂತೋಷವನ್ನು ಪಡೆಯು ತ್ತಾನೆ. ಆದುದರಿಂದಲೇ ಯಾವನು ಈ ಬಗ್ಗೆ ತಿಳಿದುಕೊಳ್ಳುವನೋ ಅವನಿಗೆ ಇದು ಐಚ್ಛಿಕ, ಅನೈಚ್ಛಿಕವಲ್ಲ.

**ಸ್ಕಂದಪುರಾಣದ ಪ್ರಕಾರ** ಶಾಲಗ್ರಾಮಪೂಜೆಯು ಕಡ್ಡಾಯವಾಗಿ ಮಾಡಲೇಬೇಕಾದ ಒಂದು ಕರ್ಮ. ಒಂದು ವೇಳೆ ಶಾಲಗ್ರಾಮದ ಪೂಜೆಯನ್ನು ಒಂದು ದಿನದ ಮಟ್ಟಿಗೆ ಪೂಜೆ ಮಾಡಬೇಕೆಂದು ಗೊತ್ತಿದ್ದು ಬಿಟ್ಟುಬಿಟ್ಟಲ್ಲಿ, ಅದನ್ನು 'ಬ್ರಹ್ಮಕೃಚ್ಛ್ರ' ಎನ್ನುತ್ತಾರೆ. (ಒಬ್ಬನ ಶರೀರವು ೨೦ ದಿನಗಳ ವರೆಗೆ ಬರಿಯ ಪಂಚಗವ್ಯವನ್ನು ಸೇವಿಸಿ ದೇವಾಲಯದಲ್ಲಿ ವಾಸಿಸಬೇಕು ಅಥವಾ ದನದೊಟ್ಟಿಗೆ ದೊಡ್ಡಿಯಲ್ಲಿ ಇರಬೇಕು. ಮತ್ತು ಹಗಲಲ್ಲಿ ವಿಷ್ಣುವಿನ ಧ್ಯಾನ ಮಾಡುತ್ತಾ ಇದ್ದು ರಾತ್ರಿಯಲ್ಲಿ ವಿಷ್ಣುವಿನ ಮೂರ್ತಿ ಪಕ್ಕದಲ್ಲಿ ನಿದ್ರಿಸಬೇಕು.) ಹಾಗೆಯೇ ಒಂದು ತಿಂಗಳಿನ ತನಕ ಪೂಜೆ ಮಾಡಬೇಕೆಂದು ಗೊತ್ತಿದ್ದು ಮಾಡದೇ ಇದ್ದಲ್ಲಿ ಆಗ 'ಪೂರ್ಣಕೃಚ್ಛ್ರ'. ಇದಕ್ಕೆ ಪ್ರಾಯಶ್ಚಿತ್ತವೇನೆಂದರೆ, ಪೂಜೆ ಮಾಡದವನು ಕೇವಲ ಎಲೆಯ ರಸವನ್ನು ಮಾತ್ರ ಕುಡಿದು ಬದುಕಬೇಕು. ಹಾಗೂ ಒಂದು ವರ್ಷಗಳ ವರೆಗೆ ಗೊತ್ತಿದ್ದು ಪೂಜೆ ಮಾಡದೇ ಇದ್ದಲ್ಲಿ 'ಔದುಂಬರ' ಎಂಬ ಪ್ರಾಯಶ್ಚಿತ್ತ ಮಾಡಬೇಕು. ಪೂಜೆ ಮಾಡದವನು ಔದುಂಬರ ವೃಕ್ಷದ ಎಲೆಯ ರಸವನ್ನು ಮಾತ್ರ ಕುಡಿದು ಬದುಕಬೇಕು.

ಆದರೆ ಬಹಳಷ್ಟು ಪುರಾಣಗಳು ಈ ಶಾಲಗ್ರಾಮಗಳು ಸ್ಥಿರ ಸಂಪತ್ತನ್ನು ಕೊಡಬಲ್ಲವುಗಳೆಂದೂ ಹೊಗಳಿ ಕೊಂಡಾಡಿವೆ. ಐಶ್ವರ್ಯಕ್ಕಾಗಿ, ಸಂತಾನಪ್ರಾಪ್ತಿಗಾಗಿ, ಜಯಶಾಲಿಯಾಗಲಿಕ್ಕೆ, ದೀರ್ಘಾಯುಷ್ಯಕ್ಕೆ ಪಶುಪ್ರಾಪ್ತಿಗಾಗಿ (ಗೋವುಗಳಿಗಾಗಿ), ಉತ್ತಮ ಆರೋಗ್ಯಕ್ಕಾಗಿ, ಶ್ರೇಷ್ಠ ವ್ಯಕ್ತಿಯಾಗುವುದಕ್ಕಾಗಿ ಇತ್ಯಾದಿ ಇಷ್ಟ ಕಾಮ್ಯಾರ್ಥಕ್ಕೆ ಕೆಲವೊಂದು ರೀತಿಯ/ಜಾತಿಯ ಶಾಲಗ್ರಾಮಗಳನ್ನು ಪೂಜಿಸುವ ಕ್ರಮ ಶಾಲಗ್ರಾಮಪದ್ಧತಿ ಯಲ್ಲಿದೆ. ಹಾಗೆಯೇ 'ಅಪುತ್ರೋ ಲಭತೇ ಪುತ್ರಂ ಶಾಲಗ್ರಾಮಪೂಜನಾತ್' ಎಂಬಂತೆ ಮಕ್ಕಳಿಲ್ಲದವನಿಗೆ ಶಾಲಗ್ರಾಮ ಪೂಜೆಯಿಂದ ಮಕ್ಕಳಾಗುತ್ತವೆ ಎಂಬ ವಿಶ್ವಾಸವಿದೆ. ಯಾವನು ತನ್ನ ಇಷ್ಟಾರ್ಥಪ್ರಾಪ್ತಿ ಯಾಗಬೇಕೆಂದು ಹಂಬಲಿಸುವನೋ ಅವನು (ಬಯಸಿದ್ದನ್ನು ಪಡೆಯುವುದಕ್ಕೋಸ್ಕರ ಅಥವಾ ಲಭಿಸು ವುದಕ್ಕಾಗಿ) ನಿರ್ದಿಷ್ಟ ಶಾಲಗ್ರಾಮಶಿಲೆಯನ್ನು ಪೂಜಿಸಬೇಕು. ಇದುವೇ ಕಾಮ್ಯ (=ಬಯಸಿದುದು). ಯಾವನಿಗೆ ಆಶೆಗಳಿಲ್ಲವೋ ಅವನು ಇಂತಹ ಶಾಲಗ್ರಾಮವನ್ನು ಪೂಜಿಸುವ ಅಗತ್ಯವಿಲ್ಲ.

ಅನುಪಸಂಹನು ಬರೆದ ಶಾಲಗ್ರಾಮ ಪರೀಕ್ಷಾಗ್ರಂಥದ ಪ್ರಕಾರ ಶಾಲಗ್ರಾಮಪೂಜೆಯು ಐಚ್ಛಿಕವೂ ಹೌದು ಮತ್ತು ನಿತ್ಯಕರ್ಮ/ಕಾಮ್ಯಕರ್ಮವೂ ಹೌದು. ಇದೊಂದು ಸಾಂಪ್ರದಾಯಿಕ ನೋಟದಿಂದಲೂ ಹೌದು (ಸಾ ಚ ಶಾಲಗ್ರಾಮಪೂಜಾ ನಿತ್ಯೇತಿ ಬಹವಃ ಕಾಮ್ಯೇತಿ ಕೇಚಿತ್ ನಿತ್ಯಕಾಮ್ಯೇತಿ ಸಂಪ್ರದಾಯಿತಾ). ಇದನ್ನು ಮೀಮಾಂಸಾ ಸಂಹಿತೆಯು ಪುಷ್ಟೀಕರಿಸಿದೆ– **'ಏಕಸ್ಯ ತೂಭಯತ್ವಸಂಯೋಗ ಪೃಥಕ್ತ್ವತ್'**

ಪ್ರತೀಕವಾಗಿ ಯಾವ ಶಾಲಗ್ರಾಮವನ್ನು ಪೂಜಿಸುವನೋ ಅದುವೇ ಉಪಾಸನೆ. ಉಪಾಸನೆ ಎಂದರೆ ಧ್ಯಾನವನ್ನು ವಸ್ತುವಿನ ಮೇಲೆ ಕೇಂದ್ರೀಕರಿಸುವುದು. ಉಪಾಸನೆಯು ಮಾನಸಿಕ ಸ್ಥಿರತೆ ಮೇಲಿನ ಪ್ರಯೋಗ. ಇದು ಒಂದು ವಸ್ತುವಿನ ಮೇಲೆ ನಿರಂತರವಾಗಿ ಏಕಾಗ್ರತೆಯನ್ನು ತರುವುದು. ಪ್ರತೀಕವು ಒಂದು ವಸ್ತುವಿನ ಮೇಲಿನ ಏಕಾಗ್ರತೆ ಮತ್ತು ಮನಸ್ಸಿನ ಹತೋಟಿಯನ್ನು ವಸ್ತುವಿನ ಮೇಲೆ ಬೀರುವುದಾಗಿದೆ.

ಶಾಲಗ್ರಾಮದ ಉಪಾಸನೆಯು ಅದನ್ನು ಪೂಜಿಸುವವನ ಮಾನಸಿಕ ಸ್ಥಿರತೆಯನ್ನು ಆ ಶಾಲಗ್ರಾಮ ಬಿಂಬದ ಮೇಲೆ ಇಟ್ಟು ಪೂಜಿಸಿದಾತನಿಗೆ ಸರ್ವವಿಧದ ಶ್ರೇಯಸ್ಸು ಲಭಿಸುತ್ತದೆ ಎಂದು ಶಾಸ್ತ್ರಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಶಾಲಗ್ರಾಮವು ವಿಷ್ಣುವಿನ ರೂಪವಲ್ಲ ಅಥವಾ ದೇವರೂಪವೂ ಅಲ್ಲ. ಶಾಲಗ್ರಾಮವನ್ನು ವಿಷ್ಣುದೇವರ ಪ್ರತೀಕ ಎಂದು ಭಾವಿಸಿ ಪೂಜಿಸಬೇಕು.

ಶಾಲಗ್ರಾಮವು 'ಅಧಿಷ್ಠಾನ' ಎಂದು ವರ್ಣಿಸಲ್ಪಟ್ಟಿದೆ ಅಥವಾ 'ಉಪಾಸನೆ' ಮಾಡತಕ್ಕ ರೀತಿಯಲ್ಲಿ, ಶಾಲಗ್ರಾಮವು ವಿಷ್ಣುವಿನ ಪ್ರತೀಕವಾಗಿದೆ. ವಿಷ್ಣುವಿನ ಸಾನ್ನಿಧ್ಯ ಇರುವುದರಿಂದ ಅದಕ್ಕೆ ಪ್ರಾಧಾನ್ಯವನ್ನು ಕಲ್ಪಿಸಲಾಗಿದೆ.

ಶಾಲಗ್ರಾಮವು ವಿಷ್ಣುದೇವರ ಹೊರಗಿನ ಚಿಹ್ನೆ ಅಥವಾ ವಿಷ್ಣುವಿನ ಪ್ರತೀಕ. ಶಾಲಗ್ರಾಮವು ವಿಷ್ಣುವಿನ ಅವತಾರವೂ ಅಲ್ಲ; ಅಥವಾ ಯಾವುದೇ ಭಗವಂತನ ಅವತಾರವೂ ಅಲ್ಲ. ಶಾಲಗ್ರಾಮಶಿಲೆಯಲ್ಲಿ ವಿಷ್ಣುವಿನ ಚಿಹ್ನೆಯು ತೋರಿಬರುವುದರಿಂದ ಇದನ್ನು ವಿಷ್ಣುವೆಂದು ಪೂಜಿಸುವ ಪದ್ಧತಿ ಬಂದಿದೆ. ಭಾರತೀಯರ ನಂಬಿಕೆಯ ಪ್ರಕಾರ ನೀರಿನಲ್ಲಿ (ಉದಾಹರಣೆಗೆ ಪೂಜಿಸಲ್ಪಟ್ಟ 'ಕಲಶ'ದ ನೀರಿನಲ್ಲಿ) ಭಗವಂತನ ಸಾನ್ನಿಧ್ಯವನ್ನು ಕಾಣುವಂತೆ, ಅಗ್ನಿ(ಪವಿತ್ರವಾದ ಯಜ್ಞಯಾಗಾದಿಗಳ ಜ್ವಾಲೆ)ಯಲ್ಲಿ ಒಬ್ಬನ ಹೃದಯಕಮಲದಲ್ಲಿ, ಸೂರ್ಯನಲ್ಲಿ, ಪೀಠದಲ್ಲಿ/ತಯಾರಿಸಿದ ಮಣೆಯಲ್ಲಿ ಅಥವಾ ಆಕಾರಸ್ವರೂಪಗಳಲ್ಲಿ ಭಗವಂತನನ್ನು ಕಾಣಬಹುದು.

ಶಾಲಗ್ರಾಮಪೂಜೆಯು ಮೂರ್ತಿಪೂಜೆಯ ಇನ್ನೊಂದು ರೂಪ. ಪ್ರತಿಮೆಯು ಮಾನವನಿರ್ಮಿತವಾದದ್ದು. ಶಾಸ್ತ್ರೋಕ್ತವಾಗಿ ರಚಿಸಿದ್ದು, ಧಾರ್ಮಿಕ ರೀತಿಯಲ್ಲಿ ರಚಿಸಲ್ಪಟ್ಟದ್ದಾಗಿದೆ. ಆದರೆ ಈ ಶಾಲಗ್ರಾಮ ಶಿಲೆಯು ತಾನಾಗಿ ಆದ (ಸ್ವಯಂಭೂ) ಸರ್ವಶ್ರೇಷ್ಠವಾದ ಆಕಾರ ಅಥವಾ ಭಗವಂತನ ಸ್ವರೂಪವುಳ್ಳದ್ದು. ಇದರಲ್ಲಿ ಗುರುತಿಸಲ್ಪಡತಕ್ಕಂತಹ ಹಲವಾರು ಚಿಹ್ನೆಗಳು, ಅದರಲ್ಲೂ ಚಕ್ರದ ರೂಪದಲ್ಲಿ ಅದರೊಳಗೇ ಮುದ್ರಿತವಾದ ಚಿಹ್ನೆಗಳಿರುತ್ತವೆ. ಇದನ್ನು ಪೂಜಿಸುವವನು ಈ ಎಲ್ಲಾ ಗುಣನಡತೆಗಳನ್ನು ತಿಳಿದುಕೊಂಡು ಭಕ್ತಿಯಿಂದ ಅದನ್ನು ಆರಾಧಿಸಬೇಕು.

# 3. ಶಾಲಗ್ರಾಮಶಿಲೆಗಳ ಗುಣಲಕ್ಷಣಗಳು ಮತ್ತು ಅವುಗಳ ಪ್ರಭೇದಗಳು

ವರ್ಣರೂಪಾದ್ಯವಯವಪ್ರಮಾಣಬಲಲಾಂಛನೈಃ ।
ದ್ವಾರದೇಶವಿಭಾಗೈಶ್ಚ ಭೇದಃ ಕೇಷಾಂಚಿದುಚ್ಯತೇ ॥

ವರ್ಣ, ರೂಪ, ಆಕಾರ, ಅಳತೆ, ಚಿಹ್ನೆ, ವದನಗಳ ವ್ಯತ್ಯಾಸಗಳಿಂದ ಕೆಲವು ಶಾಲಗ್ರಾಮಗಳ ಭೇದ ಗಳನ್ನು ಹೇಳಲಾಗುವುದು.

ಶಾಲಗ್ರಾಮ ಶಿಲೆಯ ಗುಣಲಕ್ಷಣಗಳು ಏಳು ವಿಧದವುಗಳೆಂದು ತಿಳಿಯಲಾಗಿದೆ. ಇವು ಈ ಶಿಲೆಯ ಪಾವಿತ್ರ್ಯ ಹಾಗೂ ಉಪಯುಕ್ತತೆಯನ್ನು ತಿಳಿಯುವುದಕ್ಕೆ ಅತ್ಯವಶ್ಯ.

೧. **ಮುದ್ರೆ** (ಗುರುತು, ಪ್ರಭಾವ, ಮುದ್ರೆ) : ಶಾಲಗ್ರಾಮಶಿಲೆಗಳು ಕೆಲವೊಂದು ಗುರುತು ಅಥವಾ ಮುದ್ರೆಗಳನ್ನು ಹೊಂದಿದ್ದು, ಇವುಗಳು ವಿಷ್ಣುವಿನ ನಾನಾ ರೂಪಗಳನ್ನು ತಿಳಿಯಲು ಸಹಕಾರಿಯಾಗಿದೆ. ಧರ್ಮ ಶಾಸ್ತ್ರದ ಪ್ರಕಾರ ಈ ಗುರುತುಗಳು ಬಹಳಷ್ಟಿದ್ದು, ಇವುಗಳಲ್ಲಿ– ಶಂಖ, ಚಕ್ರ, ಗದಾ, ಪದ್ಮ, ಕೊಳಲು, ಶ್ರೀವತ್ಸಮಣಿ, ಕೌಸ್ತುಭ, ವನಮಾಲಾ ಮೊದಲಾದ ಹತ್ತೊಂಬತ್ತು ಚಿಹ್ನೆಗಳು ವಿಷ್ಣುವಿನ ಪ್ರತೀಕಗಳಾಗಿವೆ.

ಮುದ್ರೆಯೆಂದರೆ ಕೇವಲ ಚಿಹ್ನೆ ಅಥವಾ ಗುರುತು (ದಿವ್ಯಶಸ್ತ್ರಾಸ್ತ್ರಗಳು ಅಥವಾ ಆಭರಣಗಳು) ಮಾತ್ರವಲ್ಲ, ಶಾಲಗ್ರಾಮದ ವಿವಿಧ ಆಕಾರಗಳನ್ನೊಳಗೊಂಡಿದೆ. ಆಕಾರಗಳು ಬೇರೆಬೇರೆಯಾಗಿದ್ದುವು ಅಥವಾ ಇಂತಹ ಗುಣ ಹೊಂದಿದವು ವಿರಳ.

ಮತ್ಸ್ಯಮೂರ್ತಿ ಶಾಲಗ್ರಾಮವು ನೋಡಲು ಮೀನಿನಾಕಾರವಾಗಿದ್ದು ಹಯಗ್ರೀವಮೂರ್ತಿ ಶಾಲ ಗ್ರಾಮವು ಕುದುರೆಯ ತಲೆಯಂತಿರುವುದು. ವಾರಾಹಮೂರ್ತಿ ಶಾಲಗ್ರಾಮ ಶಿಲೆಯ ಮೂತಿಯು ಊದಿ ಕೊಂಡಿರುತ್ತದೆ. ನರಸಿಂಹಮೂರ್ತಿ ಶಾಲಗ್ರಾಮಶಿಲೆಯು ಬಾಯ್ತೆರೆದು ಹರಿತವಾದ ಹಲ್ಲುಗಳ ರೂಪ ಹೊಂದಿರುತ್ತದೆ. ಈ ರೀತಿಯ ಬಾಹ್ಯ ಹಾಗೂ ತತ್‌ಕ್ಷಣ ನೋಡಿ ಹೇಳಬಹುದಾದ ಆಕೃತಿ ಅಥವಾ ರೂಪವಲ್ಲದೇ ಈ ಶಾಲಗ್ರಾಮಶಿಲೆಗಳು ಇನ್ನಿತರ ಗುಣಲಕ್ಷಣಗಳಾದ ಕೆಲವೊಂದು ಲಾಂಛನವನ್ನು ಹೊಂದಿದ್ದು ಆರಾಧಕನಿಗೆ ಯಾವ ಶಾಲಗ್ರಾಮ ಎಂದು ತಿಳಿಯುವುದಕ್ಕೆ ಉಪಯುಕ್ತವಾಗಿದೆ. ಉದಾ ಹರಣೆಗೆ– ಹಯಗ್ರೀವ ಶಾಲಗ್ರಾಮವು ಕುದುರೆಯ ತಲೆಯಂತೆ ಕಾಣುವುದು ಮಾತ್ರವಲ್ಲದೇ ಹೊರ ಹರಿದ ಬೇರುಗಳಂತೆ, ಕಮಲ ಮತ್ತು ಪುಸ್ತಕದ ಚಿಹ್ನೆಯನ್ನು ಸಹ ಹೊಂದಿರುತ್ತದೆ.

೨. **ಕ್ಷೇತ್ರ** (ವಿಭಾಗ, ವಿಸ್ತಾರ, ಮೂಲ) : ಶಾಲಗ್ರಾಮಶಿಲೆಯ ಕ್ಷೇತ್ರದ ಬಗ್ಗೆ ಪರೀಕ್ಷೆ ನಡೆಸುವಾಗ ಈ ಮೂರು ಮೂಲಲಕ್ಷಣಗಳನ್ನು ಪರಿಶೀಲಿಸಬೇಕು. ಯಾವ ವರ್ಗ/ಜಾತಿಯ ಮೂರ್ತಿ ಹಾಗೂ ಶಿಲೆಯ ಬಣ್ಣ ಮತ್ತು ಒಟ್ಟು ಗುಣಲಕ್ಷಣಗಳು ಯಾವುವು ಎಂಬುದನ್ನು ತಿಳಿದುಕೊಳ್ಳಬೇಕು. ಶಿಲೆಯನ್ನು ವರ್ಗೀ ಕರಿಸುವಾಗ ಆ ಶಿಲೆ ದೇವರ ಯಾವ ಅವತಾರಕ್ಕೆ ಸೇರಿದ್ದು ಎಂದು ತಿಳಿಯಬೇಕು ಮತ್ತು ಅದರಂತೆ ವರ್ಗೀ ಕರಿಸಬೇಕು. ಉದಾಃ ವಾಮನಶಿಲೆ ಮತ್ತು ಅಚ್ಯುತ ಶಿಲೆಗಳ ಮಧ್ಯೆ, ಹಯಗ್ರೀವ ಶಿಲೆ ಮತ್ತು ವರಾಹ ಶಿಲೆಗಳ ಮಧ್ಯೆ, ವಾರಾಹಶಿಲೆ ಮತ್ತು ಶ್ರೀಧರ ಶಿಲೆಗಳ ಮಧ್ಯೆ ಹೋಲಿಸಿಕೊಂಡು ಇವುಗಳನ್ನು ವೈಷ್ಣವ ಸಿದ್ಧಾಂತದ ಪ್ರಕಾರ ಪ್ರತ್ಯೇಕಿಸಲಾಗಿದೆ.

ಇನ್ನು ಇವುಗಳ ಬಣ್ಣದ ವಿಚಾರವಾಗಿ ಹೇಳುವುದಾದರೆ, ಹೆಚ್ಚಿನ ಶಾಲಗ್ರಾಮಶಿಲೆಗಳು ಕಪ್ಪು ಮತ್ತು ನೀಲಿಬಣ್ಣಗಳಿಂದ ಹುಟ್ಟುವುದಿದ್ದರೂ, ಇವುಗಳು ಅನೇಕ ಬಣ್ಣಗಳಲ್ಲಿ ಸಿಗುತ್ತವೆ. ಎಲ್ಲ ಶಾಲಗ್ರಾಮಶಿಲೆಗಳು ನುಣುಪಾಗಿ, ಹೊಳೆ ಯುವಂತಹವಾಗಿದ್ದು ಅನೇಕ ಬಣ್ಣಗಳಲ್ಲಿ ದೊರಕುತ್ತವೆ. ಇವುಗಳೆಲ್ಲವೂ ವಿಷ್ಣುವಿನ ವಿವಿಧ ರೂಪ/ಅವತಾರಗಳೊಂದಿಗೆ ಸಂಬಂಧಿಸಿದ್ದು ಅವು ಹಳದಿ-ಕಂದುವಿನ ಕಪಿಲಾವರ್ಣದಲ್ಲೂ, ವಾಮನ ಮತ್ತು ನರಸಿಂಹ ಕಪ್ಪುಬಣ್ಣದಲ್ಲೂ, ಅನಿರುದ್ಧ ಮತ್ತು ದಾಮೋದರ ನೀಲಬಣ್ಣದಲ್ಲೂ ಕಡುನೀಲಿಬಣ್ಣದಲ್ಲಿ ನಾರಾಯಣನೂ, ಅಚ್ಯುತ ಮತ್ತು ಶ್ರೀಧರಮೂರ್ತಿ ಕೆಂಪುಬಣ್ಣದಲ್ಲೂ, ವಾಸುದೇವಮೂರ್ತಿಯು ಬಿಳಿಯ ಬಣ್ಣದಲ್ಲೂ, ಸಂಕರ್ಷಣಮೂರ್ತಿಯು ಕೆಂಪುಬಣ್ಣದಲ್ಲೂ ಹಾಗೂ ವಿವಿಧ ಬಣ್ಣದ ಅನಂತ ಶಾಲಗ್ರಾಮ ಶಿಲೆಗಳೂ ಇವೆ.

**೩. ಪರಿಮಾಣ** (ಉದ್ದ, ಅಳತೆ, ವಿಸ್ತೀರ್ಣ, ಗಾತ್ರ, ಪರಿಮಿತಿ) : ಶಾಲಗ್ರಾಮಶಿಲೆಯು ಬೇರೆಬೇರೆ ಗಾತ್ರದಲ್ಲಿ ಬೇರೆಬೇರೆ ರೂಪದಲ್ಲಿ ಉಂಟಾಗುತ್ತವೆ. ಅವುಗಳ ಗಾತ್ರಾನುಸಾರ ಅವುಗಳು ಪೂಜೆಗೆ ಯೋಗ್ಯ/ಅಯೋಗ್ಯ ಎಂದೂ ತೀರ್ಮಾನಿಸಲ್ಪಡುತ್ತವೆ. ಶಾಲಗ್ರಾಮಶಿಲೆಯ ಸುತ್ತಲೂ ಒಂದು ದಾರವನ್ನು ಸುತ್ತಿ ಆ ದಾರದ ಸುತ್ತಲೂ ಮುಖ, ವದನ, ರಂಧ್ರ, ವಿವರಗಳು ಎಲ್ಲಿ ತೆರೆಯಲ್ಪಟ್ಟಿವೆ ಎಂಬುದರ ಕುರಿತು ಕೂಲಂಕಷವಾದ ಪರೀಕ್ಷಾವಿಧಾನಗಳು ಈಗ ಪ್ರಚಲಿತ ದಲ್ಲಿವೆ. ಒಂದು ವೇಳೆ ದ್ವಾರವು ಈ ಶಿಲೆಯ ಸುತ್ತ ಹೋದ ದಾರದ 1/8 ಅಗಲ ಉಳ್ಳದ್ದಾಗಿದ್ದರೆ ಅಂತಹ ಶಿಲೆಯು ಅತ್ಯುತ್ತಮ ಶಾಲಗ್ರಾಮಗಳಲ್ಲಿಯೇ ಅತಿಶ್ರೇಷ್ಠ ಶಾಲಗ್ರಾಮ. ಅದೇ 1/4 ಅಥವಾ 2/8 ಅಂಶದ ರಂಧ್ರ ಹೊಂದಿದ್ದಲ್ಲಿ ಅಂತಹ ಶಾಲಗ್ರಾಮವು ಮಧ್ಯಮ ಗುಣಮಟ್ಟದ್ದು. ಹಾಗೆಯೇ ದ್ವಾರವು 3/8 ಅಂಶದ ರಂಧ್ರವನ್ನು ಹೊಂದಿದ್ದಲ್ಲಿ ಅಂತಹವು ಕಳಪೆಮಟ್ಟದ್ದು ಹಾಗೂ ಪೂಜಿಸಲು ಅನರ್ಹ ಎಂದು ಪರಿಗಣಿಸಲಾಗಿದೆ. ದ್ವಾರ ಚಿಕ್ಕದಾಗಿದ್ದಷ್ಟು ಉತ್ತಮ ಎಂಬುದೇ ಇದರ ತಾತ್ಪರ್ಯ.

**೪. ಆಸನ** (ವದನ, ತಳಭಾಗ) : ಈ ಹಿಂದೆ ಹೇಳಿದ ಪ್ರಕಾರ, ಶಾಲಗ್ರಾಮಶಿಲೆಗಳು ಅನೇಕ ರೂಪಗಳಿಂದ ಕೂಡಿದ್ದು ಕೆಲವೊಂದು ಪೂರ್ಣಗೋಲಾಕಾರವಾಗಿಯೂ, ಕೆಲವು ಅಂಡಾಕಾರವಾಗಿಯೂ, ಕೆಲವು ತ್ರಿಕೋನಾಕಾರವಾಗಿಯೂ, ಕೆಲವು ವಿಭಿನ್ನಾಕಾರಗಳಲ್ಲಿಯೂ ಸಿಕ್ಕುತ್ತವೆ. ಆದರೆ ನೆಲದ ಮೇಲಿರಿಸಿ ದಾಗ ಯಾವ ಶಾಲಗ್ರಾಮವು ಸ್ಥಿರವಾಗಿ ನಿಲ್ಲುವುದೋ ಅಂತಹ ಶಾಲಗ್ರಾಮವು ಪೂಜೆಗೆ ಯೋಗ್ಯ ಮತ್ತು ಭಜಿಸುವವನ ಅಭಿವೃದ್ಧಿಯನ್ನುಂಟುಮಾಡುತ್ತದೆ. ಚಲ ಹಾಗೂ ಅಸಮತೋಲ ಶಾಲಗ್ರಾಮವು ಪೂಜಿಸು ವವನು ಒಂದೇ ಮನೆಯಲ್ಲಿ ಸ್ಥಿರವಾಗಿ ನಿಲ್ಲದಂತೆ ಮಾಡುವುದಲ್ಲದೆ ಅವನ ಜೀವನದಲ್ಲಿ ಅಸ್ಥಿರತೆಯ ನ್ನುಂಟುಮಾಡುತ್ತದೆ. ಶಿಲೆಯ ಪಾರ್ಶ್ವವು ಶಿಲೆಯನ್ನು ನೆಲದಲ್ಲಿರಿಸುವಾಗ ತಾಗುತ್ತಿದ್ದರೆ ಅಂತಹ ಶಾಲ ಗ್ರಾಮದ ಪೂಜೆಯಿಂದ ಆರಾಧಕನಿಗೆ ಭಾವೋದ್ವೇಗ ಉಂಟಾಗಬಹುದು ಅಥವಾ ಶಿಲೆಯು ಅಸಮ ತೋಲನವಾಗಿದ್ದು ಅಲ್ಲಾಡುತ್ತಿದ್ದಲ್ಲಿ ಅಂತಹ ಶಿಲೆಯನ್ನು ಪೂಜಿಸುವುದರಿಂದ ದುಃಖ ಉಂಟಾಗುತ್ತದೆ. ಇದನ್ನು ಸ್ಕಂದಪುರಾಣದಲ್ಲಿ ಹೇಳಲಾಗಿದೆ.

**೫. ಮೂರ್ತಿಭೇದ** ಶಾಲಗ್ರಾಮಶಿಲೆಯನ್ನು ಮೂರು ಪ್ರಭೇದಗಳನ್ನಾಗಿ ವಿಂಗಡಿಸಲಾಗಿದೆ:

**ಜಲಜಾಃ ಕೋಮಲಾಃ ಸ್ನಿಗ್ಧಾಃ ಸ್ಥಲಜಾಃ ಪುರುಷಾಃ ಸ್ಮೃತಾಃ ।**
**ಮೂರ್ತಯಃ ಪುಷ್ಟಿದಾಃ ಸ್ನಿಗ್ಧಾಃ ಪುರುಷೋ ಮೋಕ್ಷದಾಃ ಸ್ಮೃತಾಃ ॥**

**'ಜಲಜ'** (ನೀರಿನಲ್ಲಿ ಹುಟ್ಟಿದ್ದು)– ಈ ರೀತಿಯ ಶಿಲೆಗಳು ನೀರಿನಲ್ಲಿ ಹಾಗೂ ಪರ್ವತಗಳಲ್ಲಿದ್ದು ತುಂಬಾ ನುಣುಪಾಗಿ, ನೀರುಹಸಿರು ಬಣ್ಣದವುಗಳಾಗಿವೆ. ಇಂತಹ ಶಿಲೆಗಳು ಅತಿ ಉತ್ಕೃಷ್ಟ ಫಲ ನೀಡುವವುಗಳಾಗಿವೆ ಮತ್ತು ಮಹತ್ತಾದ ಪುಣ್ಯಪ್ರದಗಳಾಗಿವೆ (ಜಲಚಕ್ರಂ ಮಹಾಪುಣ್ಯಮ್).

**'ಸ್ಥಳಜ'** (ನೆಲದಲ್ಲಿ ಹುಟ್ಟಿದ್ದು)– ಇವುಗಳು ಪರ್ವತಶ್ರೇಣಿಗಳಲ್ಲಿ ದೊರಕುವಂತಹವುಗಳಾಗಿರುವುದ ರಿಂದ ಹಾಗೂ ನೀರುಹಸಿರು ಬಣ್ಣಗಳಿಲ್ಲದವುಗಳಾಗಿವೆ. ಇಂತಹ ಶಿಲೆಗಳು ಸಾಮಾನ್ಯಫಲ ನೀಡುವಂತಹವು.

**'ಮಥಾ'** (ಚಿಪ್ಪಿನಲ್ಲಿ ಹುಟ್ಟಿದ್ದು)– ಇವುಗಳು ಅಮೋನೈಟ್‌ಗಳ ಪಳೆಯುಳಿಕೆಗಳೆಂದೂ, ಕೀಟಗಳಿಂದ ತಿನ್ನಲ್ಪಟ್ಟ ವೆಂದೂ ಪರಿಗಣಿಸಲಾಗಿದೆ. ಇವುಗಳು ಕೆಳದರ್ಜೆಯವುಗಳಾಗಿದ್ದು ಇದರಲ್ಲಿ ಮತ್ತೆರಡು ವರ್ಗಗಳಿವೆ. ಮಥವು ಕೀಟಾಣು ಆಹಾರವನ್ನು ಸರಿಯಾಗಿ ಆಸ್ವಾದಿಸದೆ ಹಾಗೂ ಅದರ ರಸವನ್ನು ಸವಿಯದೇ ನಿರ್ಮಿತ ವಾದ ಚಕ್ರವು ಒರಟಾಗಿರುತ್ತದೆ. ಕೀಟವು ತನ್ನ ಆಹಾರವನ್ನು ನಿಧಾನವಾಗಿ, ಅದರ ರುಚಿಯನ್ನು ಸವಿಯುತ್ತಾ ತಿಂದಾಗ ಅದು ಹಲವು ಬಗೆಯ ಉತ್ತಮ ದರ್ಜೆಯ ಕೇಸರವನ್ನು ನಿರ್ಮಿಸುತ್ತದೆ.

**೬. ಸ್ಥೂಲಸೂಕ್ಷ್ಮಶಿಲಾ** (ದೊಡ್ಡ ಅಥವಾ ಸಣ್ಣ ಆಕಾರವುಳ್ಳದ್ದು) ಶಾಲಗ್ರಾಮ ಶಿಲೆಗಳು ದೊಡ್ಡ ಗಾತ್ರದಿಂದ ಅತ್ಯಂತ ಚಿಕ್ಕ ಗಾತ್ರದವರೆಗೂ ಸಣ್ಣ ವರ್ತುಲಾಕಾರದಿಂದ ದೊಡ್ಡ ಬಂಡೆಕಲ್ಲ ಗಾತ್ರದವರೆಗೂ ಲಭಿಸುತ್ತವೆ. ಸಣ್ಣಗಾತ್ರದ (ನೆಲ್ಲಿಕಾಯಿಯಷ್ಟು ಗಾತ್ರದ) ಶಾಲಗ್ರಾಮಶಿಲೆಯು ತುಂಬ ಶ್ರೇಷ್ಠಫಲವನ್ನು ಕೊಡುತ್ತದೆ. ದೊಡ್ಡ ಗಾತ್ರದ ಶಾಲಗ್ರಾಮಶಿಲೆಯನ್ನು ಗೃಹಸ್ಥನು ಮನೆಯಲ್ಲಿಟ್ಟು ಪೂಜೆ ಮಾಡಬಾರದು. ಸಣ್ಣ ಶಿಲೆಯು ಧರ್ಮ, ಅರ್ಥ ಮತ್ತು ಕಾಮಗಳೆಂಬ ಮೂರು ಅಭೀಷ್ಟಗಳನ್ನು ಈಡೇರಿಸುವಂತವಾಗಿರು ತ್ತವೆ.

**೭. ಚಕ್ರಲಕ್ಷಣ** ತಿರುಪಿದ ಚಿಹ್ನೆಯಿಂದ ಕೂಡಿದ ಗುಣಲಕ್ಷಣಗಳನ್ನು ಹೊಂದಿರುವಂತಹವುಗಳೇ ಚಕ್ರಗಳು. ಈ ಶಿಲೆಗಳು ಚಕ್ರದ ಚಿಹ್ನೆಯನ್ನು ಮಾತ್ರವಲ್ಲದೆ ವಿಷ್ಣುವಿನ ದಿವ್ಯಶಸ್ತ್ರಾಸ್ತ್ರಗಳು ಹಾಗೂ ಆಭರಣಗಳ ಪ್ರತೀಕವನ್ನೂ ಎತ್ತಿತೋರಿಸುತ್ತದೆ. ಶಾಲಗ್ರಾಮ ಪರೀಕ್ಷಾ ಕೃತಿಗಳು ಮುಖ್ಯವಾಗಿ ಈ ಚಕ್ರದ ಲಕ್ಷಣಗಳನ್ನೇ ವಿವರಿಸುತ್ತವೆ. ಕೆಲವೊಂದು ಶಾಲಗ್ರಾಮಶಿಲೆಗಳು ಕೂರ್ಮದ ಹಾಗೆ ಪ್ರತಿಬಿಂಬಿಸುವವು, ಕೆಲವೊಂದು ಶಂಖದ ಹಾಗೆ. ಕೆಲವು ಶಾಲಗ್ರಾಮಗಳ ಮೇಲೆ ಲಿಂಗದ ಗುರುತುಗಳು, ಕೆಲವೊಂದು ವಾರಾಹದಂತೆ, ಇನ್ನು ಕೆಲವು ಮೀನಿನ ಹಾಗಿನ ರೂಪದಿಂದಿವೆ ಅಥವಾ ರೂಪವನ್ನು ಹೋಲುತ್ತವೆ. ಈ ಎಲ್ಲಾ ರೂಪಗಳೂ ವಿಷ್ಣುವಿನ ಅವತಾರದ ಅಂಶಗಳೆಂದೇ ಗುರುತಿಸಲ್ಪಟ್ಟದ್ದು, ಇವೆಲ್ಲವೂ ಅವವುಗಳ/ ಆಯಾ ಗುರುತುಗಳನ್ನು ಅವಲಂಬಿಸಿಕೊಂಡಿವೆ. ಈ ಗುಣವಿಶೇಷತೆಗಳನ್ನು ಗುರುತಿಸಿಕೊಂಡಾಗ ಮತ್ಸ್ಯ ಶಾಲಗ್ರಾಮ ಶಿಲೆಯು ದೀರ್ಘಾಯುಷ್ಯ ಮತ್ತು ಅಭಿವೃದ್ಧಿಯನ್ನು ಕೊಡತಕ್ಕದ್ದು, ಕೂರ್ಮ ಶಾಲಗ್ರಾಮ ಶಿಲೆಯು ಸಂತಾನಭಾಗ್ಯ ಮತ್ತು ಸಂಪತ್ತನ್ನು ಕರುಣಿಸುವುದು. ವಾರಾಹ ಶಾಲಗ್ರಾಮವು ಭಜಕನಿಗೆ ಅತ್ಯುನ್ನತ ಪದವಿಯನ್ನು ಕರುಣಿಸುತ್ತದೆ. ವಾಮನ ಶಾಲಗ್ರಾಮವು ಎಲ್ಲ ಪಾಪಗಳನ್ನು ನಾಶ ಮಾಡುತ್ತದೆ. ನರಸಿಂಹ ಶಾಲಗ್ರಾಮವು ಭಯವನ್ನು ಮತ್ತು ಚಿಂತೆ/ಅಪಾಯಗಳನ್ನು ಹೊಡೆದೋಡಿಸುತ್ತದೆ. ಈ ಎಲ್ಲಾ ಚಿಹ್ನೆ, ಲಕ್ಷಣಗಳು ಶಾಲಗ್ರಾಮದಲ್ಲಿ ಗೆರೆಯ ರೂಪದಲ್ಲಿ, ಉಜ್ಜಿದ ರೀತಿಯಲ್ಲಿ ಅಥವಾ ಕಲೆಗಳ ರೂಪದಲ್ಲಿ ನಮೂದಿತವಾಗಿರುತ್ತವೆ.

# 4. ಶಾಲಗ್ರಾಮಪರೀಕ್ಷಾ ವಿಧಾನ

ಸಾಮಾನ್ಯವಾಗಿ, ಶಾಲಗ್ರಾಮಶಿಲೆಗಳನ್ನು ಸರಿಯಾಗಿ ಪರಿಶೀಲನೆ ನಡೆಸಿ, ಮತ್ತೆ ಅವುಗಳನ್ನು ಪೂಜಿಸಬೇಕು. ಪರೀಕ್ಷೆ ಮಾಡಬೇಕಾದ ಅಂಶಗಳೆಂದರೆ– ಅದರ ಗಾತ್ರ ಮತ್ತು ಅದರ ಬಣ್ಣ, ಚಕ್ರಗಳ ಸಂಖ್ಯೆ ಮತ್ತು ಅವುಗಳ ಸ್ಥಾನ, ಮೂರ್ತಿಯಲ್ಲಿಯ ಬಿರುಕುಗಳು, ಚಿಹ್ನೆಗಳು (ಕೂದಲಿನಾಕಾರವಾದ) ಹಾಗೂ ರಂಧ್ರಗಳು ಈ ಎಲ್ಲಾ ಅಂಶಗಳನ್ನು ಗುರುತಿಸಬೇಕು.

ಈ ಎಲ್ಲಾ ಅನೇಕ ಸಂಖ್ಯೆಯ ಶಾಲಗ್ರಾಮಗಳಲ್ಲಿ ಅದರಲ್ಲೂ ಮೂರು ಬಗೆಯ ಶಾಲಗ್ರಾಮಶಿಲೆಗಳು ಅತ್ಯಂತ ಪವಿತ್ರವಾಗಿವೆ.

ವಿಷ್ಣು ಶಾಲಗ್ರಾಮ– ಇದನ್ನು ಹೂಮಾಲೆಯಂತಿರುವ ಚಕ್ರದ ರೂಪದಿಂದ ಗುರುತಿಸಲ್ಪಡಬಹುದು. ಹಾಗೂ ಚಕ್ರ, ಶಂಖ, ಗದಾ ಮತ್ತು ಪದ್ಮದ ಗುರುತಿಸಿಂದಲೂ ಗುರುತಿಸಲ್ಪಡಬಹುದು.

ಲಕ್ಷ್ಮೀನರಸಿಂಹ ಶಾಲಗ್ರಾಮ– ವದನದಲ್ಲಿ ಅಥವಾ ತೆರೆದ ಬಾಯಿಯ ಎಡಭಾಗದಲ್ಲಿ ಎರಡು ಚಕ್ರ ಗಳಿದ್ದು ದೇಹದ ತುಂಬಾ ಸಣ್ಣಸಣ್ಣ ಬಿಂದುಗಳನ್ನು ಹೊಂದಿದ್ದಲ್ಲಿ ಲಕ್ಷ್ಮೀನೃಸಿಂಹನೆಂದೂ ಗುರುತಿಸಬಹುದು.

ಮತ್ಸ್ಯಮೂರ್ತಿ ಶಾಲಗ್ರಾಮ– ಮೀನಿನಾಕಾರವಾಗಿರುವ ಉದ್ದನೆಯ ಶಿಲೆಯಲ್ಲಿ ಒಂದೆಡೆ ತೆರೆದ ಬಾಯಿಯಿದ್ದು ಎರಡು ಚಕ್ರಗಳಿಂದ ಕೂಡಿರುತ್ತದೆ. ಈ ಎರಡು ಚಕ್ರಗಳಲ್ಲಿ ಒಂದು ಚಕ್ರವು ಒಳಮುಖ ದಿಂದಿದ್ದು, ಇನ್ನೊಂದು ಹೊರಮುಖದಲ್ಲಿರುತ್ತದೆ, ಬಿಂದುಗಳು ಹಾಗೂ ಸಣ್ಣಸಣ್ಣ ಬಿಂದುಗಳು ದೇಹ ತುಂಬ ಇದ್ದು ಕಾಲಿನ ಅಚ್ಚಿನಂತೆ ಇರುತ್ತವೆ.

ಯಾವ ಶಾಲಗ್ರಾಮದ ಮೇಲ್ಮುಖದಲ್ಲಿ ಎರಡು ಚಕ್ರಗಳಿದ್ದು, ಆ ಶಾಲಗ್ರಾಮವು ತೆರೆದ ಬಾಯಿ ಯದೇ ಇರುವುದೋ ಅಂತಹ ಶಾಲಗ್ರಾಮವು ಉಗ್ರ ಶಾಲಗ್ರಾಮವು ಹಾಗೂ ಅಂತಹ ಶಾಲಗ್ರಾಮಗಳ ಪೂಜೆಯನ್ನು ಮಾಡದಿರುವುದೇ ಲೇಸು ಅಥವಾ ಅತ್ಯಂತ ಜಾಗರೂಕತೆ ಮತ್ತು ಕ್ರಮಬದ್ಧವಾಗಿ ಪೂಜಿಸಲ್ಪಡ ಬೇಕು. ಮತ್ಸ್ಯಮೂರ್ತಿ ಶಾಲಗ್ರಾಮದ ಬಾಲದಲ್ಲಿ ಚಕ್ರವಿದ್ದರೆ ಅಂತಹ ಮೂರ್ತಿಯನ್ನು ಪೂಜಿಸುವುದು ಉತ್ತಮ.

ಶಾಲಗ್ರಾಮದಲ್ಲಿ ಕೆಲವೊಂದು ಶಾಲಗ್ರಾಮಗಳು ಉತ್ಕೃಷ್ಟ ಹಾಗೂ ಆಸಕ್ತಿಯಿಂದ ಕೂಡಿರುವವುಗಳು. **'ಜ್ವಾಲಾ ನರಸಿಂಹ'** ಶಾಲಗ್ರಾಮಶಿಲೆಯು ಬೆಳಕಿನ ಎದುರು ಬದಿ ಹಿಡಿದಾಗ ಬೆಂಕಿಯ ಜ್ವಾಲೆಯಂತೆ ಗೋಚರಿಸುವುದು. **'ರತ್ನಗರ್ಭ'** ಶಾಲಗ್ರಾಮಶಿಲೆಯಲ್ಲಿ ಪ್ರಕಾಶಮಾನವಾದ ನೀಲಬಣ್ಣವು ಸೂರ್ಯನ ಎದುರು ಹಿಡಿದಾಗ ಗೋಚರಿಸುವುದು. ವಿಷ್ಣುವಿನ ಹತ್ತು ಅವತಾರಗಳನ್ನೂ ಈ ಶಾಲಗ್ರಾಮಶಿಲೆಯಲ್ಲಿ ಕಾಣಬಹುದು. **'ಲಾಜಾವರ್ತ'** ಶಾಲಗ್ರಾಮ ಶಿಲೆಯು ಸೂರ್ಯನ ಎದುರಾಗಿ ಹಿಡಿದಾಗ ಸಾಗರದ ವರ್ಣ ವನ್ನು ಕಾಣಬಹುದು. **'ದಕ್ಷಿಣಾಮೂರ್ತಿ'** ಶಾಲಗ್ರಾಮ ಶಿಲೆಯು ನೋಡಲು ಶಂಖದಂತಿದ್ದು, ಕಪ್ಪುಬಣ್ಣ ದಿಂದ ಕೂಡಿದೆ. **'ಹಿರಣ್ಯಗರ್ಭ'** ಶಾಲಗ್ರಾಮವು ವರ್ತುಲಾಕಾರವಾಗಿದ್ದು (ದುಂಡನೆಯದಾಗಿದ್ದು) ಹಿಂಭಾಗ ದಲ್ಲಿ ಚಿನ್ನದಂತೆ ಹೊಳೆಯುವ ಎರಡು ಸಣ್ಣ ಬಿಂದುಗಳಿವೆ. **'ವಾಸುದೇವ'** ಶಾಲಗ್ರಾಮಶಿಲೆಯು ಚಕ್ರಧರ ಜಾತಿಯಾಗಿದ್ದು ನೀರಿನ ಹನಿಗಳು ಜೀಳುತ್ತಿರುತ್ತವೆ. ವದನದಲ್ಲಿ ಖಾಲಿ ಜಾಗವಿದ್ದು ಒಂದು ಚಕ್ರವು ಮೇಲ್ಭಾಗದಲ್ಲೂ ಇನ್ನೊಂದು ಚಕ್ರವು ಕೆಳಭಾಗದಲ್ಲೂ ಈ ಎರಡೂ ಚಕ್ರಗಳು ಒಂದೇರೀತಿಯೇ ಮತ್ತೊಂದೂ ಇದೆ. ಒರಟು ಮೈಯುಳ್ಳ, ದೊಡ್ಡದಾದ ಹಾಗೂ ವಿಭಿನ್ನ ವರ್ಣಗಳುಳ್ಳ ಶಾಲಗ್ರಾಮಗಳಿಗಿಂತ, ಸಣ್ಣದಾದ, ನುಣ್ಣಗಿರುವ ಕಡುಬಣ್ಣದ ಶಾಲಗ್ರಾಮವನ್ನು ಪೂಜಿಸಬೇಕೆಂಬುದು ಬಲವಾದ ನಂಬಿಕೆ ಇದೆ. ಹಾಗೆಯೇ, ಇದರಲ್ಲೂ ಸಹ ಒಮ್ಮತವಿಲ್ಲದೆ ಹಲವಾರು ಭಿನ್ನಾಭಿಪ್ರಾಯಗಳೂ ಇವೆ. ಉದಾಹರಣೆಗೆ,

ಸ್ಕಂದಪುರಾಣದ ಹೇಳಿಕೆ ಪ್ರಕಾರ– ಒಬ್ಬನ ಮಂತ್ರಸಿದ್ಧಿ ಆಗಬೇಕಾದರೆ ಆತನು ನುಣುಪಾದ ಹಾಗೂ ಹೊಳಪಿನಿಂದ ಕೂಡಿರುವ ಶಾಲಗ್ರಾಮಶಿಲೆಯನ್ನು ಆರಾಧಿಸಬೇಕು; ಯಶಸ್ಸನ್ನು ಸಂಪಾದಿಸಬೇಕಾದರೆ ಕಪ್ಪಾಗಿರುವ ಶಾಲಗ್ರಾಮವನ್ನು ಆರಾಧಿಸಬೇಕು; ಪಾಪನಾಶವಾಗಲು/ ಮೋಕ್ಷ ಸಂಪಾದಿಸಲು ಬಿಳಿಬಣ್ಣದ ಶಾಲಗ್ರಾಮಶಿಲೆಯನ್ನು ಪೂಜಿಸ ಬೇಕು; ಸಂತಾನಪ್ರಾಪ್ತಿಗಾಗಿ ಹಳದಿಬಣ್ಣವಿರುವ ಶಾಲಗ್ರಾಮವನ್ನು ಆರಾಧಿಸಬೇಕು; ಅಭ್ಯುದಯ ಹೊಂದಲು ಸಂಪತ್ತನ್ನು ಗಳಿಸುವ ಅಪೇಕ್ಷೆಯುಳ್ಳವನು ನೀಲವರ್ಣದ ಶಿಲೆಯನ್ನು ಪೂಜಿಸಬೇಕು; ಕೆಂಪಾದ ಶಿಲೆಯನ್ನು ಪೂಜಿಸಿದವನಿಗೆ ಅನಾರೋಗ್ಯವು ಬಾಧಿಸುವುದು; ಒರಟಾಗಿರುವ ಶಿಲೆಯನ್ನು ಪೂಜಿಸುವುದರಿಂದ ಭಯ ಮತ್ತು ಚಿಂತೆಯಿಂದ ಪೀಡಿತನಾಗುತ್ತಾನೆ; ಒಂದೇ ವದನವುಳ್ಳ ಶಿಲೆಯನ್ನು ಪೂಜಿಸುವವನಿಗೆ ದಾರಿದ್ರ್ಯವುಂಟಾಗಬಹುದು; ದೊಡ್ಡ ಶಾಲಗ್ರಾಮವನ್ನು ಭಜಿಸುವವನ ಆಯುಷ್ಯವು ಕ್ಷೀಣವಾಗುವುದು; ಕಂದುಮಿಶ್ರಿತ ಹಳದಿಯಾಗಿರುವ ಶಿಲೆಗಳು, ಮಿಶ್ರಬಣ್ಣದ ಶಿಲೆಗಳು, ತುಂಡಾದ ಶಿಲೆಗಳು, ಅನೇಕ ಚಕ್ರಗಳಿಂದ ಕೂಡಿರುವ ಶಿಲೆಗಳು –ಇವುಗಳ ಆರಾಧನೆಯನ್ನು ಮಾಡದಿರುವುದು ಲೇಸು.

ಇನ್ನೊಂದು ಪುರಾಣವು– ಸಾಧಾರಣ ಗಾತ್ರದ, ಸಣ್ಣದೂ ಅಲ್ಲದ, ದೊಡ್ಡದೂ ಅಲ್ಲದ ಶಾಲಗ್ರಾಮವನ್ನು ಆರಾಧಿಸಬಹುದು ಎಂದು ಹೇಳುತ್ತದೆ. ಯಾವನು ಶಾಲಗ್ರಾಮವನ್ನು ಪೂಜಿಸುತ್ತಾನೋ ಅವನು ಆ ಶಿಲೆಯು ಯಾವ ರೀತಿಯದ್ದು/ವಿಷ್ಣುವಿನ ಯಾವ ಅವತಾರದ ರೂಪ ಎಂಬುದನ್ನು ಚೆನ್ನಾಗಿ ತಿಳಿದುಕೊಂಡು ಅನಂತರ ಆ ಪವಿತ್ರ ಶಿಲೆಯನ್ನು ಮುಟ್ಟಬೇಕು.

**ವೈಖಾನಸ ಸಂಹಿತಾ** ಪ್ರಕಾರಬಹುವದನದಿಂದ ಕೂಡಿರುವ, ಶಾಲಗ್ರಾಮಶಿಲೆಯು ಎಲ್ಲ ಗುಣಗಳನ್ನೂ ಹೊಂದಿದ್ದು ಪೂಜಿಸಲು ಯೋಗ್ಯವು. ಇದರ ಉಪಯುಕ್ತತೆಯನ್ನು ಸಹ ಇದರಲ್ಲಿ ವರ್ಣಿಸ ಲಾಗಿದೆ.

**ಪದ್ಮಪುರಾಣವು** ಶಾಲಗ್ರಾಮಶಿಲೆಗಳಲ್ಲಿ ಚಕ್ರಗಳಿರುವ ಜಾಗ, ಆಸನ ಮತ್ತು ವದನಗಳ ಬಗ್ಗೆ ತಿಳಿಸುತ್ತದೆ. ಬಲಭಾಗದಲ್ಲಿ ಚಕ್ರವಿರುವ ಶಾಲಗ್ರಾಮವು ಉತ್ತಮವು. ವನಮಾಲಾ ಚಿಹ್ನೆ, ಉರುಟು ಮುಖ, ಕಮಲಾದಿ ಚಿಹ್ನೆಗಳುಳ್ಳ ಶಾಲಗ್ರಾಮಗಳು ಹಿತಕಾರಿಗಳು. ಸ್ನಿಗ್ಧವಾಗಿಯೂ, ವೃತ್ತಾಕಾರದ ಶಾಲಗ್ರಾಮಗಳು ನಿತ್ಯವೂ ಸಿದ್ಧಿಯನ್ನೂ, ಸೂಕ್ಷ್ಮಾಕಾರದವು ದಿವ್ಯಫಲವನ್ನೂ ನೀಡುತ್ತವೆ. ಸದಾ ತಂಪಿರುವ ಶಾಲಗ್ರಾಮಗಳು ಸಂತೋಷವನ್ನೀಯುವುದು. ಎತ್ತರ ಮಸ್ತಕದ ಶಾಲಗ್ರಾಮವು ಸರ್ವಸಿದ್ಧಿಯನ್ನೂ ನೀಲವರ್ಣದವುಗಳು ಕೀರ್ತಿಯನ್ನೂ, ಬಿಳಿ ಬಣ್ಣದ ಶಾಲಗ್ರಾಮವು ಮೋಕ್ಷವನ್ನೂ, ಕೆಂಪಾಗಿರುವ ಶಿಲೆಯು ರಾಜ್ಯಪ್ರಾಪ್ತಿಯನ್ನೂ ನೀಡುತ್ತವೆ.

**ಅಗ್ನಿಪುರಾಣವು** ಶಿಲೆಗಳ ಗಾತ್ರ, ಆಕಾರ ಮತ್ತು ವರ್ಣಗಳ ಬಗ್ಗೆ ಮತ್ತು ಅವುಗಳ ಗುಣವಿಶೇಷಗಳ ಬಗ್ಗೆ ತಿಳಿಹೇಳುತ್ತದೆ.

**ನರಸಿಂಹಪುರಾಣವು** ಶಾಲಗ್ರಾಮಶಿಲೆಯು ಕೊಡೆಯಂತಿದ್ದು, ಅಂತಹ ಶಿಲೆಯನ್ನು ಪೂಜಿಸಿದಲ್ಲಿ ಅದು ಸರ್ವಾಧಿಪತ್ಯವನ್ನೂ, ದುಂಡನೆಯ ಶಾಲಗ್ರಾಮಶಿಲೆಯು ಅಗಾಧ ಸಂಪತ್ತನ್ನೂ, ತೆಳುವಾಗಿರುವ ಶಿಲೆಯು ಗಾಢ ಚಿಂತೆಯನ್ನೂ, ತುಂಡಾದಂತೆ ಕಾಣುವ ಶಿಲೆಯ ಪೂಜೆಯು ಮರಣವನ್ನೂ, ಶಿಲೆಯು ಬಾಗಿ ಚಾಚಿಕೊಂಡಿದ್ದಲ್ಲಿ ಅಂತಹವು ಬಡತನವನ್ನೂ, ಅಲುಗಾಡುವ ಶಾಲಗ್ರಾಮವು ಸಹ ದುಃಖವನ್ನೂ, ಕಣ್ಣಿನಂತೆ ಅರಸಿನ ಗುರುತುಗಳಿದ್ದಲ್ಲಿ ನಷ್ಟವನ್ನೂ, ಒಂದರ ಮೇಲೊಂದರಂತೆ ಚಕ್ರಗಳಿರುವ ಶಿಲೆಯನ್ನು ಪೂಜಿಸಿದಲ್ಲಿ ಆತನಿಗೆ ಕಾಯಿಲೆಯನ್ನೂ, ವದನವು ಮೇಲ್ಮುಖವಾಗಿದ್ದು ತೆರೆದುಕೊಂಡಿದ್ದಲ್ಲಿ ಅದರಿಂದ ಮೃತ್ಯುವೂ, ಶಾಲಗ್ರಾಮವು ಒಳಗೊಳಗೇ ಛಿದ್ರಗೊಂಡು ಪುಡಿಯಾಗಿದ್ದಲ್ಲಿ ಆರಾಧಕನ ಸಂಬಂಧಿಗಳಿಗೆ– ಮಕ್ಕಳಿಗೆ ಸಾವೂ ಉಂಟಾಗುವುದು ಎಂದು ಹೇಳಿದೆ.

# 5. ದ್ವಾರಾವತೀ ಶಿಲೆಗಳ ಪ್ರಭೇಧಗಳು ಹಾಗೂ ವರ್ಜ್ಯ ದ್ವಾರಕಾಶಿಲೆಗಳು

ವೈಷ್ಣವ ಸಂಪ್ರದಾಯದಂತೆ, ದ್ವಾರಾವತೀ ಶಿಲೆಯನ್ನು (ದ್ವಾರಕೆಯ ಗೋಮತೀನದಿಯಲ್ಲಿ ಲಭಿಸು ವಂತಹ ಚಕ್ರಾಣಿಕೆ ಗಳನ್ನು) ಶಾಲಗ್ರಾಮ ಶಿಲೆಯೊಂದಿಗಿಟ್ಟು ಪೂಜಿಸುವುದು ಸರ್ವಶ್ರೇಷ್ಠ. ತದನಂತರದ, ಎಲ್ಲ ಶಿಲೆಗಳೂ ಕೃಷ್ಣನದ್ದೇ ವಿಶೇಷವಾದ ಅವತಾರಗಳೆಂದು ಭಾವಿಸಲಾಗಿದೆ. ಆದರೆ ಶಾಲಗ್ರಾಮಶಿಲೆಯನ್ನು ಪೂಜಿಸುವ ಹಾಗೆ ಈ ದ್ವಾರಾವತೀ (ಚಕ್ರಾಣಿಕೆ)ಶಿಲೆಯನ್ನು ಪೂಜಿಸುವ ಕ್ರಮ ವಿಸ್ತಾರವಾಗಿ ಹಬ್ಬಿಕೊಂಡಿಲ್ಲ ಅಥವಾ ಇದುವರೆಗೆ ಇದರ ಆವಶ್ಯಕತೆ ಕಂಡು ಬಂದಿರುವುದಿಲ್ಲ. ಈ ದ್ವಾರಕಾಶಿಲೆಯನ್ನು ಸೌರಾಷ್ಟ್ರ, ಬಂಗಾಳ ಹಾಗೂ ಮಹಾರಾಷ್ಟ್ರ ರಾಜ್ಯಗಳ ವೈಷ್ಣವ ಸಂಪ್ರದಾಯಸ್ಥರು ಆರಾಧಿಸುತ್ತಾರೆ ಅಲ್ಲದೆ ಕರ್ನಾಟಕ ರಾಜ್ಯದ ಮಾಧ್ವಸಂಪ್ರದಾಯಸ್ಥರು ಇದನ್ನು ಗೌರವದಿಂದ ಪೂಜಿಸುತ್ತಾರೆ. ಈ ದ್ವಾರಾವತೀಶಿಲೆಗಳು ಶಾಲಗ್ರಾಮ ಶಿಲೆಗಳಂತೆ ಗೃಹಸ್ಥರ ಮನೆಯಲ್ಲಾಗಲೀ ಅಥವಾ ದೇವಾಲಯಗಳಲ್ಲಾಗಲೀ ಥಕ್ಕನೆ ಕಾಣಸಿಗುವು ದಿಲ್ಲ. ಈ ಶಿಲೆಗಳು ಬೆಳ್ಳನೆಯ ಬಣ್ಣದಿಂದ ಕೂಡಿದ್ದು, ದೊಡ್ಡ ಆಕಾರದಲ್ಲೂ ಸಣ್ಣ ಆಕಾರದಲ್ಲೂ ಇದ್ದು -ಇವುಗಳು ಚಕ್ರಗಳ ಚಿಹ್ನೆಯಿಂದ ಕೂಡಿಕೊಂಡಿರುತ್ತದೆ. ದ್ವಾರಕಾಶಿಲೆಯಲ್ಲಿ ವದನಗಳಿರದೆ ಒಂದು ವೇಳೆ ವದನಗಳು ಇದ್ದರೂ ಅವುಗಳ ಆವಶ್ಯಕತೆ ಇರುವುದಿಲ್ಲ. ವೈಷ್ಣವ ಸಂಪ್ರದಾಯದಂತೆ ಈ ಶಿಲೆಗಳನ್ನು ಶಾಲಗ್ರಾಮಶಿಲೆಗಳೊಂದಿಗಿಟ್ಟು ಪೂಜಿಸುವ ಕ್ರಮವಿದೆ ಎಂದು ವೈಷ್ಣವಗ್ರಂಥದಲ್ಲೂ ಹೇಳಲಾಗಿದೆ.

ಈ ದ್ವಾರಕಾಶಿಲೆಯಲ್ಲಿ ಚಕ್ರದ ಚಿಹ್ನೆಯ ಅಸ್ತಿತ್ವವೇ ಅತ್ಯಂತ ಪ್ರಮುಖ ಅಂಶವಾಗಿದೆ ಮತ್ತು ಆದುದರಿಂದಲೇ ಇದನ್ನು 'ಚಕ್ರಾಂಕಿತಶಿಲಾ' ಎಂದು ಕರೆಯುತ್ತಾರೆ.

**ಗರುಡಪುರಾಣ**ದಲ್ಲಿ ಹೇಳಿದ ಹಾಗೆ- ಈ ದ್ವಾರಾವತೀಶಿಲೆಯಲ್ಲಿ ಹನ್ನೆರಡು ವಿಧಗಳಿದ್ದು, ಇವುಗಳನ್ನು ಚಕ್ರಗಳ ಸಂಖ್ಯೆಯ ಆಧಾರದಲ್ಲಿ ಮತ್ತು ವರ್ಣದ ಮೇಲೆ ಹಾಗೂ ವಿಧಗಳ ಮೇಲೆ ಪ್ರತ್ಯೇಕಿಸಿರುತ್ತಾರೆ. ಒಂದು ವೇಳೆ ಈ ಶಿಲೆಯಲ್ಲಿ ಒಂದೇ ಚಕ್ರದ ಚಿಹ್ನೆಯಿದ್ದಲ್ಲಿ ಅಂತಹ ಶಿಲೆಯನ್ನು 'ದೇವೇಶ' ಎಂದೂ, ೨ ಚಕ್ರಗಳನ್ನು ಹೊಂದಿದ್ದಲ್ಲಿ 'ಸುದರ್ಶನ' ಎಂದೂ, ೩ ಚಕ್ರವಿದ್ದಲ್ಲಿ 'ಅನಂತ'ನೆಂದೂ, ೪ ಚಕ್ರಗಳಿದ್ದಲ್ಲಿ ಆ ಶಿಲೆಯು 'ಜನಾರ್ದನ'ನೆಂದೂ, ೫ ಚಕ್ರಗಳಿದ್ದಲ್ಲಿ 'ವಾಸುದೇವ'ನೆಂದೂ, ೬ ಚಕ್ರಗಳಿದ್ದಲ್ಲಿ 'ಪ್ರದ್ಯುಮ್ನ' ನೆಂದೂ, ೭ ಚಕ್ರಗಳಿದ್ದಲ್ಲಿ 'ಬಲರಾಮ'ನೆಂದೂ, ೮ ಚಕ್ರಗಳಿದ್ದಲ್ಲಿ 'ಪುರುಷೋತ್ತಮ'ನೆಂದೂ, ೯ ಚಕ್ರವಿದ್ದ ಶಿಲೆ 'ನವವ್ಯೂಹ'ನೆಂದೂ, ೧೦ ಚಕ್ರಗಳಿರುವ ಶಿಲೆ 'ದಶಾವತಾರ'ವೆಂದೂ, ೧೧ ಚಕ್ರವಿದ್ದಲ್ಲಿ 'ಅನಿರುದ್ಧ' ನೆಂದೂ, ೧೨ ಚಕ್ರಗಳಿದ್ದಲ್ಲಿ 'ದ್ವಾದಶಾತ್ಮಮ' ಎಂದೂ ಪರಿಗಣಿಸಲ್ಪಟ್ಟಿದೆ. 'ನವವ್ಯೂಹ'ವೆಂಬ ಶಿಲೆಯು ವಿಷ್ಣುವಿನ ೯ ಅವತಾರಗಳ ಪ್ರತೀಕ- ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಹಯಗ್ರೀವ, ವಿಷ್ಣು, ನೃಸಿಂಹ ಮತ್ತು ವಾರಾಹ. ಇದರಲ್ಲಿಯ ಮೊದಲ ನಾಲ್ಕು ರೂಪಗಳು 'ಚತುರ್ವ್ಯೂಹ' ಎಂದು ಪರಿಗಣಿಸಲ್ಪಟ್ಟಿವೆ. **ಕಪಿಲಾ ಪಂಚರತ್ನ**ದ ತಂತ್ರಸಿದ್ಧಾಂತ ವಿಭಾಗದ ಪ್ರಕಾರ ವಿಷ್ಣುವಿನ ಈ ಹನ್ನೆರಡು ಮುಖ್ಯರೂಪಗಳು, ಈ ಒಂಬತ್ತು ರೂಪಗಳಿಂದಲೇ ಬಂದಿವೆ ಎಂದು ಪರಿಗಣಿಸಲಾಗಿದೆ.

ವಿಷ್ಣುದೇವರ ದ್ವಾದಶಾವತಾರಗಳನ್ನು 'ವ್ಯೂಹಾಂತರ' ಎಂದು ಕರೆಯುತ್ತಾರೆ- ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ ಮತ್ತು ದಾಮೋದರ. ಈ ದ್ವಾದಶಮೂರ್ತಿಗಳು ವಿಷ್ಣುವಿನ ಹತ್ತು ಅವತಾರಗಳನ್ನು ಒಗ್ಗೂಡಿಸಿ ಪ್ರತಿನಿಧಿಸು ತ್ತವೆ. ಇದನ್ನೇ 'ಪ್ರಾದುರ್ಭವಗಣ' ಎಂದು ಕರೆಯುತ್ತಾರೆ (ಮತ್ಸ್ಯ, ಕೂರ್ಮ, ವರಾಹ ಇತ್ಯಾದಿ.)

ಪುರಾಣಗಳು ಈ ೧೨ ದ್ವಾರಾವತೀಶಿಲೆಗಳನ್ನು ಪೂಜಿಸುವುದರಿಂದ ಯಾವಯಾವ ಫಲಿತಾಂಶ/ ನಿರ್ದಿಷ್ಟ ಲಾಭವನ್ನು ಗಳಿಸುತ್ತಾರೆ ಎಂಬುದನ್ನು ಸಹ ತಿಳಿಸಿವೆ. ಮತ್ತು ಅದರಲ್ಲೂ ಮುಖ್ಯವಾಗಿ– ಮೋಕ್ಷ, ಜನ್ಮ ಮತ್ತು ಮೃತ್ಯುಭಯದಿಂದ ಪಾರಾಗುವಿಕೆ, ಮನೋಭೀಷ್ಟಸಿದ್ಧಿ, ಉನ್ನತೋನ್ನತ ಶ್ರೇಯಸ್ಸು/ಅಭಿವೃದ್ಧಿ, ಶತ್ರುನಾಶ, ಧನಧಾನ್ಯವೃದ್ಧಿ, ಪುತ್ರಸಂಪ್ರಾಪ್ತಿ, ಚಿಂತಿತಮನೋಭೀಷ್ಟಸಿದ್ಧಿ/ಗುರಿಸಾಧನೆ, ದೇವಾದಿದೇವತೆಗಳಿಗೂ ಕಷ್ಟದಲ್ಲಿ ದೊರಕುವಂತಹ ಪುಣ್ಯಫಲಗಳು, ಸರ್ವಾಧಿಪತ್ಯ ಹಾಗೂ ಸಂಪದಭಿವೃದ್ಧಿ, ರಾಜಯೋಗ ಹಾಗೂ ಸತ್ತ ಅನಂತರ ಸಿಕ್ಕುವ ಉತ್ತಮ ಸ್ಥಾನ (ಸ್ವರ್ಗಪ್ರಾಪ್ತಿ) ಇತ್ಯಾದಿಗಳು. ಯಾವ ದ್ವಾರಾವತೀಶಿಲೆಯಲ್ಲಿ ಅನೇಕ ಚಕ್ರಗಳಿದ್ದು, ಅದನ್ನು ಪೂಜಿಸುವ ಸಂದರ್ಭದಲ್ಲಿ ಯಾವುದನ್ನು ಬಹು ಕಾಲದಿಂದ ಬೇಡುತ್ತಿರುತ್ತಾನೋ ಅದನ್ನು ಪಡೆಯುತ್ತಾನೆ.

ಅನುಪಸಿಂಹನು ಬರೆದ 'ಪ್ರಹ್ಲಾದಸಂಹಿತೆ'ಯಲ್ಲಿ ಶಾಲಗ್ರಾಮವಿಧಗಳ ಮೊದಲ ಕೆಲವು ಹೆಸರುಗಳು ವಿಭಿನ್ನವಾಗಿರು ವುದನ್ನು ಕಾಣಬಹುದು. ಒಂದು ಚಕ್ರವನ್ನು ಮಾತ್ರ ಹೊಂದಿರುವ ದ್ವಾರಾವತೀಶಿಲೆಯನ್ನು 'ಸುದರ್ಶನ'ವೆಂದೂ, ೨ ಚಕ್ರವಿರುವ ಶಿಲೆಯನ್ನು 'ಲಕ್ಷ್ಮೀನಾರಾಯಣ' ಎಂದೂ, ೩ ಚಕ್ರಗಳಿದ್ದಲ್ಲಿ 'ತ್ರಿವಿಕ್ರಮ' ನೆಂದೂ ಮತ್ತು ಇನ್ನುಳಿದ ೯ ಶಿಲೆಗಳ ಹೆಸರು ಮೇಲೆ ಉಲ್ಲೇಖಿಸಿದವೇ ಆಗಿವೆ. ೧೨ಕ್ಕಿಂತ ಹೆಚ್ಚು ಚಕ್ರಗಳನ್ನು ಹೊಂದಿದ ಶಿಲೆಯನ್ನು 'ಅನಂತ' ಎಂದು ಕರೆಯಲಾಗಿದೆ. ದಶಾವತಾರ ಎಂದು ಕರೆದುದನ್ನು ಇಲ್ಲಿ 'ದಶಮೂರ್ತಿ' ಎನ್ನಲಾಗಿದೆ. ೧೨ಕ್ಕಿಂತ ಹೆಚ್ಚು ಚಕ್ರಗಳಿದ್ದಲ್ಲಿ ಹನ್ನೊಂದೇ ಚಕ್ರಗಳಿರುವ ಶಿಲೆಯನ್ನು ಪೂಜಿಸುವುದು ಒಳಿತು.

ದ್ವಾರಾವತೀಶಿಲೆಯಲ್ಲಿ ಬೇರೆಬೇರೆ ವರ್ಣಗಳಿದ್ದು, ಬಿಳಿಯ ಬಣ್ಣದ ಶಿಲೆಯನ್ನು ಪೂಜಿಸುವುದು ಉತ್ತಮ. **ಕಪಿಲಾ ಪಂಚರತ್ನ**ದ ಪ್ರಕಾರ ಕರಿಯ ಅಥವಾ ನೀಲಿ–ಕಪ್ಪುಬಣ್ಣದ ಶಿಲೆಯನ್ನು ಪೂಜಿಸುವುದರಿಂದ ಮೃತ್ಯುಭಯವೂ, ಅರಸಿನ ಹಾಗೂ ಕಂದು ಮಿಶ್ರಿತ ಶಿಲೆಯನ್ನು ಪೂಜಿಸುವುದರಿಂದ ಭೀತಿ ಮತ್ತು ಕ್ಲೇಶವೂ, ವಿಭಿನ್ನವರ್ಣದವುಗಳನ್ನು ಪೂಜಿಸುವುದರಿಂದ ದುಃಖವೂ, ಅರಸಿನ ಬಣ್ಣದವುಗಳು ಸಂಪತ್ತನ್ನೂ, ಧೂಮ ವರ್ಣದವುಗಳ ಪೂಜೆಯಿಂದ ಸಂಪತ್ತಿನ ನಾಶವೂ, ನೀಲವರ್ಣದ ಶಿಲೆಯನ್ನು ಪೂಜಿಸುವುದರಿಂದ ಕೈಗೊಳ್ಳುವ ಕಾರ್ಯಗಳಲ್ಲಿ ವಿಘ್ನವೂ ಉಂಟಾಗುತ್ತದೆ.

**ಸ್ಕಂದಪುರಾಣ**ದ ಪ್ರಕಾರ ಕೇವಲ ಬಿಳಿಯ ವರ್ಣದ ಶಿಲೆಯು ಸರ್ವತೋಮುಖ ಅಭಿವೃದ್ಧಿ ಹಾಗೂ ಉತ್ತರೋತ್ತರ ಶ್ರೇಯಸ್ಸನ್ನು ನೀಡಬಲ್ಲದ್ದಾಗಿದೆ.

**ಗರುಡಪುರಾಣ**ವು ಸ್ವಲ್ಪ ವಿಭಿನ್ನ ರೀತಿಯಲ್ಲಿ ಹೇಳಿದ್ದು, ಬಿಳಿಯ ವರ್ಣದ ಶಿಲೆಯು ಬೇರೆಲ್ಲದಕ್ಕಿಂತ ಉತ್ತಮ ಎನ್ನಲಾಗಿದೆ.

ದ್ವಾರಾವತೀಶಿಲೆಯು ದುಂಡನೆಯದಾಗಿ ಅಥವಾ ಚೌಕಾಕಾರವಾಗಿದ್ದು ಅಂತಹ ಶಿಲೆಯು ತ್ರಿಕೋನ ಮತ್ತು ವಿಭಿನ್ನರೂಪಗಳಿಗಿಂತ ಬಹುಶ್ರೇಷ್ಠವೂ ಅದೃಷ್ಟದಾಯಕವೂ ಆಗಿದ್ದು, ಬಿರುಕಿನಿಂದ ಕೂಡಿದ ಅಥವಾ ತುಂಡಾದ ಶಿಲೆಯ ಪೂಜೆಯು ನಿಷಿದ್ಧ ಹಾಗೂ ಅರ್ಧವೃತ್ತಾಕಾರದ ಶಿಲೆಯು ಸಹ ನಿಷಿದ್ಧ. ಇಂತಹ ಶಿಲೆಗಳು ಪೂಜಿಸುವವನಿಗೆ ಶ್ರೇಯಸ್ಸನ್ನು ತಂದುಕೊಡಲಾರವು.

ಪೂಜೆಗೆ ಅಯೋಗ್ಯವಾದ ಶಾಲಗ್ರಾಮಶಿಲೆಗಳಂತೆಯೇ, ದ್ವಾರಾವತೀಶಿಲೆಯೂ ಸಹ, ಸರಿಯಾಗಿ ಆರಿಸದೇ ಸ್ವಾರ್ಥದಿಂದ ಪೂಜಿಸಿದಾಗ ಕೆಟ್ಟ ಪರಿಣಾಮಗಳನ್ನುಂಟುಮಾಡುತ್ತವೆ. ಅರ್ಧವೃತ್ತಾಕಾರದ ಶಿಲೆಯ ಪೂಜೆಯಿಂದ ಸಂತಾನನಾಶ, ತುಂಡಾದ ಶಿಲೆಯ ಪೂಜೆಯಿಂದ ಕೆಲಸಕ್ಕೆ ಹಾನಿ, ಅನೇಕ ರಂಧ್ರಗಳುಳ್ಳ ಶಿಲೆಯ ಪೂಜೆಯಿಂದ ಬಡತನ ಹಾಗೂ ಅಸಂತೋಷವೂ ಉಂಟಾಗುವುದು. ಗರುಡಪುರಾಣದ ಪ್ರಕಾರ– ತ್ರಿಕೋನಾಕಾರ, ಬೆಸಸಂಖ್ಯೆಯಿಂದ ಕೂಡಿದ ಅಥವಾ ಅರ್ಧವೃತ್ತಾಕಾರವಾಗಿ ಇರುವ ಶಿಲೆಯನ್ನು ಪೂಜಿಸಬಾರದೆಂದು ತಿಳಿಸಿದೆ.

# 6. ಪೂಜೆಗೆ ಅಯೋಗ್ಯವಾದ ಶಾಲಗ್ರಾಮಗಳು

ಪುರಾಣಗ್ರಂಥಗಳು ಪೂಜೆಗೆ ಅನರ್ಹಗಳಾದ ಶಾಲಗ್ರಾಮಶಿಲೆಗಳ ಬಗ್ಗೆ ಮಾಹಿತಿಯನ್ನು ನೀಡಿವೆ. ಶ್ರೀಮನ್ನಾರದೀಯಪುರಾಣವು ಐಹಿಕಫಲವನ್ನು ಬಯಸುವ ಗೃಹಸ್ಥರು ಪೂಜೆ ಮಾಡಬಾರದ ಶಾಲಗ್ರಾಮದ ಬಗ್ಗೆ ಹೀಗೆ ಹೇಳಿದೆ–

ಅಥಾಗ್ರಾಹ್ಯಾನ್ ಪ್ರವಕ್ಷ್ಯಾಮಿ ಶಾಲಗ್ರಾಮಶಿಲಾಗತಾನ್ ।
ಕರಾಲಂ ವಿಕರಾಲಂ ಚ ತಿರ್ಯಕ್ ಚಕ್ರಂ ವಿದಿಙ್ಮುಖಮ್ ॥

ಪೃಥುಚಕ್ರಂ ತೂರ್ಧ್ವಚಕ್ರಂ ಮಧ್ಯಚಕ್ರಂ ಶಿರೋಮುಖಮ್ ।
ಭಿನ್ನಚಕ್ರಂ ಭಗ್ನಚಕ್ರಮಧೋ ವಿಷಮಚಕ್ರಕಮ್ ॥

ವಕ್ರತುಂಡಂ ಬದ್ಧಚಕ್ರಮಚಕ್ರಂ ವಕ್ರಚಕ್ರಕಮ್ ।
ಧೂಮ್ರಂ ತಥಾತಿರಕ್ತಂ ಚ ಕಲಂಕಂ ಮಧುಪಿಂಗಲಮ್ ॥

ಸಂದಿಗ್ಧವರ್ಣಂ ಸ್ಫುಟಿತಂ ಭಗ್ನೋಷ್ಠಂ ನಿದಿತಂ ತಥಾ ।
ಅಂತಃಸ್ಫುಟಿತಭಗ್ನೇ ಚ ದಂತುರಂ ನಿಮ್ನಮಸ್ತಕಮ್ ॥

ಅತಿಸ್ಥೂಲಮತಿಹ್ರಸ್ವಂ ಅಂತಸ್ಸಲಿಲಧಾರಣಮ್ ।
ತ್ರಿಕೋಣಂ ಬಹುರೇಖಾಢ್ಯಂ ಚಿಹ್ನಹೀನಂ ಚಲಾಸನಮ್ ॥

ಅರ್ಧಮುನ್ನತಮುಷ್ಣಂ ಚ ದಗ್ಧಂ ಘೃಷ್ಟಂ ಚ ರೂಕ್ಷಕಮ್ ।
ಛಿದ್ರಾಸನಂ ಬಹುಛಿದ್ರಮಸ್ಫುಟಂ ಐಹಿಕೇಚ್ಛುಭಿಃ ॥

ಪೂಜಾಯಾಂ ವರ್ಜನೀಯಾನಿ ನಿಷ್ಕಾಮಸ್ಯ ನ ದುಷ್ಯತಿ ।
ಏವಂ ಸಂಶೋಧ್ಯ ವಿಧಿವದ್ಗೃಹಸ್ಥಃ ಪೂಜಯೇತ್ಸದಾ ॥

ದೊಡ್ಡ ಮುಖವುಳ್ಳ, ಮುಖವಿಲ್ಲದ, ಅಡ್ಡವಾಗಿ ಚಕ್ರವುಳ್ಳ, ಮೂತಿಗೆ ಮುಖವುಳ್ಳದ್ದು, ದೊಡ್ಡ ಚಕ್ರವುಳ್ಳದ್ದು, ಮೇಲ್ಮುಖಚಕ್ರವಿರುವ, ಸರಿಯಾದ ಚಕ್ರಚಿಹ್ನೆಯಿಲ್ಲದ, ಮುರಿದ ಚಕ್ರಚಿಹ್ನೆ ಹೊಂದಿದ, ವಿಷಮಚಕ್ರವಿರುವ, ಚಕ್ರವಿಲ್ಲದ, ಮೋಟಾದ ಚಕ್ರ ಹೊಂದಿದ, ಧೂಮ್ರವರ್ಣದ, ಅತಿ ಕೆಂಪಾದ, ಕಲಂಕವಿರುವ, ಜೇನಿನ ಬಣ್ಣದ, ಯಾವ ಬಣ್ಣವೆಂದು ತಿಳಿಯಲಿಕ್ಕಾಗದ, ಒಡೆದುಹೋದ, ತುಟಿ ಒಡೆದ, ತುಂಡಾದ, ಎತ್ತರತಗ್ಗಿನಿಂದ ಕೂಡಿದ, ಮೇಲ್ಮುಖದಲ್ಲಿ ಹೊಂಡವಿದ್ದು ತಗ್ಗಾಗಿರುವ, ದೊಡ್ಡ ಗಾತ್ರದ, ಬಹಳ ಗಿಡ್ಡವಾದ, ಯಾವಾಗಲೂ ನೀರನ್ನು ಒಸರುವ, ತ್ರಿಕೋಣಾಕೃತಿಯ, ಬಹುರೇಖೆ ಹೊಂದಿದ, ಸರಿಯಾದ ವದನವಿಲ್ಲದ, ಅರ್ಧ ಎತ್ತರವಿರುವ, ಸುಡಲ್ಪಟ್ಟ, ತಿಕ್ಕಲ್ಪಟ್ಟ, ಒರಟಾದ, ವದನದಲ್ಲಿ ತೂತಿರುವ, ತುಂಬಾ ಛಿದ್ರವಾದ, ಚಿಹ್ನೆ ಸ್ಪಷ್ಟವಾಗಿರದ ಶಾಲಗ್ರಾಮಗಳನ್ನು ಐಹಿಕ ಫಲ ಬಯಸುವ ಗೃಹಸ್ಥರು ಪೂಜಿಸಬಾರದು. ಫಲ ಬಯಸದೇ ಪೂಜಿಸಿದಲ್ಲಿ ಹಾನಿಯಿಲ್ಲ.

ತಿರ್ಯಕ್‌ಚಕ್ರ, ಬದ್ಧಚಕ್ರ, ಕುರೂಪ, ನಿಷ್ಠುರಾಸ್ಯ, ಕರಾಲ, ವಿಕರಾಲ, ಕಪಿಲ, ವಿಷಮಾವರ್ತ, ವ್ಯಾಲಾಸ್ಯ, ಕೋಟರ, ಆಸನಚಲನ, ಭಂಗ, ಮಹಾಸ್ಥೂಲ, ಆಸನೇ ಸುಶಿರಾಂ ಯಸ್ಯ ಚಕ್ರೇನೈಕೇನ ಸಂಯುತಾ । ದರ್ಧರ, ಬಹುಚಕ್ರ, ಭಗ್ನಚಕ್ರ, ಅಧೋಮುಖಿ, ಸಛಿದ್ರಾ, ಸುರಕ್ತಾ, ಬಹುಚಕ್ರಾ, ಬಹುರೇಖ ಸಂಯುಕ್ತಾ, ದೀರ್ಘಚಕ್ರಾ, ಪಂಕ್ತಿಚಕ್ರಾ, ಅಚ್ಛಿನ್ನಾ, ಕ್ರೂರದಂಷ್ಟ್ರಸಮಾಯುಕ್ತಾ, ಸ್ಫೋಟ ಮಿಚ್ಛುದಾಸಂಯುಕ್ತಾ ॥ –ಇವನ್ನು ಪೂಜಿಸಬಾರದೆಂದು ಬ್ರಹ್ಮಪುರಾಣ ಹೇಳಿದೆ.

ಅಂದರೆ, ಅಡ್ಡವಾದ ಚಕ್ರ ಹೊಂದಿದ, ಅಧಿಕಸಂಖ್ಯೆಯ ಚಕ್ರ ಹೊಂದಿದ, ಕುರೂಪವಾದ, ಒರಟಾದ ವಚನವಿರುವ, ದೊಡ್ಡ ಗಾತ್ರದ, ಭಯಾನಕವಾದ, ಹಳದಿ ಕಂದುಮಿಶ್ರಿತ, ಒರಟುಮುರುಟಾದ, ದೊಡ್ಡ ಮುಖವುಳ್ಳ, ಒಳಮೂಲ ಟೊಳ್ಳಾಗಿರುವ, ಸರಿಯಾಗಿ ವದನವಿಲ್ಲದೆ ಅಸ್ಥಿರವಾಗಿ ನಿಲ್ಲುವ, ತುಂಡಾದ, ದೊಡ್ಡದಾದ, ಒಂದು ಚಕ್ರ ಹೊಂದಿದ್ದು, ಕೆಳ ತುದಿಯಲ್ಲಿ ಬಿರುಕುಗೊಂಡ, ಬಿರುಕುಗೊಂಡ, ತುಂಬಾ ಚಕ್ರಾಂಕಿತ ಹೊಂದಿದ, ಕೆಳಮೈಮುಖವುಳ್ಳ, ಛಿದ್ರಗೊಂಡ, ಕಡುಕೆಂಬಣ್ಣದ, ದೊಡ್ಡ ಚಕ್ರವನ್ನು ಹೊಂದಿದ, ಬಹುರೇಖೆಗಳನ್ನು ಹೊಂದಿದ, ಮುರಿದ ಚಕ್ರವನ್ನು ಹೊಂದಿರುವ, ಚಕ್ರಗಳು ಸಾಲುಸಾಲಾಗಿರುವ (ಪಂಕ್ತಿಯಿರುವ), ಬೆಂಕಿಯಿಂದ ಸುಡಲ್ಪಟ್ಟ, ಯಾವ ಚಿಹ್ನೆಯನ್ನೂ ಹೊಂದಿರದ, ನೀರಿನ ಗುಳ್ಳೆಗಳಂತೆ ಉಬ್ಬಿಕೊಂಡಿರುವಂತಹ ಶಾಲಗ್ರಾಮಗಳ ಪೂಜೆಯನ್ನು ಮಾಡಬಾರದು.

ಯಾವ ಶಾಲಗ್ರಾಮವು ನೋಡಲು ಅಹಿತವಾಗಿದ್ದು, ಮುದುಡಿ ನೋಡಲು ಆಕರ್ಷಕವಾಗಿರುವು ದಿಲ್ಲವೋ, ನಿರಾಶೆಯಾಗಿ ಕಾಣುವುದೋ ಅಥವಾ ಯಾವಾಗಲೂ ನೀರೊಸರುತ್ತಾ ಇರುವುದೋ ಅಂತಹ ಶಾಲಗ್ರಾಮಗಳು ಪೂಜೆಗೆ ಅನರ್ಹ. ಅಂತೆಯೇ, ಒರಟಾಗಿ, ವಿಕಾರವಾಗಿರುವುದೋ ಅಂತಹವೂ ಸಹ ಪೂಜೆಗೆ ಅಯೋಗ್ಯವೇ. ಯಾವಾಗ ಗಂಧಲೇಪನವನ್ನು ಶಾಲಗ್ರಾಮಶಿಲೆಯ ಮೇಲೆ ವಿಲೇಪನ ಮಾದಿದಾಗ, ಆ ವಿಲೇಪನವು ಕೂಡಲೇ ಒಣಗುವುದೋ ಅಂತಹ ಶಾಲಗ್ರಾಮವು ಪೂಜಿಸುವವನಿಗೆ ಶ್ರೇಯಸ್ಸನ್ನು ಉಂಟುಮಾಡುವುದಿಲ್ಲ. ಶಾಲಗ್ರಾಮಶಿಲೆಯು ಯಾವಾಗಲೂ ಬಿಸಿಯಾಗಿರದೆ ತಂಪಾಗಿರಬೇಕು.

**ಯಾ ಶಿಲಾನಾಂ ಪೂಜನೀಯಾನಾಂ ದ್ವಾರಮಾನಂ ತಥೋಚ್ಯತೇ ।**
**ವೃತ್ತೇ ಸೂತ್ರಾಷ್ಟಮೋ ಭಾಗ ಉತ್ತಮೋ ಮಧ್ಯಮಾವುಭೌ ।**
**ಭಾಗತ್ರಯಂ ಕನೀಯಾಂಶ್ಚ ಶಾಲಗ್ರಾಮಸ್ಯ ಲಕ್ಷಣಮ್ ॥**

ಶಾಲಗ್ರಾಮಶಿಲೆಯ ಸುತ್ತ ಒಂದು ದಾರವನ್ನು ಸುತ್ತಿದಾಗ, 1/8ಅಂಶ ಅಗಲವಾದ ದ್ವಾರವುಳ್ಳದ್ದಾಗಿ ದ್ದಲ್ಲಿ ಅಂತಹ ಶಾಲಗ್ರಾಮವು ಉತ್ತಮ ಮತ್ತು ಅದೃಷ್ಟದಾಯಕವು. ದ್ವಾರವು ಇದಕ್ಕಿಂತಲೂ ಹೆಚ್ಚಾಗಿ ಕಂಡುಬಂದಲ್ಲಿ ಪೂಜೆಗೆ ಅಯೋಗ್ಯವು. ಯಾವ ಶಿಲೆಯು 1/3ಅಂಶ ಅಗಲವಾದ ದ್ವಾರವನ್ನು ಹೊಂದಿದ್ದರೆ, ಅಂತಹ ಶಿಲೆಯು ಅತಿ ಕೆಟ್ಟ ಫಲಿತಾಂಶ ನೀಡುವವುಗಳಾಗಿವೆ.

ಕೆಲವು ಬಾರಿ ಶಾಲಗ್ರಾಮದ ಈ ಅಗಲವಾದ ದ್ವಾರಕ್ಕೆ ಇದು ಅನ್ವಯಿಸುತ್ತದೆ. ಈ ಅಗಲವಾದ ದ್ವಾರವು ದಾರದ 1/4 ಅಂಶಕ್ಕಿಂತಲೂ ಹೆಚ್ಚಾಗಿದ್ದರೆ, ಅಂತಹ ಶಾಲಗ್ರಾಮವು ಕರಾಲಶಾಲಗ್ರಾಮ. ಅದೇ ಶಾಲಗ್ರಾಮದ ದ್ವಾರವು ಸಪೂರವಾಗಿ ಒಳಮೈ ಟೊಳ್ಳಾಗಿದ್ದು ಅದನ್ನು ಮುಚ್ಚಿಕೊಂಡಿರುವ ಶಾಲಗ್ರಾಮ ಶಿಲೆಯೂ ಸಹ ಪೂಜೆಗೆ ಅಯೋಗ್ಯ. ಶಾಲಗ್ರಾಮವು ಪೂಜಿಸುವವನ 8 ಬೆರಳುಗಳಷ್ಟು ಪ್ರಮಾಣದ ಸುತ್ತಳತೆಯನ್ನು ಹೊಂದಿರಬೇಕು ಎಂಬ ನಿಯಮವಿದೆ. ಇದಕ್ಕಿಂತ ದೊಡ್ಡದಾದ ಶಿಲೆಯನ್ನು ಗೃಹಸ್ಥನು ಮನೆಯಲ್ಲಿಟ್ಟು ಪೂಜಿಸುವಂತಿಲ್ಲ ಹಾಗೂ ದೊಡ್ಡಶಿಲೆಯು ಪೂಜೆಗೆ ಅನರ್ಹ.

**ಇನ್ನೊಂದು ಶಾಸ್ತ್ರದ ಪ್ರಕಾರ–** ಕೆಳಮುಖವಾಗಿ ದ್ವಾರವುಳ್ಳ, ಚಕ್ರವದನವಿರುವ ಅಥವಾ ಮೇಲ್ಮುಖ ದ್ವಾರವುಳ್ಳ, ಅಡ್ಡವಾಗಿ ಚಕ್ರವನ್ನು ಹೊಂದಿದ ಶಾಲಗ್ರಾಮಶಿಲೆಯನ್ನು ಪೂಜಿಸಬಾರದು. ಇಂತಹ ಶಿಲೆಯನ್ನು ಪೂಜಿಸು ವುದರಿಂದ ಪೂಜಿಸುವವನು ಅಸ್ಥಿರವಾಗುತ್ತಾನೆ.

ಪೂಜೆಗೆ ಶಾಲಗ್ರಾಮವನ್ನು ಆಯ್ಕೆ ಮಾದಿಕೊಳ್ಳುವಾಗ, ಆ ಶಾಲಗ್ರಾಮವು ತುಂಬ ಚಿಕ್ಕದಾಗಿರ ಬಾರದು ಅಥವಾ ತುಂಬ ದೊಡ್ಡದಾಗಿರಬಾರದು. ತುಂಬ ದಪ್ಪನೆಯದ್ದಾಗಿರಬಾರದು, ತುಂಬ ತೆಳ್ಳನೆಯೂ ಆಗಿರ ಬಾರದು. ಈ ಬಗ್ಗೆ ಸ್ಕಂದಪುರಾಣದಲ್ಲಿ ಹಲವಾರು ನಿರ್ಬಂಧಗಳನ್ನು ವಿಧಿಸಿರುವುದನ್ನು ಕಾಣ

ಬಹುದು: ಒರಟಾದ, ಸರಿಯಾಗಿರದ, ಕಡು ಕಪ್ಪು ಬಣ್ಣದಿಂದ ಕೂಡಿದ, ತುಂಬ ದೊಡ್ಡ ದ್ವಾರವುಳ್ಳ, ಬಾಗಿದ ಚಾಚಿದ ಹೊರ ಮುಖವುಳ್ಳ, ಚಕ್ರವಿಲ್ಲದ, ಚಕ್ರದ ಮೇಲೊಂದು ಚಕ್ರ ಚಿಹ್ನೆಯಿರುವ, ಚಕ್ರಪಂಕ್ತಿಯಿಂದ ಕೂಡಿದ, ಶಿಲೆಯ ಒಳಗೆ ಪುದಿಯಾಗಿರುವ, ಮೇಲ್ಭಾಗದಲ್ಲಿ ಹೊಂಡ ವಿರುವ, ಶಿಲೆಯ ಒಳಗೆ ನೀರು ತುಂಬಿರುವ, ಅಸ್ಥಿರವಾಗಿ ನಿಲ್ಲುವ, ಕೆಳಮುಖವಾದ ರಂಧ್ರವಿರುವ, ಊದಿದ, ಧೂಮ್ರ ವರ್ಣದ, ಜೇನಿನಂತೆ ಕಂದುಬಣ್ಣ ಹೊಂದಿರುವ ಶಾಲಗ್ರಾಮಶಿಲೆಯ ಆರಾಧನೆ ಮಾಡಬಾರದು.

ಈ ಮೇಲೆ ಹೇಳಿರುವ ಎಲ್ಲಾ ನಿರ್ಬಂಧಗಳು ಯಾವ ಗೃಹಸ್ಥನು ಐಹಿಕ(ಕಾಮ್ಯ)ಫಲಗಳನ್ನು ಬಯಸುತ್ತಾನೋ ಆತನಿಗೆ ಮಾತ್ರ ಅನ್ವಯಿಸುವುದು; ಅಂತೆಯೇ ಯಾವನು ಯಾವ ಅಪೇಕ್ಷೆಯನ್ನೂ ಬಯಸದೇ ನಿತ್ಯಕರ್ಮ ಎಂದೆಣಿಸಿ ಪೂಜಿಸುವನೋ ಅವನು ಪೂಜಿಸಿದರೆ ದೋಷವಿಲ್ಲ ಹಾಗೂ ಈ ಮೇಲೆ ಹೇಳಿದ ನಿರ್ಬಂಧಗಳು ಈತನಿಗೆ ಅನ್ವಯಿಸ ಲಾರದು.

ಆಯಾಯ ಜಾತಿ ಮತ್ತು ವರ್ಣಗಳಿಗೆ ಅನುಸಾರವಾಗಿ, ಆಯಾಯ ರೀತಿ ಮತ್ತು ಸಂಖ್ಯೆಗಳಲ್ಲಿ ಶಾಲಗ್ರಾಮಶಿಲೆ ಯನ್ನು ಪೂಜಿಸಬೇಕೆಂದು ಶಾಸ್ತ್ರವು ಹೇಳುತ್ತದೆ.

**ಪ್ರಜಾಪ್ರಕಾಶದಲ್ಲಿ** ಹೇಳಿರುವಂತೆ- ಬ್ರಾಹ್ಮಣರಿಗೆ 'ವಾಸುದೇವಮೂರ್ತಿ' ಶಾಲಗ್ರಾಮವು ಪೂಜೆಗೆ ಯೋಗ್ಯ; (ವಾಸುದೇವ ಶಾಲಗ್ರಾಮವು ಜ್ಞಾನ, ಶಕ್ತಿ, ಐಶ್ವರ್ಯ, ಬಲ, ವೀರ್ಯ ಹಾಗೂ ತೇಜಸ್ಸನ್ನೂ ಕೊಡಬಲ್ಲುದು.) ಕ್ಷತ್ರಿಯರಿಗೆ 'ಸಂಕರ್ಷಣ' ಶಾಲಗ್ರಾಮವೂ; ವೈಶ್ಯರಿಗೆ 'ಪ್ರದ್ಯುಮ್ನ' ಶಾಲಗ್ರಾಮವೂ; ಅಂತೆಯೇ ಶೂದ್ರರಿಗೆ 'ಅನಿರುದ್ಧ' ಶಾಲಗ್ರಾಮವೂ ಪೂಜೆಗೆ ಯೋಗ್ಯ. ಇದರೊಂದಿಗೆ ಬ್ರಾಹ್ಮಣರು ನಾಲ್ಕೂ ಬಗೆಯ ಶಾಲಗ್ರಾಮಗಳನ್ನು, ಕ್ಷತ್ರಿಯರು ಮೂರು ಬಗೆಯವನ್ನೂ, ವೈಶ್ಯರು ಎರಡು ಬಗೆಯ ಶಾಲಗ್ರಾಮಗಳನ್ನು ಹಾಗೂ ಶೂದ್ರರು ಒಂದೇ ಬಗೆಯದನ್ನು ಪೂಜಿಸಬಹುದು ಎಂದು **ವಿಷ್ಣು ಧರ್ಮೋತ್ತರಪುರಾಣವು** ಹೇಳಿದೆ. ಇಂತಹ ನಿಯಮಗಳನ್ನು ಬ್ರಹ್ಮಾಂಡಪುರಾಣವು ಸಹ ಉಲ್ಲೇಖಿಸಿದೆ. ಈ ಪ್ರಕಾರವಾಗಿಯೇ ಯಾರು ಯಾರು ಯಾವಯಾವ ಹಾಗೂ ಎಷ್ಟೆಷ್ಟು ಶಾಲಗ್ರಾಮಗಳನ್ನು ಪೂಜಿಸ ಬಹುದು ಎಂಬುದು 'ಚತುರ್ವ್ಯೂಹ ಸಿದ್ಧಾಂತ' ಪ್ರಕಾರ ಬಂದಿರುತ್ತದೆ.

ಈ ಅಸಂಖ್ಯಾತ ಶಾಲಗ್ರಾಮಗಳನ್ನು ನಾಲ್ಕು ವರ್ಣಗಳ ಪ್ರಕಾರ ವಿಭಾಗಿಸಲಾಗಿದೆ: ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ. ಮತ್ತು ಈ ಎಲ್ಲಾ ಮನುಷ್ಯವರ್ಣಗಳು ಒಬ್ಬನಿಂದ ಸೃಷ್ಟಿಸ ಲ್ಪಟ್ಟಿದ್ದು ಆತನೇ ಪುರುಷ. ಆದರೆ ವೃದ್ಧಗೌತಮರು ಹೇಳುವ ಪ್ರಕಾರ ಬ್ರಾಹ್ಮಣರು ೫ ಶಾಲಗ್ರಾಮ ಗಳನ್ನೂ, ಕ್ಷತ್ರಿಯರು ೮ ಶಾಲಗ್ರಾಮಗಳನ್ನೂ, ವೈಶ್ಯರು ಮತ್ತು ಶೂದ್ರರು ತಲಾ ೭ ಶಾಲಗ್ರಾಮಗಳನ್ನೂ ಪೂಜಿಸ ಬಹುದು. ಹಾಗೆಯೇ, ಸನ್ಯಾಸಿಗಳು ೪ ಶಾಲಗ್ರಾಮಗಳನ್ನು ಪೂಜಿಸಬಹುದೆಂದಿದೆ.

ಬ್ರಾಹ್ಮಣರಿಗೆ– ಲಕ್ಷ್ಮೀನಾರಾಯಣ, ಅನಂತ, ಹಿರಣ್ಯಗರ್ಭ, ಪುರುಷೋತ್ತಮ, ಚತುರ್ಭುಜ = 5

ಕ್ಷತ್ರಿಯರಿಗೆ– ಲಕ್ಷ್ಮೀನಾರಾಯಣ, ಅನಂತ, ಕೃಷ್ಣ, ಅನಿರುದ್ಧ, ಗರುಡಧ್ವಜ, ಗೋಪಾಲ, ರಾಮ, ಶ್ರೀಧರ = 8

ವೈಶ್ಯರಿಗೆ– ಲಕ್ಷ್ಮೀನಾರಾಯಣ, ವಾಸುದೇವ, ಪ್ರದ್ಯುಮ್ನ, ದಾಮೋದರ, ಪೀತಾಂಬರ, ಹರಿ, ಗದಾಧರ = 7

ಶೂದ್ರರಿಗೆ– ಲಕ್ಷ್ಮೀನಾರಾಯಣ, ಮಾಧವ, ಕೃಷ್ಣ, ಅಚ್ಯುತ, ಅನಿರುದ್ಧ, ಕೇಶವ, ಪೀತಾಂಬರ = 7

ಸನ್ಯಾಸಿಗಳಿಗೆ– ನರಸಿಂಹ, ಹಯಗ್ರೀವ, ಮುಕುಂದ, ಮಹಾನೀಲ = 4

# ಶಾಲಗ್ರಾಮ : ಲಕ್ಷಣಗಳು

(ನರಸಿಂಹಪುರಾಣದ ಬ್ರಹ್ಮನಾರದೀಯಸಂವಾದದ ಪ್ರಕಾರ)

1780-1865ರ ವರೆಗೆ ಮೈಸೂರು ರಾಜ್ಯವನ್ನಾಳಿದ ೩ನೆಯ ಕೃಷ್ಣರಾಜ ಒಡೆಯರ್, ಸಂಸ್ಕೃತದಲ್ಲಿ ಬರೆದಂತಹ 'ಶ್ರೀತತ್ತ್ವನಿಧಿ' ಗ್ರಂಥವು ಸವಿಸ್ತಾರವಾದ ಐತಿಹಾಸಿಕಕಾರ್ಯವನ್ನು ಒಂಬತ್ತು ಅಧ್ಯಾಯಗಳಲ್ಲಿ ಬರೆದಿದ್ದು ಅವುಗಳನ್ನು 'ನಿಧಿ' (=ಭಂಡಾರ) ಎಂದು ಕರೆಯಲಾಗಿದೆ. ಇವುಗಳನ್ನು ವಿಸ್ತಾರವಾಗಿ ಸಣ್ಣಸಣ್ಣ ಚಿತ್ರಗಳ ಮೂಲಕ ಉದಾಹರಿಸಿದ್ದು, ಇವುಗಳು ವೇದಾಂತಸಂಪ್ರದಾಯದ ವಿಷಯಗಳಾದ ಆಗಮಶಾಸ್ತ್ರ, ಜ್ಯೋತಿಃಶಾಸ್ತ್ರ, ಸಂಗೀತಶಾಸ್ತ್ರ ಇತ್ಯಾದಿ ಹಿಂದಿನ ಘಟನಾವಳಿಗಳನ್ನೊಳಗೊಂಡಿವೆ. ನೂರಾರು ವರ್ಷಗಳ ಹಳೆಯದಾದ ಮತ್ತು ಮಧ್ಯಕಾಲದ ಕೃತಿ ಮತ್ತು ಗ್ರಂಥಗಳನ್ನು ಆಧರಿಸಿ ಬರೆಯಲಾದ ಈ ಕೃತಿಯು ಇನ್ನೂ ಅಚ್ಚಾಗಿಲ್ಲ. ಇದರಲ್ಲಿಯ 'ವೈಷ್ಣವನಿಧಿ' ಎಂಬ ಅಧ್ಯಾಯವು, ಶಾಲಗ್ರಾಮಶಿಲೆಯನ್ನು ವಿಷ್ಣುವಿನ ಪ್ರತೀಕವೇ ಆಗಿರುವ ಒಂದು ಮಹತ್ತರ ವಸ್ತು ಎಂದು ಬಣ್ಣಿಸುತ್ತದೆ. ಈ ಶಿಲೆಯನ್ನು ದಕ್ಷಿಣ ಭಾರತದವರು ಕರೆಯುವಂತೆ 'ಸಾಲಗ್ರಾಮ' ಎನ್ನುವುದಕ್ಕಿಂತ ಉತ್ತರ ಭಾರತದವರು ಹೇಳುವಂತೆ 'ಶಾಲಗ್ರಾಮ' ಎನ್ನುವುದು ಹೆಚ್ಚು ಪ್ರಶಸ್ತ ಎಂದು ಈ ಕೃತಿಯಲ್ಲಿ ತಿಳಿಸಲಾಗಿದೆ. ನರಸಿಂಹ ಪುರಾಣದ ಬ್ರಹ್ಮನಾರದ ಸಂವಾದದ ಆಧಾರದಲ್ಲಿ ಈ ಪವಿತ್ರಶಿಲೆಯ ಬಗ್ಗೆ ಮಾಹಿತಿ ನೀಡಲಾಗಿದೆ. ಬಿಕಾನೇರಿನ ಮಹಾರಾಜನಾದ ಅನುಪಸಿಂಹನು ಬರೆದ 'ಶಾಲಗ್ರಾಮಪರೀಕ್ಷಾ' ಗ್ರಂಥ ಮತ್ತು 'ಶ್ರೀತತ್ತ್ವನಿಧಿ' ಗ್ರಂಥವನ್ನು ಪರಸ್ಪರ ಹೋಲಿಸಿದಾಗ, ಶ್ರೀತತ್ತ್ವನಿಧಿಯಲ್ಲಿ ಕ್ರಮಬದ್ಧವಾಗಿ ಹೇಳದೆ ಒಟ್ಟಾರೆಯಾಗಿ ಹೇಳಿಕೊಂಡು ಹೋಗಲಾಗಿದೆ. ಆದರೆ, 'ಶಾಲಗ್ರಾಮಪರೀಕ್ಷಾ' ಗ್ರಂಥದಲ್ಲಿ ಅಚ್ಚುಕಟ್ಟಾಗಿ, ಕ್ರಮಬದ್ಧವಾಗಿ ಮೂರು ಪ್ರತ್ಯೇಕ ವರ್ಗಗಳಲ್ಲಿ ಶಾಲಗ್ರಾಮವಿವರಗಳನ್ನು ನಿರೂಪಿಸಲಾಗಿದೆ:

(೧) ದಶಾವತಾರಗಳಿಗೆ ಸಂಬಂಧಿಸಿದ ಮೂರ್ತಿಗಳು, (೨) ಇಪ್ಪತ್ತನಾಲ್ಕು (ಚತುರ್ವಿಂಶತಿ) ಅವತಾರ ಮೂರ್ತಿಗಳು ಮತ್ತು (೩) ಇನ್ನಿತರ ಅವತಾರಗಳು. ವಿಷ್ಣುವಿನ ಈ ಎಲ್ಲ ಅವತಾರವಿವರಗಳೂ 'ಶ್ರೀತತ್ತ್ವನಿಧಿ' ಯಲ್ಲಿ ಬರುವುದಾದರೂ ಇದು ನರಸಿಂಹಪುರಾಣದಲ್ಲಿರುವಷ್ಟೇ ಮಾಹಿತಿಯನ್ನೊಳಗೊಂಡಿದೆ. ಆದರೆ, 'ಶಾಲಗ್ರಾಮಪರೀಕ್ಷೆ'ಯಲ್ಲಿ ಇದರ ಬಗೆಗೆ ವಿವರಿಸುವ ಸಂದರ್ಭದಲ್ಲಿ ಇನ್ನಿತರ ಪುರಾಣಗಳಲ್ಲಿ ದೊರಕುವ ಆಧಾರಗಳನ್ನೂ ಸೇರಿಸಿಕೊಳ್ಳಲಾಗಿದೆ.

ಶಾಲಗ್ರಾಮದ ರೂಪದ ಬಗೆಗೆ ಮಾತ್ರ ಕೊಟ್ಟಂತಹ ಮಾಹಿತಿಯನ್ನು ಒಟ್ಟಾರೆಯಾಗಿಯೂ ಬೇರೆಬೇರೆ ಅವತಾರಗಳನ್ನು ವರ್ಣಿಸುವಾಗಲೂ ಹೇಳಲಾಗಿದೆ. ಈ ಗ್ರಂಥವು ನರಸಿಂಹಪುರಾಣವನ್ನೇ ಆಧರಿಸಿ ಬರೆಯಲಾಗಿದೆ. ಅಲ್ಲದೆ, ಬರೆಯಲು ಬಳಸಿಕೊಂಡ ಕ್ರಮವನ್ನು ಸಹ ವಿವರಿಸಲಾಗಿದೆ. ಅನುಪಸಿಂಹನ ಗ್ರಂಥಕ್ಕೆ ಹೋಲಿಸಿದರೆ ಇದು ಅಷ್ಟೊಂದು ಉತ್ತಮವಾದ ಕೃತಿಯಾಗಿ ಮೂಡಿಬಂದಂತೆ ಅನ್ನಿಸುವುದಿಲ್ಲ. ಆದರೆ ಈ ಕೃತಿಯಲ್ಲಿ, ದಕ್ಷಿಣ ಭಾರತದವರು ಅನುಸರಿಸುವ ಶಾಲಗ್ರಾಮಸಂಪ್ರದಾಯಿಕೆಯನ್ನು ವಿವರಿಸ ಲಾಗಿದೆ.

ಶ್ರೀಕೃಷ್ಣಂ ಗೋಪಿಕಾನಾಥಂ ಪ್ರಣಮ್ಯ ಜಗತಾಂ ಗುರುಮ್ ।
ಗ್ರಂಥಾನ್ ಬಹೂನ್ ಸಮಾಲೋಕ್ಯ ಸಾರಂ ಸಂಗೃಹ್ಯ ಯತ್ನತಃ ॥

ಗರುತ್ಮತೇ ವಿಷ್ಣುನೋಕ್ತಂ ಬ್ರಹ್ಮಣಾ ನಾರದಾಯ ಚ ।
ಶಾಲಗ್ರಾಮಶಿಲಾನಾಂ ತು ಗ್ರಾಹ್ಯಾಗ್ರಾಹ್ಯಫಲಂ ತಥಾ ॥
ದ್ವಾರಂ ಚಕ್ರಂ ತಥಾ ಕ್ಷೇತ್ರಂ ವಕ್ಷ್ಯೇಽಹಂ ಸಾಧುಸಮ್ಮತಮ್ ॥

ನರಸಿಂಹಪುರಾಣದಲ್ಲಿ ಹೇಳಿದಂತೆ, ಶಾಲಗ್ರಾಮ ಉತ್ಪತ್ತಿಯ ಸ್ಥಳವನ್ನು ಕುರಿತು ನಾರದ ಮಹರ್ಷಿಯು ಬ್ರಹ್ಮನನ್ನು ಉದ್ದೇಶಿಸಿ– "ನನಗೆ ಈಗಾಗಲೇ ನೀನು ಹಲವಾರು ವಿಷಯಗಳ ಬಗ್ಗೆ ಜ್ಞಾನವನ್ನು ನೀಡಿರುತ್ತಿ. ಅಂತೆಯೇ, ನೀನು ನನಗೆ ಶಾಲಗ್ರಾಮಶಿಲೆಗಳ ಬಗ್ಗೆ, ಅವುಗಳ ಉತ್ಪತ್ತಿ, ಗುಣಲಕ್ಷಣಗಳು, ಅವುಗಳ ವರ್ಣ ಮತ್ತು ಕ್ಷೇತ್ರ, ವಿಷ್ಣುವಿನ ಯಾವ ಅವತಾರಕ್ಕೆ ಸಂಬಂಧಿಸಿದವು, ಅರ್ಥಾತ್ ಯಾವಯಾವ ಮೂರ್ತಿಗಳಿವೆ ಮತ್ತು ಅವುಗಳ ಲಕ್ಷಣಗಳೇನು ಹಾಗೂ ಅವನ್ನು ಪೂಜಿಸುವವನಗೆ ಯಾವಯಾವ ರೀತಿ ಉಪಯುಕ್ತವಾಗಿರುತ್ತವೆ (ಫಲ ನೀಡುತ್ತವೆ) ಎಂಬುದನ್ನು ದಯವಿಟ್ಟು ವಿಸ್ತಾರವಾಗಿ ನಿರೂಪಿಸಬೇಕು" ಎಂದು ಪ್ರಾರ್ಥಿಸಿ ಕೊಳ್ಳುತ್ತಾನೆ. ಆದರಂತೆ, ಬ್ರಹ್ಮನು ನಾರದನಿಗೆ ಶಾಲಗ್ರಾಮಗಳ ಹುಟ್ಟುವಿಕೆ, ಅವುಗಳ ಗುರುತಿಸುವಿಕೆ, ಅವುಗಳ ವರ್ಣ, ಕ್ಷೇತ್ರ, ಮತ್ತಿತರ ಫಲಾಫಲಗಳ ವಿವರಗಳನ್ನು ಹೇಳತೊಡಗುತ್ತಾನೆ:

ಆಸೀದವಂತಿ ದೇಶೇಷು ನಾಮ್ನಾ ತು ಹರಿಪರ್ವತಃ ।
ಶಾಲಗ್ರಾಮ ಇತಿ ಕ್ಷೇತ್ರೇ ಹರಿಚಕ್ರಶಿಲಾಮಯೇ ॥

ಯಸ್ಯ ಸ್ಮರಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ।
ತತ್ರೈವ ಗಂಡಕಾಖ್ಯಾತಾ ನದೀ ಪಾಪಪ್ರಣಾಶಿನೀ ॥

ಯಜ್ಜಲಸ್ಪರ್ಶಮಾತ್ರೇಣ ವಿಷ್ಣುಸಾಯುಜ್ಯಮಶ್ನುತೇ ।
ತಸ್ಮಿನ್ ಪರ್ವತಮೂಲೇ ತು ಚಕ್ರತೀರ್ಥಂ ಮಹತ್ಸರಃ ॥

ತಸ್ಯಾ ನದ್ಯಾ ನಿದಾನಂ ಚ ಪ್ರವದಂತಿ ಪುರಾವಿದಃ ।
ತಸ್ಮಿನ್ ಪರ್ವತತೀರ್ಥೇऽಸ್ತಿ ಸಾಕ್ಷಾತ್ ಚಕ್ರಧರೋ ಹರಿಃ ॥

ಲಕ್ಷ್ಮ್ಯಾ ಧರಿತ್ರ್ಯಾ ಸಹಿತೋ ಸಾನ್ನಿಧ್ಯಂ ಕುರುತೇ ಮುನೇ ।
ತಚ್ಛಿಲಾಸು ಚ ಸರ್ವಾಸು ಹರಿಕ್ಷೇತ್ರಗತಾಸು ಚ ॥

ಶೀತವಾತ ವಿನಿರ್ಮುಕ್ತೇ ಶೈಲಗರ್ಭೇ ಮುನೀಶ್ವರ ।
ಸರ್ವಲಕ್ಷಣಸಂಯುಕ್ತಾ ಶಾಲಗ್ರಾಮಶಿಲಾ ಭವೇತ್ ॥

ಸಾಕ್ಷಾತ್ ಲಕ್ಷ್ಮೀಪತೇರ್ವಿಷ್ಣೋಃ ಪ್ರಸಾದಾತ್ ಪರಮೇಷ್ಠಿನಃ ।
ಉತ್ಪತ್ತಿ ಸಚ್ಛಿಲಾನಾಂ ತು ಪುಣ್ಯಕಾಲೇಷು ವಿದ್ಯತೇ ॥

"ಅವಂತಿ ಎಂಬ ದೇಶವಿದೆ. ಅದನ್ನು ಸುತ್ತಲೂ ಬಹಳ ಪವಿತ್ರವಾದ ಪರ್ವತಶ್ರೇಣಿಯು ಆವರಿಸಿಕೊಂಡಿದೆ. ಒಂದೆಡೆ ಪಾಪವನ್ನು ಕಳೆಯುವ ಪವಿತ್ರವಾದ ಗಂಡಕೀನದಿಯು ಹರಿಯುತ್ತಿದೆ. ಅದೇ ಶಾಲಗ್ರಾಮ ಶಿಲೆಯು ಹುಟ್ಟುವ ಮೂಲಸ್ಥಾನ. ಈ ಪವಿತ್ರ ಸ್ಥಳವನ್ನು ಸ್ಮರಿಸುವುದರಿಂದಲೇ ಆತನು ಜನ್ಮಜನ್ಮಾಂತರಗಳಲ್ಲಿ ಮಾಡಿರುವ ಪಾಪಕರ್ಮಗಳು ನಿವಾರಣೆಗೊಳ್ಳುತ್ತವೆ. ಪುಣ್ಯಕರವಾದ ಗಂಡಕೀ ನದಿಯ ನೀರಿನ ಸ್ಪರ್ಶ ಮಾಡುವುದರಿಂದ, ಅರ್ಥಾತ್ ಸ್ನಾನ ಮಾಡುವುದರಿಂದ ವಿಷ್ಣುಸಾಯುಜ್ಯಪದವಿಯು ಪ್ರಾಪ್ತವಾಗುವುದು. ಇಲ್ಲಿರುವ ಪರ್ವತದ ಕೆಳಭಾಗದಲ್ಲಿ 'ಚಕ್ರತೀರ್ಥ' ಎಂಬ ಹೆಸರಿನ ಸರೋವರವೊಂದಿದೆ. ಆ ಸರೋವರದಲ್ಲಿ ಸಾಕ್ಷಾತ್ ವಿಷ್ಣುವೇ ಲಕ್ಷ್ಮಿ ಮತ್ತು ಭೂದೇವಿಸಮೇತನಾಗಿ ನೆಲೆಸಿರುವನು. ಆ ಪರ್ವತದ ಶಿಲಾಗರ್ಭದೊಳಗೆ ಲಕ್ಷ್ಮೀಪತಿ ವಿಷ್ಣುವಿನ ಪ್ರಸಾದದಿಂದ ಪವಿತ್ರವಾದ ಶಾಲಗ್ರಾಮಶಿಲೆಗಳ ಉತ್ಪತ್ತಿಯಾಗುತ್ತದೆ.

ಆಳವಾದ, ಚಕ್ರದಂತೆ ನೀರು ಸುತ್ತಿಸುಳಿದು ಹೋಗುವ ಕಲ್ಲಿನ ಗಣಿಯು ಚಳಿ ಮತ್ತು ಗಾಳಿಯಿಂದ ಮುಕ್ತವಾಗಿದ್ದು ಇಲ್ಲಿಯೇ ವೈಶಿಷ್ಟ್ಯಪೂರ್ಣಗುಣಗಳಿಂದ ಕೂಡಿದ ಶಾಲಗ್ರಾಮಗಳ ಉತ್ಪತ್ತಿಯಾಗುವುದು. ದೇವರ ಅನುಗ್ರಹದಿಂದ, ಶುಭದಿನಗಳಲ್ಲಿ ಪವಿತ್ರವೂ ಅದ್ಭುತವೂ ಆದ ಶಾಲಗ್ರಾಮಗಳು ಹುಟ್ಟಿಕೊಳ್ಳುತ್ತವೆ. ಆ ಶಾಲಗ್ರಾಮಶಿಲೆಗಳಲ್ಲಿ ಚಕ್ರಾಕಾರದ ಚಿಹ್ನೆಗಳು, ಗುರುತುಗಳು ಮೊದಲಾದವು ಹೇಗೆ ಉಂಟಾದವು ಎಂದರೆ–

ಪಶ್ಚಾತ್ ಸಹಸ್ರವರ್ಷಾಣಾಂ ಶಾಲಗ್ರಾಮಸ್ಯ ಚಕ್ರಕೇ ।
ವಜ್ರಕೀಟ ಇತಿಖ್ಯಾತೋ ಜಂತುರ್ಭೂತ್ವಾ ಹರಿಃಸ್ವಯಮ್ ॥

ಹಿರಣ್ಮಯೋ ಮಹಾವೀರ್ಯೋ ವಿದ್ಯುಲ್ಲೇಖಾಸಮಪ್ರಭಃ ।
ಶಾಲಗ್ರಾಮಶಿಲಾಗರ್ಭಮಾಸಾದ್ಯಕಲನಿಃಸ್ವನಃ ॥

ತತ್ರಸ್ಥಶ್ಚಕ್ರಚಿಹ್ನಾನಿ ಮುಖೇನ ಕುರುತೇ ಮುನೇ ।
ನಾನಾ ವಿಧಾನಿ ಚಕ್ರಾಣಿ ನಾನಾರೂಪಾಣಿ ಲೀಲಯಾ ॥

ಅಂತರ್ದಧಾತಿ ತತ್ರೈವ ಬಹುಕಾಲಾದನಂತರಮ್ ।
ಸಾನ್ನಿಧ್ಯಂ ಕುರುತೇ ತತ್ರ ಸಾಕ್ಷಾಲ್ಲಕ್ಷ್ಮೀಪತಿಸ್ಸದಾ ॥

ತದಾಲೋಕನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ।
ಉತ್ಪತ್ತಿರ್ನಾರದೋಕ್ತ್ಯೈವಂ ವಿಜ್ಞೇಯಾ ಮುನಿಪುಂಗವ ॥

ಸಾವಿರಾರು ವರ್ಷಗಳ ಅನಂತರ ವಜ್ರಕೀಟಗಳೆಂಬ (ಗಟ್ಟಿ ಚಿಪ್ಪುಗಳನ್ನು ಹೊಂದಿದ) ಹುಳುಗಳು ಈ ಶಿಲೆಯಲ್ಲಿ ಹುಟ್ಟಿಕೊಳ್ಳುತ್ತವೆ. ಈ ಹುಳು(ಕೀಟಜಂತು)ಗಳೇ ಸಾಕ್ಷಾತ್ ವಿಷ್ಣುವಿನ ರೂಪ ಎಂದು ಭಾವಿಸ ಲಾಗುತ್ತದೆ. ಶಿಲೆಯ ಒಳಗೆ ವಿಷ್ಣುವಿನ ಕೀಟಜಂತುರೂಪದ ಪ್ರವೇಶದಿಂದಾಗಿ, ಕೆಲವು ಶಾಲಗ್ರಾಮಗಳು ಹಿರಣ್ಮಯವಾಗಿಯೂ ಬಂಗಾರದ ವರ್ಣದಿಂದಲೂ ಮಹಾಶಕ್ತಿಶಾಲಿಯಾಗಿಯೂ ಮಿಂಚಿನಂತೆ ಪ್ರಕಾಶ ಮಾನವಾದವುಗಳಾಗಿಯೂ, ಮಧುರವಾದ ಸ್ವರದಿಂದಲೂ ಅನೇಕ ರೀತಿಯ ಚಕ್ರವೇ ಮೊದಲಾದ ನಾನಾ ಬಗೆಯ ಚಿಹ್ನೆಗಳು ನಾನಾ ವಿಧವಾಗಿ, ನಾನಾ ರೂಪದಿಂದ ತಮ್ಮಷ್ಟಕ್ಕೆ ತಾವಾಗಿಯೇ ಚಿತ್ರಿಸಲ್ಪಡುತ್ತವೆ."

ಈ ರೀತಿಯಾಗಿ ಸಹಸ್ರಾರು ವರ್ಷಗಳಿಂದ ನಿರ್ಮಾಣವಾಗುತ್ತಿರುವ ಈ ಶಾಲಗ್ರಾಮಶಿಲೆಗಳಲ್ಲಿ ಸಾಕ್ಷಾತ್ ಲಕ್ಷ್ಮೀಪತಿಯಾದ ಭಗವಾನ್ ವಿಷ್ಣುಪರಮಾತ್ಮನು ಇತರ ದೇವತೆಗಳಿಂದ ಕೂಡಿ ಸದಾಕಾಲ ವಾಸ ವಾಗಿರುವನು. ಅಂತಹ ಪರಮಪವಿತ್ರವಾದ ಶಾಲಗ್ರಾಮಗಳ ದರ್ಶನಮಾತ್ರದಿಂದಲೇ ಮನುಷ್ಯನು ಹೊತ್ತಂತಹ ಸಮಸ್ತ ಪಾಪಗಳು ನಾಶವಾಗುವವು.

**ಶಾಲಗ್ರಾಮಶಿಲೆಯ ನಾನಾರೂಪ, ವರ್ಣ ಮತ್ತು ಇತರ ಗುಣಲಕ್ಷಣಗಳು:**

ಶ್ವೇತಾ ಶ್ಯಾಮಾ ತಥಾ ಕೃಷ್ಣಾ ನೀಲಾ ವಾ ಹೃತಸೀನಿಭಾ ।
ಹೇಮಪೀತಾ ಹರಿದ್ರಾಭಾ ಗೌರವಾ ಕಾಂಸ್ಯಪಾಂಡುರಾ ॥

ರಕ್ತಾತಿರಕ್ತಾ ಕಪಿಲಾ ಲೋಹಿತಾ ಮಧುಪಿಂಗಲಾ ।
ಕರ್ಬುರಾ ಬಹುವರ್ಣಾ ಚ ಕಲಂಕಾ ಧೂಮ್ರವರ್ಣಕಾ ॥

ಅತಿವರ್ಣಾ ವಿವರ್ಣಾ ಚ ತಥಾ ಸಂದಿಗ್ಧವರ್ಣಕಾ ।
ಇತ್ಯೇವಂ ವರ್ಣಭೇದೇನ ಜ್ಞೇಯಾಷ್ಟಕ್ರಾಣಿಕಾಃ ಶಿಲಾಃ ॥

ಈ ಶಾಲಗ್ರಾಮಗಳು ಬಿಳಿ, ಕಪ್ಪು, ಮೋಡದ ಬಣ್ಣ, ನೀಲದಂತೆ, ಅತಸೀಪುಷ್ಪದಂತೆ, ಹಿರಣ್ಯದಂತೆ, ಅರಸಿನದಂತೆ, ಹಳದಿಯಾಗಿ, ಕೆಂಪು ಮಿಶ್ರಿತ ಹಳದಿ, ಕಂಚಿನ ಬಣ್ಣ, ಕೆಂಪು, ಅತಿ ಕೇಂಪು ಅರಸಿನ ಒತ್ತಿದ ಕೆಂಪು, ಸಂಜೆಗೆಂಪು, ಜೇನಿನ ಕೆಂಪು, ಮಿಶ್ರಬಣ್ಣ, ಅನೇಕಬಣ್ಣ, ಕಲೆಗಳಿಂದ ಕೂಡಿದ್ದು, ಹೊಗೆಯಂತೆ ನಸುಕಾಗಿ, ಹೆಚ್ಚು ಬಣ್ಣದ್ದು, ಬಣ್ಣಗೆಟ್ಟದ್ದು, ಯಾವ ಬಣ್ಣವೆಂದೇ ತಿಳಿಯಲಾಗದ್ದು –ಎಂಬುದಾಗಿ ಶಿಲೆಗಳು ನಾನಾ ವಿಧಗಳಿಂದ ಕೂಡಿವೆ. ಈ ಶಾಲಗ್ರಾಮವು ದೇವರ ಸಾಯುಜ್ಯದಿಂದ ಕೂಡಿದ್ದು 'ಕ್ಷೇತ್ರ'ವೆಂದು ಪರಿಗಣಿಸಲ್ಪಟ್ಟಿದೆ. ಶಿಲೆಗಳ ಬಣ್ಣಗಳ ಮೇಲೆ ಈ ಕ್ಷೇತ್ರವು ನಿರ್ಧರಿತವಾಗುತ್ತದೆ.

ಶ್ರೀಕ್ಷೇತ್ರಂ ತು ವಾಸುದೇವಸ್ಯ ಶ್ವೇತವರ್ಣಂ ಪ್ರಚಕ್ಷತೇ ।
ಶ್ರೀಮನ್ನಾರಾಯಣಕ್ಷೇತ್ರಂ ಹರಿದ್ರಾಭಾಂಗಗೌರವಮ್ ॥

ಹೈಮಂ ಹಿರಣ್ಯಗರ್ಭಂ ಸ್ಯಾತ್ ಶ್ರೀಧರಂ ಪೀತಮುಚ್ಯತೇ ।
ಶ್ಯಾಮಂ ನಾರಾಯಣಂ ಜ್ಞೇಯಂ ಕೃಷ್ಣಂ ವಿಷ್ಣುಂ ತಥೈವ ಚ ॥

ದಾಮೋದರಂ ತು ನೀಲಾಭಂ ಅನಿರುದ್ಧಂ ತಥೈವ ಚ ।
ಮಧ್ವಾಭಂ ಮಾಧವಂ ಜ್ಞೇಯಂ ರಕ್ತಂ ಸಂಕರ್ಷಣಂ ತಥಾ ॥

ವರ್ಣತಃ ಕಪಿಲಂ ಸರ್ವಂ ನಾರಸಿಂಹಂ ಪ್ರಚಕ್ಷತೇ ।
ಬಹುವರ್ಣಮನಂತಂ ಸ್ಯಾತ್ ರಾಮಂ ರುಕ್ಮಾಖ್ಯಸನ್ನಿಭಮ್ ।
ಕ್ಷೇತ್ರಂ ಕಥಿತಮಿತ್ಯೇವಂ ವರ್ಣತೋ ವಿನತಾಸುತ ॥

ಬಿಳಿಯ ಬಣ್ಣದ ಶಾಲಗ್ರಾಮವು 'ವಾಸುದೇವಕ್ಷೇತ್ರ'. ಅರಸಿನದಂತೆ ಹಳದಿಬಣ್ಣದಿಂದ ಕೂಡಿದ ಶಾಲಗ್ರಾಮವು 'ಶ್ರೀಮನ್ನಾರಾಯಣಕ್ಷೇತ್ರ'. ಗರುಡನಿಗೆ ವಿಷ್ಣುವೇ ಹೇಳಿದಂತೆ– ಚಿನ್ನದ ಬಣ್ಣದಿಂದ ಕೂಡಿದ್ದರೆ ಅದು 'ಹಿರಣ್ಯಗರ್ಭಕ್ಷೇತ್ರ'. ಸಾಮಾನ್ಯ ಹಳದಿಬಣ್ಣದಿಂದ ಕೂಡಿದ್ದರೆ 'ಶ್ರೀಧರಕ್ಷೇತ್ರ'. ಕಪ್ಪು ಬಣ್ಣದಿಂದ ಕೂಡಿದ್ದರೆ 'ಶ್ರೀಕೃಷ್ಣಕ್ಷೇತ್ರ' ಅಥವಾ 'ವಿಷ್ಣುಕ್ಷೇತ್ರ'. ನೀಲಬಣ್ಣದಿಂದಿದ್ದರೆ ಅದು 'ದಾಮೋದರ ಕ್ಷೇತ್ರ' ಅಥವಾ 'ಅನಿರುದ್ಧಕ್ಷೇತ್ರ'. ಜೇನಿನ ಬಣ್ಣದಿಂದಿದ್ದಲ್ಲಿ ಅದು 'ಮಾಧವಕ್ಷೇತ್ರ'. ಕೆಂಬಣ್ಣದಿಂದಿದ್ದಲ್ಲಿ ಅದು 'ಸಂಕರ್ಷಣ ಕ್ಷೇತ್ರ'. ಕಪಿಲವರ್ಣದಿಂದಿದ್ದಲ್ಲಿ ಅದು 'ನರಸಿಂಹಕ್ಷೇತ್ರ'. ಅನೇಕ ಬಣ್ಣಗಳಿಂದ ಕೂಡಿದ್ದರೆ ಅದು 'ಅನಂತಕ್ಷೇತ್ರ'. ಚಿನ್ನದ ಬಣ್ಣವಿದ್ದಲ್ಲಿ ಅದು 'ರಾಮಕ್ಷೇತ್ರ' – ಈ ರೀತಿಯಲ್ಲಿ ಕ್ಷೇತ್ರದ ಬಣ್ಣಗಳು, ವರ್ಣಗಳಿರುವ ಈ ಶಿಲೆಗಳಿಗೆ ಅವುಗಳದ್ದೇ ಆದ ಪ್ರಭಾವ ಹಾಗೂ ಪರಿಣಾಮಗಳಿರುತ್ತದೆ.

ಶ್ವೇತಂ ಮೋಕ್ಷಪ್ರದಂ ಚೈವ ನೀಲಂ ಲಕ್ಷ್ಮೀಪ್ರದಾಯಕಮ್ ।
ಪುಷ್ಟಿದಂ ವೃದ್ಧಿದಂ ಶ್ಯಾಮಂ ಕೃಷ್ಣಂ ಕೀರ್ತಿಪ್ರದಂ ಸದಾ ॥

ಗೌರವರ್ಣಂ ಧನಕರಂ ಹೇಮವರ್ಣಂ ತಥೈವ ಚ ।
ಪಾಂಡುರಂ ಕೀರ್ತಿದಂ ವಿದ್ಯಾದ್ರಕ್ತಂ ರಾಜ್ಯಪ್ರದಾಯಕಮ್ ॥

ಬಿಳಿಬಣ್ಣದ ಮೂರ್ತಿಯು ಮೋಕ್ಷವನ್ನೀಯುವುದು, ನೀಲಿಬಣ್ಣದ ಮೂರ್ತಿಯು ಸಂಪತ್ತನ್ನು ಕೊಡುವುದು. ಮೋಡದಂತೆ ಕಪ್ಪಾದದ್ದು ಕೀರ್ತಿಯನ್ನು ತಂದುಕೊಡುವುದು. ಅರಶಿನ ಬಣ್ಣದ ಮೂರ್ತಿಯಿಂದ ಧನಪ್ರಾಪ್ತಿಯಾಗುವುದು. ಕೆಂಪು ಮಿಶ್ರಿತ ಬಿಳಿಬಣ್ಣದ ಮೂರ್ತಿಯು ಕೀರ್ತಿಪ್ರದವು. ಕೆಂಪುಬಣ್ಣದ ಮೂರ್ತಿ ರಾಜ್ಯವನ್ನು ಕೊಡುವುದು. ಹೀಗಾಗಿ ಯಾರಿಗೆ ಯಾವಯಾವ ಫಲ ಬೇಕೆಂದು ಅಪೇಕ್ಷಿಸುವಲ್ಲಿ ಅಂತಹವರು ಆಯಾಯ ಬಣ್ಣದ ಶಾಲಗ್ರಾಮಪೂಜೆ ಮಾಡಬೇಕೆಂದರ್ಥ.

ಸ್ನಿಗ್ಧಂ ಸಿದ್ಧಿಪ್ರದಂ ನಿತ್ಯಂ ಸೂಕ್ಷ್ಮಂ ದಿವ್ಯಫಲಪ್ರದಮ್ ।
ಸಂತೋಷಂ ಶೀತಲಾಂಗಂ ತು ವೃತ್ತಂ ಸಿದ್ಧಿವಿಧಾಯಕಮ್ ॥

ಕಾರ್ಯಸಿದ್ಧಿಪ್ರದಂ ಶ್ಯಾಮಂ ಕೃಷ್ಣಂ ಕೀರ್ತಿಕರಂ ನೃಣಾಮ್ ।
ಶ್ವೇತಂ ಮೋಕ್ಷಪ್ರದಂ ಚೈವ ಪೀತಂ ಧನಕರಂ ಸದಾ ॥

ಸುಖದಂ ಬಹುವರ್ಣಂ ಚ ರಕ್ತಂ ರಾಜ್ಯಪ್ರದಂ ತಥಾ ।
ವಾಮಚಕ್ರಂ ಮಧ್ಯಚಕ್ರಂ ಪುತ್ರಪೌತ್ರಾದಿವೃದ್ಧಿದಮ್ ॥

ಕೀರ್ತಿಪ್ರದಂ ದ್ವಾರಚಕ್ರಂ ಮೋಕ್ಷದಂ ಸ್ಯಾತ್ ಸಗಹ್ವರಮ್ ।
ವನಮಾಲಾಯುತಂ ಚಾಪಿ ದಾರಸೌಭಾಗ್ಯದಾಯಕಮ್ ॥
ಪದ್ಮಾದ್ರಿಯುಕ್ತಂ ಸೌಭಾಗ್ಯಧನಧಾನ್ಯಸುಖಪ್ರದಮ್ ।

ಶಾಲಗ್ರಾಮ ನುಣುಪಾಗಿರುವಂತಹುದು ಸಿದ್ಧಿಯನ್ನು, ಚಿಕ್ಕದಾಗಿರುವಂತಹದು ಶ್ರೇಷ್ಠಫಲವನ್ನು, ತಣ್ಣಗಿರುವುದು ಸಂತೋಷವನ್ನು, ದುಂಡಾಗಿ ಹಾಗೂ ಕಪ್ಪಾಗಿರುವುದು ಸಿದ್ಧಿಯನ್ನು, ಮೋಡದಂತೆ ಕಪ್ಪಾಗಿರುವಂತಹುದು ಕೀರ್ತಿಯನ್ನು, ಬಿಳಿಯಬಣ್ಣದ್ದು ಮೋಕ್ಷವನ್ನು, ಅರಸಿನ ಬಣ್ಣದ್ದು ಧನವನ್ನು, ಅನೇಕ ಬಣ್ಣಗಳಿಂದ ಕೂಡಿರುವಂತಹುದು ಸುಖವನ್ನು, ಕೆಂಪುಬಣ್ಣದ್ದು ರಾಜ್ಯವನ್ನು ಕೊಡುವುದು. ಎಡಭಾಗದಲ್ಲಿ, ಮಧ್ಯಭಾಗದಲ್ಲಿ ಚಕ್ರವಿರುವಂತಹುದು ಕೀರ್ತಿಯನ್ನೂ ಬಹಳ ಒಳಗಿನ ವರೆಗೆ ತೂತು ಇರುವುದು ಮೋಕ್ಷವನ್ನೂ ವನಮಾಲೆ ಇರುವಂತಹುದು ಯೋಗ್ಯಪತ್ನಿಯ ಸೌಖ್ಯವನ್ನೂ ತಾವರೆ ಆಕಾರದ ದ್ವಾರವುಳ್ಳದ್ದು ಸೌಭಾಗ್ಯ, ಧನಧಾನ್ಯಸುಖವೃದ್ಧಿಯನ್ನೂ ತಂದುಕೊಡುತ್ತದೆ.

**ಗೌತಮೀಯತಂತ್ರ**ದಲ್ಲಿ ಹೇಳಿದ ಪ್ರಕಾರ ಕೃಷ್ಣ ಶಾಲಗ್ರಾಮವು ಅನೇಕ ಜನ್ಮಗಳನ್ನು ಪಡೆದ ಅನಂತರ ಅತ್ಯಂತ ಪುಣ್ಯಪಡೆದವನಿಗೆ ಮಾತ್ರ ಲಭಿಸುವಂತಹ ಶಿಲೆ. ಈ ಶಿಲೆಯಲ್ಲಿ ದನದ ಗೊರಸಿನ ಚಿಹ್ನೆಗಳಿದ್ದು, ಈ ಶಾಲಗ್ರಾಮವನ್ನು ಪೂಜಿಸಿದವನಿಗೆ ಮೋಕ್ಷಪ್ರದವಾಗಿ, ಪುನರ್ಜನ್ಮವಿರುವುದಿಲ್ಲ.

**ಪದ್ಮಪುರಾಣದ ಮಾಘಮಾಹಾತ್ಮ್ಯೆ**ಯು ಹೇಳುವ ಪ್ರಕಾರ ಚಕ್ರಚಿಹ್ನೆಯನ್ನು ಹೊಂದಿದ ಶಾಲಗ್ರಾಮದ ಆರಾಧನೆಯಿಂದ ಸಾವಿರ ರಾಜಸೂಯಯಾಗ ಮಾಡಿದ ಫಲವು ದೊರೆಯುತ್ತದೆ. ಧೂಮ್ರ (ಬೂದು) ಬಣ್ಣದ ಶಾಲಗ್ರಾಮ ಶಿಲೆಗಳು ಶ್ರೇಷ್ಠ ತರಗತಿಯದಾಗಿದ್ದು ಯತಿಗಳ ಪೂಜೆಗೆ ಯೋಗ್ಯವಾದವುಗಳು. ಬಹುವರ್ಣಗಳಿಂದ ಹಾಗೂ ಮೈಮೇಲೆ ಚುಕ್ಕೆಗಳುಳ್ಳ –ಅನಂತ ಶಾಲಗ್ರಾಮಶಿಲೆಯನ್ನು ಹೊರತುಪಡಿಸಿ ಇತರ– ಶಾಲಗ್ರಾಮಶಿಲೆಗಳು ಕ್ಷಯಕಾರಿಗಳಾಗಿದ್ದು ಪೂಜೆಗೆ ಅನರ್ಹವಾದವುಗಳು. ಕಡುಬಣ್ಣದ ಶಾಲಗ್ರಾಮಶಿಲೆಗಳು ದುಃಖವನ್ನು ತಂದುಕೊಡುವಂತಹವುಗಳು. ಮಸುಕಾದ ವರ್ಣದ ಶಾಲಗ್ರಾಮಶಿಲೆಗಳು ಕುಲನಾಶಕರವಾದವುಗಳು. ಸಂದಿಗ್ಧವರ್ಣದ ಶಾಲಗ್ರಾಮಗಳು ಭೂಹಾನಿ ಮಾಡತಕ್ಕವು ಗಳು ಹಾಗೂ ಮರಣ(ಸರ್ವನಾಶ)ವನ್ನುಂಟುಮಾಡತಕ್ಕವುಗಳು. ಕಪಿಲ (ಹಳದಿಮಿಶ್ರಿತ ಕಂದು) ಬಣ್ಣದ ಶಾಲಗ್ರಾಮಶಿಲೆಗಳು ಪತ್ನಿಗೆ ಮರಣವನ್ನುಂಟುಮಾಡುತ್ತವೆ. ನೀಲಿಬಣ್ಣದ ಶಾಲಗ್ರಾಮಗಳು ಸಂಪತ್ತನ್ನು ನೀಡುವವು. ಕಪ್ಪು ಬಣ್ಣದ್ದು ವೃಷ್ಟಿಯನ್ನೂ ವೃದ್ಧಿಯನ್ನೂ ಉಂಟುಮಾಡತಕ್ಕವು. ರಕ್ತಕೆಂಪು ಬಣ್ಣದ ಶಾಲಗ್ರಾಮಗಳು ಭೂಲಾಭ ಮತ್ತು ರಾಜ್ಯಲಾಭ ಮಾಡಿಕೊಡತಕ್ಕವು. ಅತಿ ಕೆಂಪು ಬಣ್ಣದ ಶಾಲಗ್ರಾಮಗಳು ಮೃತ್ಯುಪ್ರದಗಳಾಗಿವೆ. ಬಿಳಿಯ ಬಣ್ಣದ ಶಾಲಗ್ರಾಮವು ಧನಲಾಭವನ್ನುಂಟುಮಾಡುವವುಗಳು, ಬಹಳ ಬಣ್ಣಗಳುಳ್ಳ ಶಾಲಗ್ರಾಮ ಶಿಲೆಯು ಸಂಪತ್‌ಪ್ರದಾಯಕವು. ಬಣ್ಣವಿಲ್ಲದ ಹಾಗೂ ಮಾಸಿದ ಬಣ್ಣದ ಶಾಲಗ್ರಾಮಗಳು ಪೂಜಿಸುವವನಿಗೆ ಯಾವ ಫಲವನ್ನೂ ಕೊಡಲಾರವು.

ಇಲ್ಲಿ ಭೂವರ್ಣ ಎಂಬ ಶಬ್ದದ ಬಗ್ಗೆ ಕೆಲವು ಸಂಶಯಗಳಿವೆ. ಬಿಳಿಯ ಬಣ್ಣದ ಶಾಲಗ್ರಾಮಶಿಲೆಯು ಮೋಕ್ಷವನ್ನು ನೀಡುವಂತಹವು ಹಾಗೂ ಸಂದಿಗ್ಧ ವರ್ಣದ ಶಿಲೆಯು ಸರ್ವನಾಶ ಮಾಡತಕ್ಕವುಗಳು ಎನ್ನಲಾಗಿದೆ. ಶಾಲಗ್ರಾಮಶಿಲೆಗಳನ್ನು ಅವುಗಳ ಪರಿಮಾಣದ ಮೇಲೆ, ಅಂದರೆ ಅವುಗಳನ್ನು ಗಾತ್ರ ಮತ್ತು ದ್ವಾರ, ಬಿರುಕು ಮತ್ತು ರಂಧ್ರಗಳ ಆಧಾರದ ಮೇಲೆ ಹೋಲಿಸಿ ನೋಡಲಾಗುತ್ತದೆ. ಅನಂತರ ಪೂಜಿಸಲು ಯೋಗ್ಯವೋ ಅಲ್ಲವೊ ಎಂದು ಹೇಳಲಾಗುತ್ತದೆ.

**ಪೂಜನೀಯಃ ಶಿಲಾನಾಂ ತು ದ್ವಾರಮಾನಂ ತಥೋಚ್ಯತೇ ।**
**ವೃತ್ತೇ ಸೂತ್ರಾಷ್ಟಮೋ ಭಾಗ ಉತ್ತಮೋ ಮಧ್ಯಮಾವುಭೌ ।**
**ಭಾಗತ್ರಯಂ ಕನೀಯಾಂಶ್ಚ ಶಾಲಗ್ರಾಮಸ್ಯ ಲಕ್ಷಣಮ್ ॥**

ಶಾಲಗ್ರಾಮಶಿಲೆಯ ಮಧ್ಯಭಾಗದಿಂದ ಒಂದು ಸುತ್ತು ದಾರವನ್ನು ಸುತ್ತಬೇಕು. ಶಾಲಗ್ರಾಮ ಶಿಲೆಯ ಸುತ್ತಳತೆಯ 1/8 ಅಂಶ ಅಗಲವಾದ ದ್ವಾರವಿದ್ದಲ್ಲಿ ಆ ಶಾಲಗ್ರಾಮವು ಅತ್ಯುತ್ತಮವೂ, ಸುತ್ತಳತೆಯು 2/8 ಅಂಶ ದ್ವಾರವಿದ್ದಲ್ಲಿ ಮಧ್ಯಮವೂ, ಸುತ್ತಳತೆಯ 3/8 ಅಂಶದಷ್ಟು ದ್ವಾರವಿದ್ದಲ್ಲಿ ಅದು ಅಧಮವೂ, ದ್ವಾರವು ಚಿಕ್ಕದಾಗಿದ್ದಷ್ಟೂ ಉತ್ತಮವೆಂದೂ ಅರ್ಥ. ದ್ವಾರವು 1/3 ಅಂಶವಿದ್ದಲ್ಲಿ ಅಂತಹ ಶಿಲೆಯು ಪೂಜೆಗೆ ಅನರ್ಹ ಹಾಗೂ ಅವುಗಳನ್ನು ತ್ಯಜಿಸಿದರೆ ಒಳ್ಳೆಯದು. ಬ್ರಹ್ಮಪುರಾಣವು ಇದನ್ನು ಬೇರೆ ರೀತಿಯಲ್ಲಿ ಹೇಳಿದೆ- ದ್ವಾರ/ರಂಧ್ರಗಳು ಬೇರೆಬೇರೆ ಕಡೆಗಳಲ್ಲಿ ಇದ್ದಲ್ಲಿ, ಬೇರೆಬೇರೆ ತರಹದ ಫಲಗಳು ಉಂಟಾಗುತ್ತವೆ. ದ್ವಾರವು ಕೆಳ ಮುಖವಾಗಿದ್ದಲ್ಲಿ ಅಂತಹವು ಭಯಂಕರವು, ಮೇಲ್ಮುಖವಾಗಿದ್ದಲ್ಲಿ ಅಂತಹವು ಶತ್ರುಗಳನ್ನು ಹೊಡೆದೋಡಿಸುವವು, ಮೇಲೂ ಅಲ್ಲದೆ ಕೆಳಗೂ ಅಲ್ಲದೆ ಸಮಾನ ಮುಖವಾಗಿದ್ದಲ್ಲಿ ವಿಶಿಷ್ಟ. ಪಾರ್ಶ್ವಭಾಗಗಳಲ್ಲಿ ಇದ್ದಲ್ಲಿ ಅವು ಸೌಭಾಗ್ಯವನ್ನು ಉಂಟುಮಾಡತಕ್ಕವುಗಳು.

**ನ ಸ್ಥೂಲಂ ನ ಕೃಶಂ ಭಿನ್ನಂ ನಾತಿಕೃಷ್ಣಂ ನ ಕರ್ಕಶಮ್ ।**
**ಸ್ಥಿರಾಸನಯುತಂ ವಾಪಿ ತತ್ರಾಸ್ತೇ ಶ್ರೀಸಹಾಯವಾನ್ ॥**

**ಬದ್ಧಾಮಲಕತುಲ್ಯಾ ಯಾ ಸೂಕ್ಷ್ಮಚಕ್ರದ್ವಯಾನ್ವಿತಾ ।**
**ತಸ್ಯಾಮೇವ ಸದಾ ಕಾಲೇ ಶ್ರೀಯಾಸಹ ಹರಿಃ ಸ್ಥಿತಃ ॥**
**ಯಥಾಯಥಾ ಶಿಲಾ ಸೂಕ್ಷ್ಮಾ ಫಲಾಧಿಕ್ಯಂ ತಥಾತಥಾ ॥**

ಶಾಲಗ್ರಾಮವು ಬಹಳ ದೊಡ್ಡದೂ, ಕೃಶವಾದದ್ದೂ, ಒಡೆದುಹೋದದ್ದೂ, ಅತಿ ಕಪ್ಪುಬಣ್ಣದ್ದೂ, ದೊರಗಾದದ್ದೂ, ಫಲಾಪೇಕ್ಷಿಗಳಾದ ಗೃಹಸ್ಥರಿಗೆ ಪೂಜಿಸಲು ಯೋಗ್ಯವಲ್ಲ. ಆಸನವು ಸ್ಥಿರವಾಗಿದ್ದರೆ ಅದರಲ್ಲಿ ಲಕ್ಷ್ಮೀನಾರಾಯಣನೊಡನೆ ಶ್ರೀನಾರಾಯಣನು ಇರುವನು. ೨೮ ನೆಲ್ಲಿಕಾಯಿಗಳಷ್ಟು ದೊಡ್ಡದಾದದ್ದು, ಚಿಕ್ಕ ಚಕ್ರಗಳೆರಡರಿಂದ ಕೂಡಿದ್ದು ಇಂತಹ ಶಾಲಗ್ರಾಮದಲ್ಲಿ ಲಕ್ಷ್ಮೀದೇವಿಯೊಡನೆ ಶ್ರೀಹರಿಯು ಸನ್ನಿಧಾನವನ್ನು ಇಟ್ಟಿರುವನು. ಶಾಲಗ್ರಾಮವು ಚಿಕ್ಕದಾದಷ್ಟು ಫಲ ಹೆಚ್ಚುವುದು.

**ಮತ್ಸ್ಯಾದ್ಯಾಃ ಕೇಶವಾದ್ಯಾಶ್ಚ ಹಯಾಸ್ಯಾಃ ಕಪಿಲಾಸ್ತಥಾ ।**
**ಯಜ್ಞೋ ದತ್ತಃ ಶಿಂಶುಮಾರಃ ಮುಕುಂದೋ ಹಂಸ ಏವ ಚ ॥**
**ಲಕ್ಷ್ಮೀಪತಿರ್ದೇವದೇವೋ ವಟಪತ್ರಶಯಸ್ತಥಾ ।**
**ವಿಶ್ವಂಭರೋ ವಿಶ್ವರೂಪೋ ಗರುಡಧ್ವಜ ಏವ ಚ ॥**

**ಪೀತಾಂಬರಧರಶ್ಚೈವ ಸತ್ಯೋ ವೀರಶ್ರವಾಸ್ತಥಾ ।**
**ಅಮೃತಾಂಶುಶ್ಚಕ್ರಪಾಣಿರ್ವೀರನಾರಾಯಣಸ್ತಥಾ ॥**

ಬಹುರೂಪೀ ಪುಂಡರೀಕಃ ಪಾರಿಜಾತಸ್ಸುದರ್ಶನಃ ।
ಜಗದ್ಯೋನಿಸ್ತಥಾऽನಂತಃ ಸೇವ್ಯಾ ಹಿ ಹರಿಮೂರ್ತಯಃ ॥

ಮತ್ಸ್ಯಾದಿದಶಮೂರ್ತಿಗಳೂ, ಕೇಶವಾದಿ ೧೨ ಮೂರ್ತಿಗಳೂ, ಸಂಕರ್ಷಣಾದಿ ೧೨ ಮೂರ್ತಿಗಳೂ, ಹಯಗ್ರೀವಾದಿ– ಕಪಿಲ, ಯಜ್ಞ, ದತ್ತಾತ್ರೇಯ, ಶಿಂಶುಮಾರ, ಮುಕುಂದ, ಹಂಸ, ಪರಮಹಂಸ, ವೈಕುಂಠ, ಲಕ್ಷ್ಮೀಪತಿ, ಪುಂಡರೀಕಾಕ್ಷ, ವಟಪತ್ರಶಾಯಿ, ವಿಶ್ವಂಭರ, ವಿಶ್ವರೂಪ, ಗರುಡಧ್ವಜ, ಪೀತಾಂಬರಧರ, ಸತ್ಯ ವೀರಶ್ರವಸ, ಅಮೃತಾಂಶು, ಚಕ್ರಪಾಣಿ, ಮಾಯಾನಾರಾಯಣ, ಬಹುರೂಪೀ, ಪುಂಡರೀಕ, ಪಾರಿಜಾತ, ಸುದರ್ಶನ, ಜಗದ್ಯೋನಿ, ಅನಂತ – ವಿಷ್ಣುವಿನ ಈ ಮೂರ್ತಿಗಳನ್ನು ಸೇವಿಸತಕ್ಕದ್ದು. ಶಿಲಾಮುಖವು ಸೊಟ್ಟ ಗಾಗಿದ್ದಲ್ಲಿ/ತಿರುಚಿಕೊಂಡಿದ್ದಲ್ಲಿ ಅಂತಹವುಗಳು ರೋಗಕಾರಕಗಳು. ದ್ವಾರವು/ ಮುಖವು ಅಗಲವಾಗಿದ್ದಲ್ಲಿ ಸರ್ವಭಕ್ಷಕವು. ಶಾಲಗ್ರಾಮದ ಮೂರ್ತಿಭೇದಗಳನ್ನು ಚೆನ್ನಾಗಿ ಪರೀಕ್ಷಿಸಿ, ತಿಳಿದುಕೊಂಡು ಅವುಗಳ ಲಕ್ಷಣಗಳನ್ನು ತಿಳಿದುಕೊಂಡು ಪೂಜಿಸಬೇಕು.

**ಬೇರೆ ಮೂರ್ತಿಗಳು–**

ತ್ರಿಮೂರ್ತಿರ್ಹರಿಮೂರ್ತಿಶ್ಚ ಹರಿಃ ಶಂಕರಪೂರ್ವಕಃ ।
ನಾರಾಯಣಃ ಸ್ವಯಂಭೂಶ್ಚ ಪರಮೇಷ್ಠೀ ಚತುರ್ಮುಖಃ ॥

ಪಿತಾಮಹಃ ಸ್ವರ್ಣಗರ್ಭೋ ಗರುಡಃ ಶೇಷ ಏವ ಚ ।
ಬಲರಾಮಃ ಸೀರಪಾಣಿಃ ಪ್ರಲಂಬಘ್ನೋ ಬಲಸ್ತಥಾ ॥

ಶಿವನಾಭಿರಘೋರಶ್ಚ ಸದ್ಯೋಜಾತಸ್ತಥೈವ ಚ ।
ವಾಮದೇವಸ್ತಥೇಶಾನಸ್ತತ್ಪುರುಷಃ ಸೂರ್ಯ ಏವ ಚ ॥
(ಹೈಹಯಾಖ್ಯಸ್ಯ ಚೈಕಾಶೀತಿ ಮೂರ್ತಯಃ ಸ್ಮೃತಾಃ)

ಹರಿಹರಬ್ರಹ್ಮ (ತ್ರಿಮೂರ್ತಿ), ಹರಿಹರಮೂರ್ತಿ, ಹರಿಮೂರ್ತಿ, ಹರಿಹರನಾರಾಯಣ, ಸ್ವಯಂಭೂಃ, ಪರಮೇಷ್ಠಿ, ಚತುರ್ಮುಖ, ಪಿತಾಮಹಃ, ಸ್ವರ್ಣಗರ್ಭ, ಗರುಡ, ಶೇಷ, ಬಲರಾಮ, ಸೀರಪಾಣಿ, ಪ್ರಲಂಬಘ್ನ, ಬಲ(ನರ), ಶಿವನಾಭಿ, ಅಘೋರ, ಸದ್ಯೋಜಾತ, ವಾಮದೇವ, ಈಶಾನ, ತತ್ಪುರುಷ, ಸೂರ್ಯ, ಹೈಹಯ, ಕ್ಷೀರಾಬ್ಧಿಶಯನ– ಮತ್ಸ್ಯಾದಿ ೧೦, ಕೇಶವಾದಿ ೨೪, ಹಯಗ್ರೀವಾದಿ ೨೫, ತ್ರಿಮೂರ್ತ್ಯಾದಿ ೨೨, ಒಟ್ಟು– ಒಂದು ಪಕ್ಷದಲ್ಲಿ ೮೦ ಮೂರ್ತಿಗಳು; ಇನ್ನೊಂದು ಪಕ್ಷದಲ್ಲಿ ೮೧ ಮೂರ್ತಿಗಳು.

ಮೂರ್ತೀನಾಂ ಲಕ್ಷಣಂ ತಾಸಾಂ ದರ್ಶಯಿಷ್ಯೇ ಪೃಥಕ್ಪೃಥಕ್ ।
ವಕ್ರಚಕ್ರಶಿಲಾಶುದ್ಧಿಸಂಯುಕ್ತಾ ಹ್ಯುಕ್ತಲಕ್ಷಣೈಃ ॥

ಕೈಶ್ಚಿನ್ನ್ಯೂನಾಪಿ ಸಾ ಮೂರ್ತಿರುತ್ತಮಾ ಸಿದ್ಧಿದಾಯಿನೀ ।
ಚಕ್ರವಕ್ರಶಿಲಾಶುದ್ಧಿ ಸಂಪನ್ನಾ ವೃತ್ತಲಕ್ಷಣಾ ।
ಸ್ಥಿರಾಸನಾ ಸೌಮ್ಯಮೂರ್ತಿರುತ್ತಮಾ ಸಿದ್ಧಿದಾಯಿನೀ ॥

ಆ ಮತ್ಸ್ಯಾದಿಮೂರ್ತಿಗಳ ಲಕ್ಷಣವನ್ನು ಹೇಳುವೆನು–

ಶಾಲಗ್ರಾಮವು ಉತ್ತಮ ಶಿಲೆಯ ಶುದ್ಧಿಯೋಗ್ಯವಾದ ಮುಖಚಕ್ರವಿದ್ದುದಾದರೆ, ಕೆಲವು ಲಕ್ಷಣಗಳಿಲ್ಲ ವಾದರೂ ಉತ್ತಮವೆಂದು ಸೇವಕನಿಗೆ ಸಿದ್ಧಿಯನ್ನು ಕೊಡತಕ್ಕದ್ದೆಂದು ತಿಳಿಯತಕ್ಕದ್ದು. ಉರುಟಾಗಿದ್ದು, ಚಕ್ರಮುಖ ಸರಿಯಾಗಿದ್ದು ಉತ್ತಮ ಶಿಲೆಯಾಗಿದ್ದು ಸ್ಥಿರವಾದ ಆಸನವುಳ್ಳದ್ದಾಗಿ ಸೌಮ್ಯವಾದ ರೂಪದಿಂದ ಕೂಡಿದ್ದರೆ, ಉತ್ತಮವಾದದ್ದೆಂದು, ಸಿದ್ಧಿಯನ್ನು ಕೊಡತಕ್ಕದ್ದೆಂದೂ ಭಾವಿಸತಕ್ಕದ್ದು.

# ವಿಷ್ಣುವಿನ ದಶಾವತಾರ ಮೂರ್ತಿಗಳು (10)

ವಿಷ್ಣುವಿನ ದಶಾವತಾರಮೂರ್ತಿಗಳ ಹೆಸರುಗಳು– ಮತ್ಸ್ಯ, ಕೂರ್ಮ, ವಾರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ. ಹೀಗೆ ಸಾಲಗ್ರಾಮಶಿಲೆಯಲ್ಲಿ ಮೊದಲ ಹತ್ತು ಭೇದಗಳು ಮತ್ತು ಈ ಸಾಲಗ್ರಾಮಗಳ ಲಕ್ಷಣಗಳು ಈ ರೀತಿ ಇವೆ–

## ೧. ಮತ್ಸ್ಯಮೂರ್ತಿ ಲಕ್ಷಣಗಳು :

ದೀರ್ಘಾಕಾರಯುತಾ ಸ್ನಿಗ್ಧಾ ದ್ವಾರಚಕ್ರೇ ದ್ವಿಚಕ್ರಯುಕ್ ।
ಚಕ್ರಮೇಕಂ ಪೃಷ್ಠಭಾಗೇ ದಕ್ಷಿಣೇ ಮಕರಾಕೃತಿಃ ।
ವಾಮೇ ಪ್ರದೃಶ್ಯತೇ ರೇಖಾ ಮತ್ಸ್ಯಮೂರ್ತಿಃ ಶುಭಪ್ರದಾ ॥

ಉದ್ದವಾದ ಆಕಾರದ ಶಿಲೆಯ ನುಣ್ಣನೆ ಮುಖದ ಮಧ್ಯದಲ್ಲಿ ೨ ಚಕ್ರಗಳು; ಬೆನ್ನಲ್ಲಿ ೧ ಚಕ್ರ, ಬಲಭಾಗದಲ್ಲಿ ಮೊಸಳೆಯ ಚಿಹ್ನೆ; ಮಿಶ್ರಬಣ್ಣ ಅಥವಾ ಒಂದು ತುಂದಿನಾಕಾರ, ಎಡದಲ್ಲಿ ಒಂದು ರೇಖೆ ಇದ್ದಲ್ಲಿ ಆ ಮತ್ಸ್ಯಮೂರ್ತಿಯು ಪೂಜಕನಿಗೆ ಶುಭವನ್ನುಂಟುಮಾಡುವುದು.

ಮತ್ಸ್ಯಾಕೃತಿಂ ಮುಖಂ ಯತ್ರ ಮುಖಸಂದೃಶ್ಯ ಚಕ್ರಕಮ್ ।
ಶ್ರೀವತ್ಸ ಬಿಂದುಮಾಲಾಢ್ಯಂ ಮತ್ಸ್ಯಮೂರ್ತಿಃ ಪ್ರಕೀರ್ತಿತಮ್ ॥

ಮುಖವು ಮೀನಿನ ಮುಖದಂತೆ ಇದ್ದು ಮುಖದಲ್ಲಿಯೇ ಚಕ್ರ ಕಂಡುಬಂದರೆ, ಶ್ರೀವತ್ಸಚಿಹ್ನೆಯ ಬಿಂದು, ಶ್ರೀವತ್ಸಮಾಲೆ ಇದ್ದಲ್ಲಿ ಅದು ಮತ್ಸ್ಯಮೂರ್ತಿ ಎಂದೆನಿಸುವುದು.

ಮತ್ಸ್ಯಾಕಾರಂ ಮಹಾಸ್ನಿಗ್ಧಂ ಕಾಂಸ್ಯವರ್ಣಯುತಂ ತು ವಾ ।
ದ್ವಾರೇ ದ್ವಿಚಕ್ರಂ ಪುಚ್ಛೈಕಂ ಮತ್ಸ್ಯಮೂರ್ತಿಃ ಶುಭಪ್ರದಾ ॥

ಮೀನಿನಾಕಾರದ ಶಿಲೆಯು, ನುಣ್ಣಗಾದುದು, ಕಂಚಿನ ಬಣ್ಣವಿರುವುದು, ಮುಖದಲ್ಲಿ ೨ ಚಕ್ರ, ಬಾಲದಲ್ಲಿ ೧ ಚಕ್ರವಿರುವ ಮತ್ಸ್ಯಮೂರ್ತಿಯು ಶುಭಪ್ರದವಾದುದು.

ಅನ್ಯಮಧ್ಯೇ ದ್ವಿಚಕ್ರಂ ಚ ಪೃಷ್ಠೇ ವಾ ಸುಶಿರಂ ಭವೇತ್ ।
ಪಷ್ಠಭಾಗೇ ಚೈಕಚಕ್ರಂ ಮತ್ಸ್ಯಮೂರ್ತಿರುದಾಹೃತಾ ॥

ಮುಖದ ನಡುವೆ ೨ ಚಕ್ರ, ಪೃಷ್ಠ(ಹಿಂದಿನ)ಭಾಗದಲ್ಲಿ ತೂತು ಮತ್ತು ಒಂದು ಚಕ್ರವಿದ್ದರೆ ಅದು ಮತ್ಸ್ಯಮೂರ್ತಿ. ಈ ಮತ್ಸ್ಯಸಾಲಗ್ರಾಮವು ಐದು ರೀತಿಯಲ್ಲಿ ಆಗುತ್ತದೆ: ಚಿತ್ರವರ್ಣಮತ್ಸ್ಯ, ಶಕ್ತಿ ಮತ್ಸ್ಯ, ಶ್ರೀವತ್ಸಮತ್ಸ್ಯ, ಕಾಂಸ್ಯವರ್ಣಮತ್ಸ್ಯ, ಸುಶಿರಾಂಕಿತಮತ್ಸ್ಯ.

## ೨. ಮಹಾಕೂರ್ಮಮೂರ್ತಿ ಲಕ್ಷಣಮ್ :

ಕೂರ್ಮಃ ಸಮುನ್ನತಃ ಪೃಷ್ಠೇ ಶ್ವೇತಾಭೋಗಃ ಖುರಾನ್ವಿತಃ ।
ಆಸ್ಯೇ ದ್ವಿಚಕ್ರಯುಕ್ತಶ್ಚ ದುರ್ಲಭೋ ಹಿ ಶುಭಪ್ರದಃ ॥

ಬೆನ್ನು ಎತ್ತರ, ಬಿಳಿಯ ಬಣ್ಣ, ಗೊರಸು, ಉಗುರುಗಳ ಚಿಹ್ನೆ, ಮುಖದಲ್ಲಿ ೨ ಚಕ್ರಗಳಿದ್ದಲ್ಲಿ ಅತಿ ದುರ್ಲಭವಾದ ಕೂರ್ಮಮೂರ್ತಿಯು; ಇದು ಶುಭಪ್ರದವಾದದ್ದು.

ಬಿಂದುದ್ವಯಯುತಾ ಪೃಷ್ಠೇ ಶಂಖಚಕ್ರಯುತಾಪಿ ವಾ ।
ದೀರ್ಘದಕ್ಷಿಣ ವಾಮಾಸ್ಯಾ ತತ್ರ ಚಕ್ರದ್ವಯಾನ್ವಿತಾ ॥

ಕುಂಡಲತ್ರಯಯುಕ್ತಾ ಚ ಭಾನೋರ್ವಲಯಪಂಚಕೈಃ ।
ಭೂಷಿತಾ ಕೂರ್ಮಮೂರ್ತಿಃ ಸ್ಯಾತ್ ದುರ್ಲಭಾ ಸರ್ವಕಾಮದಾ ॥

ಬೆನ್ನಿನಲ್ಲಿ ೨ ಬಿಂದುಗಳು ಅಥವಾ ಶಂಖಚಕ್ರಚಿಹ್ನೆಗಳು, ಎಡಬಲಕ್ಕೆ ಉದ್ದವಾದ ಮುಖ, ಅದರೊಳಗೆ ೨ ಚಕ್ರ, ಹಾವಿನ ಸುತ್ತಿನಂತಹ ೨ ಸುತ್ತು ರೇಖೆಗಳು ಇರುವವು ಕೂರ್ಮಮೂರ್ತಿ. ಇದು ದುರ್ಲಭವು; ಆದರೆ ಸರ್ವಾಭೀಷ್ಟ ಕೊಡುವಂತಹದು.

ವೃತ್ತಯುತಾ ಕೂರ್ಮಮೂರ್ತಿಃ ಕನಕಚ್ಛವಿಸಂಯುತಾ ।
ಅಸ್ಯ ಚಕ್ರದ್ವಯೋಪೇತಾ ಚಕ್ರಸ್ಯೋಭಯ ಪಾರ್ಶ್ವತಃ ॥
ಸ್ನುಹಪುಷ್ಪಾಕೃತಿರ್ವಾಪಿ ಖಗೇಶಾನ ಶುಭಪ್ರದಾ ।

ದುಂಡಾಗಿ ಅಗಲವಾದ, ಚಿನ್ನದ ಕಾಂತಿಯಿಂದ ಕೂಡಿದ, ಮುಖದಲ್ಲಿ ೨ ಚಕ್ರಗಳಿರುವ, ಚಕ್ರದ ಎರಡೂ ಪಾರ್ಶ್ವಗಳಲ್ಲಿ ಕಳ್ಳಿಯ ಪುಷ್ಪದಂತಹ ಆಕಾರವಿರುವಂತಹದು 'ಕೂರ್ಮಮೂರ್ತಿ' ಎಂದು ಶ್ರೀಹರಿಯು ಗರುಡನಿಗೆ ಹೇಳಿರುವನು.

ವರ್ತುಲಾ ಕಮಲಾಕಾರ ದೀರ್ಘದ್ವಾರದ್ವಿಚಕ್ರಕಮ್ ॥

ನಾಭಿಚಕ್ರಯುತಾ ರಮ್ಯಾ ಕೂರ್ಮಾಕಾರಾ ತು ಪಾರ್ಶ್ವತಃ ।
ಸ್ಥಿರಾಸನಾ ಚ ತತ್ಪೃಷ್ಠ ಉನ್ನತಾ ನೀಲಲೋಹಿತಾ ॥

ಕೂರ್ಮಮೂರ್ತಿರಿತಿ ಖ್ಯಾತಾ ಪುತ್ರಪೌತ್ರಾದಿವೃದ್ಧಿತಾ ।

ದುಂಡಾಗಿ ತಾವರೆಯಂತಿರುವುದು, ಉದ್ದವಾದ ಮುಖದೊಳಗೆ ೨ ಚಕ್ರವಿರುವುದು, ೨ ಪಾರ್ಶ್ವಗಳಲ್ಲಿ ಆಮೆಯಂತಿರುವುದು, ಸ್ಥಿರವಾದ ಆಸನ, ಬೆನ್ನು, ಎತ್ತರ, ಕೆಂಪುಬಣ್ಣಗಳಿಂದ ಕೂಡಿರುವಂತಹುದು ಕೂರ್ಮ ಮೂರ್ತಿಯು. ಇದರ ಪೂಜಕನಿಗೆ ಪುತ್ರಪೌತ್ರಾದಿವೃದ್ಧಿಯನ್ನು ನೀಡುವುದು.

ಕೂರ್ಮಸ್ತತೋನ್ನತಃ ಪೃಷ್ಠೇ ವರ್ತುಲಶ್ಚಕ್ರಶೋಭಿತಃ ।
ಹರಿತಂ ವರ್ಣಮಾಧತ್ತೇ ದದ್ಯಾತ್ಫಲವನುತ್ತಮಮ್ ॥

ಬೆನ್ನು ಎತ್ತರವಾಗಿ, ಉರುಟಾಗಿ, ಚಕ್ರದಿಂದ ಶೋಭಿಸುತ್ತ, ಹಸಿರುಬಣ್ಣದಿಂದ ಕೂಡಿದ ಕೂರ್ಮಮೂರ್ತಿಯು ಅತ್ಯುನ್ನತ ಫಲವನ್ನೀಯುವುದು.

ತುರಂಗಮಸಮಾಕಾರಃ ಚಕ್ರಾಬ್ಜವನಮಾಲಿಕಃ ।
ಶ್ಯಾಮಲೋ ಹೇಮಬಿಂದುಃ ಶ್ರೀರ್ಮಹಾಕೂರ್ಮಃ ಸ್ಯುದುರ್ಲಭಃ ॥

ಕುದುರೆಯ ಆಕಾರದಂತಿದ್ದು, ಚಕ್ರ ಶಂಖ ವನಮಾಲೆಗಳ ಚಿಹ್ನೆಯಿಂದ ಕೂಡಿ, ಕೆಂಬಣ್ಣದಿಂದಿರುವ, ಚಿನ್ನದ ಬಿಂದುವಿನ ಶೋಭೆಯುಳ್ಳ ಅತೀ ದುರ್ಲಭವಾದ ಮಹಾಕೂರ್ಮವೆನಿಸುವುದು.

ಸುವೃತ್ತಂ ಸೂಕ್ಷ್ಮವದನಂ ದ್ವಾರೇ ಚಕ್ರದ್ವಯಾನ್ವಿತಮ್ ।
ನೀಲೋತ್ಪಲದಲಶ್ಯಾಮಂ ಪೃಷ್ಠಮಧ್ಯೇ ಸಮುನ್ನತಮ್ ॥

ಸ್ವರ್ಣರೇಖಾಯುತಂ ವಾಪಿ ಕೂರ್ಮಭೂರಿ ಸುದುರ್ಲಭಮ್ ।

ಉರುಟಾಗಿದ್ದು ಚಿಕ್ಕ ತೂತು, ಅದರಲ್ಲಿ ೨ ಚಕ್ರಗಳು, ಕೆನ್ನೈದಿಲೆಯಂತಹ ಬಣ್ಣ, ಬೆನ್ನಿನ ಮಧ್ಯೆ ಎತ್ತರ, ಚಿನ್ನದ ರೇಖೆ –ಇವುಗಳಿಂದ ಕೂಡಿದ ಕೂರ್ಮಮೂರ್ತಿಯು ಅತಿ ದುರ್ಲಭವಾದುದು.

ಕೂರ್ಮಶಾಲಗ್ರಾಮವು ೧೦ ರೀತಿಯಲ್ಲಿ ಆಗುತ್ತದೆ: ಮನೋರಥಕೂರ್ಮ, ಕಾಮಕೂರ್ಮ, ಸರ್ವಕಾಮ ಕೂರ್ಮ, ಪುತ್ರಪೌತ್ರಾಭಿವೃದ್ಧಿಕೂರ್ಮ(ಪುತ್ರಪ್ರದಾಯಕ), ಮಲಾಕೂರ್ಮ, ಅಚಕ್ರಕೂರ್ಮ, ಕಾಮಟಾಕಾರ ಕೂರ್ಮ, ಚಿತ್ರವರ್ಣ ಕೂರ್ಮ, ಅಂಡದ್ವಯಕೂರ್ಮ, ವರಾಹಕೂರ್ಮ.

## ೩. ವಾರಾಹಮೂರ್ತಿ ಲಕ್ಷಣಮ್ :

ಅತಸೀಕುಸುಮಪ್ರಖ್ಯಂ ನೀಲೋತ್ಪಲನಿಭಂ ತು ವಾ ।
ದೀರ್ಘಾಕಾರಂ ತಥಾ ದೀರ್ಘದ್ವಾರಯುಕ್ತಂ ಸುಚಕ್ರಕಮ್ ॥

ಪೃಷ್ಠೋನ್ನತಂ ತು ದೀರ್ಘಾಸ್ಯಂ ವಾಮತಶ್ಚಕ್ರಮುನ್ನತಮ್ ।
ಸ್ವರ್ಣರೇಖಾಸಮಾಯುಕ್ತಂ ವಾರಾಹಕೃತಿರೇವ ವಾ ॥
ವಾರಾಹಮೂರ್ತಿರಿತ್ಯುಕ್ತಂ ರಾಜ್ಯಲಕ್ಷ್ಮೀಪ್ರದಂ ನೃಣಾಮ್ ।

ಅಗಸೆ ಪುಷ್ಪದಂತಿರುವುದು ಅಥವಾ ಕೆನ್ನೈದಿಲೆಯ ಬಣ್ಣವುಳ್ಳದ್ದು, ಉದ್ದವಾದ ಆಕಾರವಿದ್ದು ಉದ್ದವಾದ ಮುಖದಲ್ಲಿ ಚಕ್ರವೂ ಎತ್ತರವಾದ ಬೆನ್ನು, ಎಡ ಪಾರ್ಶ್ವದಲ್ಲಿ ಎತ್ತರವಾಗಿ ಚಕ್ರದಿಂದ ಕೂಡಿರುವುದು, ಚಿನ್ನದ ರೇಖೆಯಿಂದ ಕಂಗೊಳಿಸುವುದು, ವರಾಹದ ಆಕಾರದಂತಿರುವುದು –ಇವು ವಾರಾಹಮೂರ್ತಿ ಶಾಲಗ್ರಾಮದ ಲಕ್ಷಣ; ಪೂಜಿಸುವವನಿಗೆ ರಾಜ್ಯಸಂಪತ್ತನ್ನು ಕೊಡುವುದು.

ವಾರಾಹಂ ಶಕ್ತಿಯೋಗಂ ತು ಚಕ್ರೇ ಚ ವಿಷಮೇ ಸ್ಥಿತೇ ॥
ಇಂದ್ರನೀಲನಿಭಂ ಸ್ಥೂಲಂ ತ್ರಿರೇಖಾಲಾಂಛನಂ ಶುಭಮ್ ।

ದಕ್ಷಪಾರ್ಶ್ವಸ್ಥಿತೇ ಚಕ್ರೇ ಸಮೇ ಲಗ್ನೇ ಪ್ರದೇಶತಃ ॥
ವನಮಾಲಾಯುತಂ ಲಕ್ಷ್ಮೀವರಾಹಃ ಪರಿಕೀರ್ತಿತಮ್ ।
ಪುತ್ರಪೌತ್ರಪ್ರದಂ ನಿತ್ಯಂ ಭೂಧನಜ್ಞಾನವರ್ಧನಮ್ ॥

ವಿಷಮಚಕ್ರ ಅಂದರೆ ಬೆಸಸಂಖ್ಯೆಯಲ್ಲಿ ಚಕ್ರವಿರುವುದು, ಲಕ್ಷ್ಮೀದೇವೀಸಹಿತವಾದದ್ದು ಎಂದರ್ಥ. ಇಂದ್ರನೀಲವರ್ಣದಿಂದ ಕೂಡಿರುವ, ದೊಡ್ಡದಾದ, ೩ ರೇಖೆಗಳಿಂದ ಕೂಡಿದ, ಬಲಭಾಗದಲ್ಲಿ ಸಮಾನಾಕಾರದ ಚಕ್ರಗಳಿಂದ ಕೂಡಿದ, ವನ ಮಾಲಾಚಿಹ್ನೆಯಿರುವ, **ಲಕ್ಷ್ಮೀ**ವರಾಹ ಶಾಲಗ್ರಾಮವು ಪುತ್ರಪೌತ್ರ ಧನಸಂಪತ್ತು ಜ್ಞಾನವೃದ್ಧಿಗಳನ್ನು ಉಂಟುಮಾಡತಕ್ಕದ್ದು.

ಅಧಶ್ಚಕ್ರಾದಿಕಲಿತಮೇಕದಂಷ್ಟ್ರಂ ಸಮುಚ್ಛ್ರಿತಮ್ ।
ಅಂಕುಶಾಕಾರವದನಂ ಭೂವರಾಹಂ ಶುಭಪ್ರದಮ್ ॥

ಕೆಳಮುಖವಾಗಿ ಚಕ್ರವಿದ್ದು, ಒಂದು ದಾಡೆಯ ಚಿಹ್ನೆ ಇರುವ, ಬೆನ್ನಿನ ಭಾಗ ಎತ್ತರವಿರುವ, ಅಂಕುಶದಂತಹ ಮುಖದಿಂದ ಕೂಡಿದ, ಭೂವರಾಹಮೂರ್ತಿಯು ಶುಭವನ್ನು ಕೊಡತಕ್ಕದ್ದು.

ಸುಖಾಸನಂ ಸುವೃತ್ತಾಭಂ ಸೂಕ್ಷ್ಮರಂಧ್ರಂ ಸುಚಕ್ರಕಮ್ ।
ಸುದಂಷ್ಟ್ರಾಭ್ಯಾಂ ಸಮೋಪೇತಂ ವಾರಾಹಂ ಧರಣೀಪ್ರದಮ್ ॥

ಸುಖವಾದ ಆಸನವಿರುವ, ಉರುಟಾದ, ಚಿಕ್ಕ ರಂಧ್ರವಿದ್ದು ಉತ್ತಮ ಚಕ್ರವನ್ನು ಹೊಂದಿರುವ, ೨ ದಾಡೆಗಳ ಚಿಹ್ನೆಯಿಂದ ಕೂಡಿದ ವಾರಾಹಮೂರ್ತಿಯು ಪೂಜಕನಿಗೆ ಭೂಸಂಪತ್ತನ್ನು ಕೊಡುವುದು.

**ದೀರ್ಘಘೋಣಸಮಾಯುಕ್ತಮೇಕದಂಷ್ಟ್ರಂ ಸುನಿರ್ಮಲಮ್ ।**
**ವನಮಾಲಯುತಂ ರಮ್ಯಂ ವರಾಹಂ ಬಹುಭಾಗ್ಯದಮ್ ॥**

ಉದ್ದವಾದ ಮೂಗು, ಒಂದು ದಾಡೆಯ ಚಿಹ್ನೆ, ನಿರ್ಮಲವಾದ ಆಕಾರ, ವನಮಾಲಾ ಚಿಹ್ನೆಗಳಿಂದ ಕೂಡಿರುವ ವರಾಹಮೂರ್ತಿಯು ಪೂಜಿಸುವವನಿಗೆ ಬಹಳ ಸಂಪತ್ತನ್ನು ಕೊಡುವುದು.

## ೩೮. ಲಕ್ಷ್ಮೀವರಾಹಮೂರ್ತಿ ಲಕ್ಷಣಮ್ :

**ದೀರ್ಘದ್ವಾರಯುತಃ ಸ್ನಿಗ್ಧೋ ದ್ವಾರಮಧ್ಯೇ ದ್ವಿಚಕ್ರಯುಕ್ ।**
**ವನಮಾಲಾಯುತೋ ರಮ್ಯೋ ಲಕ್ಷ್ಮೀವರಾಹಃ ಪರಿಕೀರ್ತಿತಃ ॥**

ಉದ್ದವಾದ ದ್ವಾರವಿದ್ದು ನುಣ್ಣಗಿರತಕ್ಕದ್ದು, ದ್ವಾರದಲ್ಲಿ ೨ ಚಕ್ರ, ವನಮಾಲೆಯ ಚಿಹ್ನೆ ಉಳ್ಳದ್ದು ಲಕ್ಷ್ಮೀವರಾಹಮೂರ್ತಿಯು.

**ಲಕ್ಷ್ಮೀವರಾಹೋ ವಿಜ್ಞೇಯೋ ರಕ್ತಬಿಂದುಸಮನ್ವಿತಮ್ ।**
**ಖುರದಂಷ್ಟ್ರಾದಿಸಂಯುಕ್ತಃ ಸರ್ವಕಾಮಫಲಪ್ರದಃ ॥**

ಕೆಂಪುಬಣ್ಣದ ಬಿಂದು, ಗೊರಸುದಾಡೆಗಳ ಚಿಹ್ನೆ ಇರುವ ಲಕ್ಷ್ಮೀವರಾಹಮೂರ್ತಿಯು ಸರ್ವಾಭೀಷ್ಟ ಗಳನ್ನೂ ಕೊಡತಕ್ಕದ್ದು.

**ದೀರ್ಘಾಸ್ಯಂ ಶ್ಯಾಮಲಾಕಾರಂ ಪೃಥ್ವೀವಲಯವೇಷ್ಟಿತಮ್ ।**
**ದ್ವಾರದೇಶೇ ಲಸಚ್ಚಕ್ರಂ ವರಾಹಂ ಪುಷ್ಟಿದಂ ನೃಣಾಮ್ ॥**

ದೀರ್ಘವಾದ ಮುಖ, ಕಪ್ಪುಬಣ್ಣ, ಭೂಮಂಡಲದ ಚಿಹ್ನೆಯ ಸುತ್ತ ದ್ವಾರದಲ್ಲಿ ಚಕ್ರವಿರುವುದು ವರಾಹ ಶಾಲಗ್ರಾಮ. ಇದು ಮನುಷ್ಯರಿಗೆ ಪುಷ್ಟಿಯನ್ನು ಕೊಡತಕ್ಕದ್ದು.

**ದೀರ್ಘದಕ್ಷಿಣವಾಮಾಸ್ಯಂ ದ್ವಾರಚಕ್ರಂ ಸಮೀಪಗಮ್ ।**
**ಬಿಂದುದ್ವಯಸಮಾಯುಕ್ತಂ ಶಂಖರೇಖಾದಿಲಾಂಛಿತಮ್ ॥**

**ಶ್ಯಾಮವರ್ಣಸಮಾಯುಕ್ತಂ ಭಾಗೇ ವಲಯಪಂಚಕಮ್ ।**
**ಕೂರ್ಮಪೂರ್ವವರಾಹಂ ಚ ಸರ್ವಭಾಗ್ಯಪ್ರದಂ ನೃಣಾಮ್ ॥**

ಎಡಬಲಕ್ಕೆ ಉದ್ದವಾದ ಮುಖ, ದ್ವಾರದಲ್ಲಿ ಸಮೀಪವಾಗಿ ಚಕ್ರ, ಕಪ್ಪುಬಣ್ಣ, ಒಂದು ಭಾಗದಲ್ಲಿ ಕಮಲ ಚಿಹ್ನೆಯು ಸುತ್ತಿರುವುದು. ಈ ಲಕ್ಷಣವಿರುವ ಶಿಲೆಯು ಕೂರ್ಮವರಾಹವೆನಿಸುವುದು. ಇದು ಪೂಜಕನಿಗೆ ಸರ್ವಭಾಗ್ಯಪ್ರದವಾದುದು.

**ಇಂದ್ರನೀಲನಿಭಾಜ್ಞೇಯಂ ಸ್ಥೂಲರೇಖಾತ್ರಯಾನ್ವಿತಾ ।**
**ವರಾಹಮೂರ್ತಿರ್ವಿಜ್ಞೇಯಾ ದುರ್ಲಭಾ ಸರ್ವಕಾಮದಾ ॥**

ಇಂದ್ರನೀಲಮಣಿಯಂತೆ ಕಪ್ಪಾಗಿ, ದೊಡ್ಡದಾದ ೩ ರೇಖೆಗಳಿಂದ ಕೂಡಿದ ವರಾಹಮೂರ್ತಿ ಶಾಲ ಗ್ರಾಮವು ದುರ್ಲಭವಾದುದು.

**ಸುಮುಖಂ ಸೂಕ್ಷ್ಮಚಕ್ರಂ ಚ ಉನ್ನತಂ ಮಸ್ತಕೋಪರಿ ।**
**ತ್ರಿಬಿಂದುನಾ ಸಮಾಯುಕ್ತಂ ವರಾಹಂ ಚ ಧನಪ್ರದಮ್ ॥**

ಅಂದವಾದ ಮುಖ, ಸೂಕ್ಷ್ಮವಾದ ಚಕ್ರ, ಎತ್ತರವಾದ ಬೆನ್ನು, ತಲೆಯ ಮೇಲೆ ೩ ಬಿಂದುಗಳಿರುವುದು **ವರಾಹ ಮೂರ್ತಿ**. ಇದು ಸಂಪತ್ತನ್ನು ತಂದುಕೊಡುತ್ತದೆ.

**ಮತ್ಸ್ಯಾದಿ ಸರ್ವಮೂರ್ತೀನಾಂ ವರಾಹಃ ಶ್ರೇಷ್ಠ ಉಚ್ಯತೇ ।**
**ಸರ್ವಕಾಮಪ್ರದೋ ನೃಣಾಂ ರಾಮಸಂಪೂಜನಂ ಯಥಾ ॥**

ಮತ್ಸ್ಯವೇ ಮೊದಲಾದ ಸರ್ವಮೂರ್ತಿಗಳ ಮಧ್ಯದಲ್ಲಿ ವರಾಹಮೂರ್ತಿಯು ಮನುಷ್ಯರಿಗೆ ಸರ್ವಾಭೀಷ್ಟಪ್ರದವಾಗಿ ಶ್ರೀರಾಮಮೂರ್ತಿಯಂತೆ ಪೂಜೆ ಮಾಡಲು ಅತಿಶ್ರೇಷ್ಠವಾದದ್ದು.

ವರಾಹ ಶಾಲಗ್ರಾಮವು ಹತ್ತು ರೀತಿಯಲ್ಲಿ ಆಗುತ್ತದೆ: ಶ್ಯಾಮಲವರಾಹ, ಶಕ್ತಿವರಾಹ, ಇಂದ್ರನೀಲ ವರಾಹ, ಅಂಕುಶಾಕಾರಭೂವರಾಹ, ಉರ್ವೀವರಾಹ, ಧಾನ್ಯವರಾಹ, ಅಮೃತ ವರಾಹ, ಭೂವರಾಹ, ಶ್ವೇತವರಾಹ, ಧರಣೀವರಾಹ, ಮೋಕ್ಷವರಾಹ, ಲಕ್ಷ್ಮೀವರಾಹ.

## ೪. ನೃಸಿಂಹಮೂರ್ತಿ ಲಕ್ಷಣಮ್ :

**ತತ್ರಾದೌ ದ್ವಿವಿಧೋ ಲಕ್ಷ್ಮೀನೃಸಿಂಹಾಖ್ಯ ಇಹೋಚ್ಯತೇ ॥**

**ವಾಮಪಾರ್ಶ್ವಸ್ಥಿತೇ ಚಕ್ರೇ ಕೃಷ್ಣವರ್ಣಸ್ಸಬಿಂದುಕಃ ।**
**ಲಕ್ಷ್ಮೀನೃಸಿಂಹೋ ವಿಖ್ಯಾತಃ ಸರ್ವಭಾಗ್ಯಪ್ರದೋ ನೃಣಾವಮ್ ॥**

ಆದಿಯಲ್ಲಿ ಲಕ್ಷ್ಮೀನೃಸಿಂಹಮೂರ್ತಿಯು ೨ ರೀತಿಯಲ್ಲಿದೆ. ಅದರಲ್ಲಿ ಎಡ ಪಾರ್ಶ್ವದಲ್ಲಿ ೨ ಚಕ್ರಗಳು, ಕಪ್ಪುಬಣ್ಣ, ಬಿಂದುಗಳು –ಇವುಗಳಿಂದ ಕೂಡಿದ 'ಲಕ್ಷ್ಮೀನೃಸಿಂಹಮೂರ್ತಿ'ಯು ಪೂಜಕರಿಗೆ ಸರ್ವಭಾಗ್ಯವನ್ನು ಕೊಡುವುದು.

**ನಾರಸಿಂಹಂ ಬೃಹದ್ವಕ್ತ್ರಂ ಕಾಪಿಲಂ ಕನಕಪ್ರದಮ್ ।**
**ಲಕ್ಷ್ಮೀನೃಸಿಂಹಂ ತನ್ನಾಮವಾಮಚಕ್ರದ್ವಯಾನ್ವಿತಮ್ ॥**

ವಿಶಾಲವಾದ ಮುಖ, ಕಪಿಲವರ್ಣ, ಎಡದಲ್ಲಿ ೨ ಚಕ್ರ, ಸ್ಥಿರವಾದ ಆಸನ, ಬಗ್ಗಿದ ಬೆನ್ನು ಇರುವ **ಲಕ್ಷ್ಮೀನೃಸಿಂಹ ಮೂರ್ತಿಯನ್ನು** ಪೂಜಿಸುವವರಿಗೆ ದ್ರವ್ಯವನ್ನೂ ಅಭೀಷ್ಟಗಳನ್ನೂ ಕೊಡತಕ್ಕುದು.

**ಸ್ಥೂಲಚಕ್ರದ್ವಯಂ ಮಧ್ಯೇ ಗುಂಜಲಾಕ್ಷಾಸವರ್ಣಕಮ್ ॥**
**ಸ್ಫುಟಿತಂ ವಿಷಮಂ ಚಕ್ರಂ ನಾರಸಿಂಹಂ ತು ಕಾಪಿಲಮ್ ।**
**ಸಂಪೂಜ್ಯ ಸಿದ್ಧಿಮಾಪ್ನೋತಿ ಸಭಾಯಾಂ ವಿಜಯೀ ಭವೇತ್ ॥**

ಮಧ್ಯದಲ್ಲಿ ದೊಡ್ಡದಾದ ೨ ಚಕ್ರಗಳು, ಗುಲುಗುಂಜಿ ಅಥವಾ ಅರಗಿನಂತೆ ಕೆಂಪುಬಣ್ಣ, ಮೂರನೇ ಚಕ್ರವು ಮೇಲಿನಿಂದ ಇರತಕ್ಕದ್ದು ನರಸಿಂಹಮೂರ್ತಿ. ಇದನ್ನು ಪೂಜಿಸುವವನು ಸಿದ್ಧಿಯನ್ನು ಹೊಂದುವನು. ಸಭೆಯಲ್ಲಿ ಜಯವನ್ನು ಪಡೆಯುವನು.

**ಅಂತಶ್ಚಕ್ರಂ ಬೃಹದ್ವಾರಂ ಬಹುವರ್ಣಂ ಬಹೂದರವ್ ।**
**ಪಾತಾಳನಾರಸಿಂಹಾಖ್ಯಂ ಭಿಕ್ಷೂಣಾಮಮೃತಪ್ರದಮ್ ॥**

ಒಳಗಿನಿಂದ ಚಕ್ರ, ದೊಡ್ಡ ದ್ವಾರ, ಅನೇಕ ಬಣ್ಣಗಳು, ವಿಶಾಲವಾದ ಹೊಟ್ಟೆ ಅಂದರೆ ಒಳಗಿನ ಪ್ರದೇಶ –ಈ ಲಕ್ಷಣಗಳಿಂದ ಕೂಡಿದ್ದಲ್ಲಿ ಆ ಮೂರ್ತಿಯು ಪಾತಾಳನರಸಿಂಹಮೂರ್ತಿ. ಇದು ಸನ್ಯಾಸಿಗಳಿಗೆ ಮೋಕ್ಷವನ್ನು ಕೊಡತಕ್ಕದ್ದು.

**ಅಸ್ಪಷ್ಟ ಚಕ್ರಮಲ್ಪಾಸ್ಯಮಲ್ಪಾಕಾರಂ ಮಹೋದರಮ್ ।**
**ತತ್ಕುಕ್ಷಿನಾರಸಿಂಹಾಖ್ಯಂ ವನಮಾಲಾವಿರಾಜಿತಮ್ ॥ (ವನವಾಸಿಭಿರರ್ಚಿತಮ್)**

ಚಕ್ರವು ಸ್ಪಷ್ಟವಾಗಿರದೆ, ಚಿಕ್ಕ ಮುಖವಿದ್ದು, ಚಿಕ್ಕದಾದ ಆಕಾರವಿದ್ದು, ಹೊಟ್ಟೆಯು ದೊಡ್ಡದಾಗಿ, ವನಮಾಲಾಚಿಹ್ನೆಯಿಂದ ಕೂಡಿದ ಶಾಲಗ್ರಾಮವೇ ಕುಕ್ಷಿನರಸಿಂಹ ಶಾಲಗ್ರಾಮವು. ಇದು ವನವಾಸಿಗಳಿಂದ ಪೂಜಿಸಲ್ಪಡತಕ್ಕದ್ದು.

**ಬ್ರಹ್ಮಚರ್ಯವಿಹೀನೇನ ನಾರಸಿಂಹೋಽರ್ಚಿತೋ ಯದಿ ।**
**ವ್ಯಾಧಿಪೀಡಾ ಭವೇತ್ತಸ್ಯ ವಹ್ನಿನಾ ದಹ್ಯತೇ ಗೃಹಮ್ ॥**

ಬ್ರಹ್ಮಚರ್ಯವ್ರತವಿಲ್ಲದವನು ನರಸಿಂಹಮೂರ್ತಿಯನ್ನು ಪೂಜಿಸಿದಲ್ಲಿ ರೋಗಬಾಧೆಯುಂಟಾಗುವುದು, ಆತನ ಮನೆಯು ಬೆಂಕಿಯಿಂದ ಸುಡಲ್ಪಡುವುದು.

**ವಿಕೃತಾಸ್ಯಂ ಮಧ್ಯಚಕ್ರಂ ವರ್ತುಲಂ ಕನಕಪ್ರದಮ್ ।**
**ನಾರಸಿಂಹಂ ಗೃಹಸ್ಥಾನಾಂ ಭೀತಿದಂ ಯತಿಪೂಜಿತಮ್ ॥**

ವಿಕಾರಮುಖ, ಮಧ್ಯದಲ್ಲಿ ಚಕ್ರ, ದುಂಡಗಾದ ಆಕಾರವಿರುವುದು, ಚಿನ್ನವನ್ನು ಕೊಡುವುದು, ಆದರೂ ಗೃಹಸ್ಥಾಶ್ರಮಿಗಳು ಇದನ್ನು ಪೂಜಿಸಿದಲ್ಲಿ ಭಯವನ್ನು ಕೊಡತಕ್ಕದ್ದು, ಇದು ಯತಿಗಳಿಂದ ಪೂಜಿಸಲ್ಪಡತಕ್ಕ ಶಾಲಗ್ರಾಮವಾಗಿದೆ (ಯತಿಗಳಿಗೆ ಯೋಗ್ಯವಾದದ್ದು.)

**ದ್ವಿಚಕ್ರಂ ದ್ವಿಮುಖಂ ಸ್ಥೂಲಂ ದೂರ್ವಾಭಂ ನೋನ್ನತಂ ಶಿರಃ ।**
**ದಾರಿದ್ರ್ಯಫಲದಂ ಪುಂಸಾಂ ವಿದ್ಯುಜ್ಜಿಹ್ವನೃಸಿಂಹಕಮ್ ॥**

೨ ಮುಖ, ೨ ಚಕ್ರ, ದೊಡ್ಡದಾದ ಆಕಾರ, ದುರ್ಲಭವಾದ ಗರಿಕೆಯ ಬಣ್ಣದಿಂದ ಕೂಡಿ, ಶಿರಸ್ಸು ಎತ್ತರವಾಗಿಲ್ಲದಿರುವ ವಿದ್ಯುಜ್ಜಿಹ್ವ ನರಸಿಂಹಮೂರ್ತಿಯು ಪೂಜಿಸದವರಿಗೆ ದಾರಿದ್ರ್ಯವನ್ನು ಕೊಡತಕ್ಕದ್ದು.

**ಸ್ಥೂಲಂ ಚ ವಿವೃತಾಸ್ಯಂ ಚ ನೀಲಂ ವಾ ಕಾಪಿಲಂ ಪೃಥು ।**
**ಮಹಾಬಲನೃಸಿಂಹಂ ತು ಯತಿಭಿಃ ಪೂಜ್ಯಮೇವ ತತ್ ॥**

ದೊಡ್ಡದಾದ ಆಕಾರ, ತೆರೆದ ಮುಖ, ನೀಲ ಅಥವಾ ಕಪಿಲವರ್ಣವಿರುವ ಮಹಾಬಲನೃಸಿಂಹ ಮೂರ್ತಿಯು ಯತಿಗಳಿಗೆ ಪೂಜಿಸಲು ಯೋಗ್ಯವಾದದ್ದು.

**ಪುರಃ ಪಾರ್ಶ್ವೇ ಚ ಪೃಷ್ಠೇ ಚ ಚಕ್ರೈರಪ್ಯತಿಶೋಭಿತಮ್ ।**
**ಅಧೋ ವಕ್ತ್ರಮಿತಿ ಖ್ಯಾತಂ ಯತೀನಾಂ ಮೋಕ್ಷದಂ ಸದಾ ॥**
**(ಅರ್ಚಕಾನಾಂ ವಿಮುಕ್ತಿದಮ್)**

ಇದಿರುಭಾಗದಲ್ಲಿ, ಪಾರ್ಶ್ವದಲ್ಲಿ, ಬೆನ್ನಿನಲ್ಲಿಯೂ ಚಕ್ರಗಳಿಂದ ಕೂಡಿದ ಅಧೋಮುಖ ನರಸಿಂಹ ಶಾಲಗ್ರಾಮವು ಯತಿಗಳಿಗೆ ಮೋಕ್ಷಪ್ರದವಾಗಿದೆ.

**ಸೂಕ್ಷ್ಮರಂಧ್ರಂ ದ್ವಿಚಕ್ರಾಢ್ಯಂ ವನಮಾಲಾವಿಭೂಷಿತಮ್ ।**
**ತದ್ಬಾಲನರಸಿಂಹಾಖ್ಯಂ ನೃಣಾಂ ಸಂಸಾರಮೋಚನಮ್ ॥ (ಸಂಸಾರಕೃದ್ಭವೇತ್)**

ಚಿಕ್ಕ ರಂಧ್ರ, ೨ ಚಕ್ರ, ವನಮಾಲೆಯ ಚಿಹ್ನೆಯಿಂದ ಕೂಡಿದ ಬಾಲನರಸಿಂಹಮೂರ್ತಿಯು ಪೂಜಕನಿಗೆ ಸಂಸಾರಸುಖ ವನ್ನು ಕೊಡತಕ್ಕದ್ದು ಅರ್ಥಾತ್ ಸಂಸಾರದುಃಖವನ್ನು ನಾಶಮಾಡತಕ್ಕದ್ದು.

ದೀರ್ಘಾಕಾರಂ ದೀರ್ಘಚಕ್ರಂ ಚಷಕಾಸ್ಯಂ ಬೃಹತ್ತರಃ ।
ವಿಭೀಷಣಮಿತಿಖ್ಯಾತಂ ಮಹಾದುಃಖಫಲಪ್ರದಮ್ ॥

ಉದ್ದವಾದ ಆಕಾರ, ಉದ್ದವಾದ ಚಕ್ರ, ಕೌಳಿಗೆ(ಪಾನಪಾತ್ರೆ)ಯಂತಹ ಮುಖ, ದೊಡ್ಡದಾಗಿರುವುದು, ವಿಭೀಷಣ ನರಸಿಂಹಮೂರ್ತಿಯು ತನ್ನನ್ನು ಪೂಜಿಸುವವನಿಗೆ ಮಹಾದುಃಖವನ್ನೀಯುವುದು.

ಯೋಗಾನಂದನೃಸಿಂಹಸ್ತು ಬಹುಬಿಂದುಸಮನ್ವಿತಃ ।
ಬಹುವರ್ಣಯುತಶ್ಚಾಪಿ ಭೋಗಮೋಕ್ಷಪ್ರದೋ ನೃಣಾಮ್ ॥

ಅನೇಕ ಬಿಂದುಗಳಿದ್ದು, ಅನೇಕ ಬಣ್ಣಗಳಿರುವ ಯೋಗಾನಂದ ನರಸಿಂಹಮೂರ್ತಿಯು ಪೂಜಿಸುವವರಿಗೆ ಇಹದಲ್ಲಿ ಭೋಗವನ್ನೂ ಪರದಲ್ಲಿ ಮೋಕ್ಷವನ್ನೂ ಕೊಡತಕ್ಕದ್ದು.

ಮಹಚ್ಚಕ್ರಾಂಕಿತಲಸತ್ ಸೂಕ್ಷ್ಮಚಕ್ರ ಬಿಲಾಂತರಮ್ ।
ಲಕ್ಷ್ಮೀನೃಸಿಂಹಂ ಕಪಿಲಂ ವರ್ಣತಃ ಕ್ಷೇತ್ರಭಾವನಾ ॥

ರಂಧ್ರಸಮೀಪದಲ್ಲಿ ಸೂಕ್ಷ್ಮವಾದ ಚಕ್ರಗಳುಳ್ಳ ಸ್ವಲ್ಪ ಕಪ್ಪು ಮಾಸಿದ ಬಣ್ಣವುಳ್ಳ ಮತ್ತು ದೊಡ್ಡ ಚಕ್ರವುಳ್ಳ ಕ್ಷೇತ್ರದಲ್ಲಿ ಭಕ್ತಿಯ ಕೇಂದ್ರವಾಗತಕ್ಕ ಶಾಲಗ್ರಾಮವೇ ಲಕ್ಷ್ಮೀನೃಸಿಂಹಮೂರ್ತಿ ಶಾಲಗ್ರಾಮವು.

ನೃಸಿಂಹ ಶಾಲಗ್ರಾಮಶಿಲೆಯಲ್ಲಿ ಒಟ್ಟು ೨೪ ಪ್ರಕಾರಗಳಿವೆ: ಲಕ್ಷ್ಮೀನರಸಿಂಹ (ಇದರಲ್ಲಿ ೩ ವಿಧಗಳಿವೆ) ಯೋಗಾನಂದನರಸಿಂಹ, ಬಾಲನರಸಿಂಹ, ವಿದ್ಯುಜ್ಜಿಹ್ವ ನರಸಿಂಹ, ವಿಭೀಷಣನರಸಿಂಹ, ಅಧೋಮುಖ ನರಸಿಂಹ, ಸರ್ವತೋಮುಖನರಸಿಂಹ, ರಾಕ್ಷಸನರಸಿಂಹ, ವಿದಾರುಣನರಸಿಂಹ, ಕುಕ್ಷಿನರಸಿಂಹ, ಭಿತ್ತಿ ನರಸಿಂಹ, ವಿಜಯನರಸಿಂಹ, ಕಪಿಲಾನೃಸಿಂಹ, ಜ್ವಾಲಾನರಸಿಂಹ, ಮಹಾಜ್ವಾಲಾನರಸಿಂಹ, ಶುದ್ಧನರಸಿಂಹ, ಬದ್ಧಚಕ್ರ ನರಸಿಂಹ, ದಂಷ್ಟ್ರೀ ಕರಾಲನರಸಿಂಹ, ವಕ್ರದಂಷ್ಟ್ರನರಸಿಂಹ, ಪಾತಾಲನರಸಿಂಹ, ಚತುಶ್ಚಕ್ರ ಲಕ್ಷ್ಮೀ ನರಸಿಂಹ, ಆಕಾಶ ನೃಸಿಂಹ.

## ೫. ವಾಮನಮೂರ್ತಿ ಲಕ್ಷಣಮ್ :

ಅತಿಹ್ರಸ್ವೋ ವರ್ತುಲಾಸ್ಯೋ ವಾಮನಃ ಪರಿಕೀರ್ತಿತಃ ।
ತಸ್ಯ ಮೂರ್ತಿಪ್ರಭೇದಂ ಚ ವಕ್ಷ್ಯೇ ಮೂಲಾನುಸಾರತಃ ॥

ಅತಿ ಗಿಡ್ಡವಾಗಿ ದುಂಡಾದ ಮುಖವಿರುವ ಮೂರ್ತಿಯು ವಾಮನನೆಂದು ಹೇಳಲ್ಪಟ್ಟಿದೆ. ಮೂಲ ಗ್ರಂಥದ ಆಧಾರದಿಂದ ಆ 'ವಾಮನಮೂರ್ತಿಭೇದ'ಗಳನ್ನು ವಿವರಿಸುವೆನು.

ಅತಸೀಪುಷ್ಪಸಂಕಾಶೋ ಬಿಂದುನಾ ಪರಿಭೂಷಿತಃ ।
ಅಸ್ಯ ಚಕ್ರದ್ವಯೋಪೇತೋ ಸರ್ವಭಾಗ್ಯಪ್ರದೋ ನೃಣಾಮ್ ॥

ಯೋ ವಾಮನಾಭಿಧೋ ದೇವಃ ಶ್ವೇತಬಿಂದುಯುತೋ ಮುಖೇ ।

ಅತಸಿಯ ಪುಷ್ಪದ ಬಣ್ಣವಿರುವ, ಬಿಂದುವಿನಿಂದ ಕೂಡಿದ, ಮುಖದಲ್ಲಿ ೨ ಚಕ್ರ ಮತ್ತು ಬಿಳಿಯ ಬಿಂದುವಿರುವ ವಾಮನಮೂರ್ತಿಯು ಪೂಜಕರಿಗೆ ಸಕಲ ಭಾಗ್ಯವನ್ನೀಯುವುದು.

ದಧಿವಾಮನಸಂಜ್ಞಃ ಸ್ಯಾದ್ಗೋಭೂಧಾನ್ಯಧನಪ್ರದಃ ॥

ಅಧಶ್ಚಕ್ರಾಗ್ರವಿಲಸದ್ದಧಿಬಿಂದುಸಮನ್ವಿತಃ ।
ವರ್ತುಲೋ ನೀಲರಕ್ತಾಭ ವದನೋ ದಧಿವಾಮನಃ ॥

ಕೆಳಗಿನಿಂದ ಚಕ್ರವಿದ್ದು ತುದಿಯಲ್ಲಿ ಮೊಸರಿನ ಬಿಂದು, ದುಂಡಗಾಗಿದ್ದು ನೀಲಬಣ್ಣವಿದ್ದುದು ದಧಿವಾಮನ ಮೂರ್ತಿ. ಇದು ದನಗಳು, ಭೂಮಿ, ಧಾನ್ಯ, ಧನಗಳನ್ನು ಕೊಡತಕ್ಕದ್ದು.

ಹ್ರಸ್ವಶ್ಚ ವರ್ತುಲಶ್ಚೈವ ಬಿಂದುನಾ ಪರಿಭೂಷಿತಃ ॥
ಶ್ಯಾಮೋ ವಾ ಕೃಷ್ಣವರ್ಣೋ ವಾ ಅಸ್ಯ ಚಕ್ರಸಮೀಪಗಃ ।
ಮಹಾವಾಮನ ಇತ್ಯುಕ್ತೋ ದುರ್ಲಭಸ್ಸರ್ವಕಾಮದಃ ॥

ಗಿಡ್ಡಾಗಿ, ದುಂಡಗಾಗಿ, ಮೇಲೆ ಬಿಂದುವಿದ್ದು, ನೀಲ ಅಥವಾ ಕಪ್ಪಾಗಿ, ಮುಖದ ಸಮೀಪದಲ್ಲಿ ಚಕ್ರವಿರುವ ಮಹಾವಾಮನಮೂರ್ತಿಯು ಅತಿ ದುರ್ಲಭವಾಗಿದ್ದು ಸರ್ವಾಭೀಷ್ಟಪ್ರದವು.

ಕೃಷ್ಣವರ್ಣಮತಿಸ್ನಿಗ್ಧಂ ಬಿಂದುನಾ ಪರಿಪೂಜಿತಮ್ ।
ಬಿಂದುದ್ವಯಯುತಂ ವಾಽಪಿ ವನಮಾಲಾಯುತಂ ತು ವಾ ॥

ಹ್ರಸ್ವಂ ಚ ವರ್ತುಲಾಕಾರಂ ವಾಮನಂ ಭುವಿ ದುರ್ಲಭಮ್ ।

ಕಪ್ಪಾಗಿ, ನುಣ್ಣಗಾಗಿ, ಮೇಲಿನಿಂದ ಬಿಂದುವಿದ್ದು ಅಥವಾ ೨ ಬಿಂದುಗಳಿದ್ದು ವನಮಾಲೆಯಿಂದ ಕೂಡಿ ಗಿಡ್ಡಾಗಿ ದುಂಡಗಾಗಿರುವ ವಾಮನಮೂರ್ತಿಯು ಭೂಮಿಯಲ್ಲಿ ಅತಿ ದುರ್ಲಭವಾಗಿದೆ.

ಕೃಷ್ಣವರ್ಣಮತಿಸ್ನಿಗ್ಧಂ ಸ್ಪಷ್ಟಚಕ್ರಸಮನ್ವಿತಮ್ ॥
ಹ್ರಸ್ವಮುನ್ನತಪೃಷ್ಠಂ ಚ ದೀರ್ಘಾಸ್ಯಂ ಚಾತಿಗಹ್ವರಮ್ ।
ಸ್ಫುರದ್ವಿರೇಖಾವಲಯಂ ನಾಭಿಚಕ್ರಸಮನ್ವಿತಮ್ ॥

ಏತಲ್ಲಕ್ಷಣಸಂಯುಕ್ತಂ ವಾಮನಂ ಭಾಗ್ಯನಾಯಕಮ್ ।
ಅನ್ನವೃದ್ಧಿಂ ಪ್ರಜಾವೃದ್ಧಿಂ ಭೂವೃದ್ಧಿಂ ಚ ದದಾತಿ ವೈ ॥

ಕಪ್ಪಾಗಿ, ನುಣ್ಣಗಾಗಿ, ಸ್ಪಷ್ಟಚಕ್ರವಿದ್ದು, ಗಿಡ್ಡಾಗಿ, ಬೆನ್ನು ಎತ್ತರವಾಗಿ ಉದ್ದವಾದ ಆಳವಾದ ಮುಖವಿದ್ದು ಮತ್ತು ಎರಡು ರೇಖೆಗಳಿದ್ದು ನಾಭಿಯಲ್ಲಿ ಚಕ್ರವಿರುವ ವಾಮನಮೂರ್ತಿ ಭಾಗ್ಯವನ್ನೀಯುವುದು. ಅನ್ನ, ಪ್ರಜೆ, ಭೂಮಿಗಳ ವೃದ್ಧಿಯನ್ನು ಮಾಡುವುದು.

ಮಧ್ಯಚಕ್ರಮತಿಹ್ರಸ್ವಮತಿಸ್ನಿಗ್ಧಂ ಚ ಕಾರ್ಷ್ಣಿಕಮ್ ।
ಹ್ರಸ್ವಂ ವಾಮನಂ ಪ್ರೋಕ್ತಂ ಸ್ಯಾದರ್ಚತಾಮಿಷ್ಟಸಿದ್ಧಿದಮ್ ॥

ಮಧ್ಯದಲ್ಲಿ ಚಕ್ರವಿದ್ದು, ಗಿಡ್ಡಗಾಗಿ, ನುಣ್ಣಗಾಗಿ, ಕಪ್ಪಾಗಿ, ಗಿಡ್ಡಾಗಿರುವುದು ವಾಮನಮೂರ್ತಿಯು. ಇದನ್ನು ಪೂಜಿಸು ವವನಿಗೆ ಇಷ್ಟವನ್ನು ಕೊಡುವುದು.

ವರ್ತುಲಂ ನೀಲಮೇಘಾಭಂ ವನಮಾಲಾಸಮನ್ವಿತಮ್ ।
ಸೂಕ್ಷ್ಮರಂಧ್ರಂ ಬೃಹತ್ಕುಕ್ಷಿ ವಾಮನಂ ಭುವಿದುರ್ಲಭಮ್ ॥

ದುಂಡಾಗಿ ನೀಲಮೇಘದಂತಿದ್ದು, ವನಮಾಲೆಯಿದ್ದು, ಚಿಕ್ಕ ರಂಧ್ರ, ದೊಡ್ಡ ಹೊಟ್ಟೆ ಇರುವುದು, ವಾಮನ ಮೂರ್ತಿ. ಇದು ಪೂಜಕರಿಗೆ ಸಂಪತ್ತನ್ನು ಕೊಡುವುದು.

ಇಂದ್ರನೀಲನಿಭಾಕಾರಂ ವನಮಾಲಾಂಬುಜೋಜ್ಜ್ವಲಮ್ ।
ಸ್ಪಷ್ಟಚಕ್ರದ್ವಯೋಪೇತಂ ವಾಮನಂ ಚೇಷ್ಟದಾಯಕಮ್ ॥

ಇಂದ್ರನೀಲಮಣಿಯಂತಹ ಬಣ್ಣ, ವನಮಾಲೆ ಮತ್ತು ತಾವರೆಯ ಚಿಹ್ನೆ ಇರುವ, ೨ ಚಕ್ರವಿರುವ ವಾಮನ ಮೂರ್ತಿಯು ಪೂಜಿಸುವವನಿಗೆ ಇಷ್ಟವನ್ನು ಕೊಡತಕ್ಕದ್ದು.

**ಅತಸೀಪುಷ್ಪಸಂಕಾಶಂ ಬಿಂದುನಾ ಪರಿಭೂಷಿತಮ್ ।**
**ಕುಂಡಲದ್ವಯಸಂಯುಕ್ತಂ ವಕ್ತ್ರೇ ವಾ ಬಿಂದುಸಂಯುತಮ್ ॥**

**ಹ್ರಸ್ವಂ ಚ ವರ್ತುಲಂ ಚೈವ ವಾಮನಂ ತ್ವರ್ಥಸಿದ್ಧಿದಮ್ ।**

ಅಗಸೆಯ ಪುಷ್ಪದಂತಹ ಬಣ್ಣ, ಬಿಂದುಗಳಿಂದ ಕೂಡಿ, ೨ ಸುತ್ತು ರೇಖೆ ಇದ್ದು, ಮುಖದಲ್ಲಿ ಬಿಂದುವಿದ್ದು ಕೂಡಾ ಗಿಡ್ಡವಾಗಿ ದುಂಡಾಗಿರುವುದು ವಾಮನಮೂರ್ತಿ. ಇದು ಸಂಪತ್ತನ್ನು ಕೊಡುವುದು.

**ಚಕ್ರಸ್ಯೋಭಯಪಾರ್ಶ್ವೇ ತು ಸ್ನುಹೇ ಪುಷ್ಪಾಕೃತಿರ್ಭವೇತ್ ।**
**ಕೇಸರಾಭಂ ತು ವೈ ತಾರ್ಕ್ಷ್ಯ ಪಾರ್ಶ್ವೇ ಚಕ್ರಂ ಪ್ರದೃಶ್ಯತೇ ।**
**ವಾಮನಂ ಗೃಹಿಣಾಂ ಶ್ರೇಷ್ಠಂ ಸುಖಸೌಭಾಗ್ಯವೃದ್ಧಿದಮ್ ॥**

ಚಕ್ರದ ೨ ಪಾರ್ಶ್ವಗಳಲ್ಲಿ ಕಳ್ಳಿಯ ಹೂವಿನಾಕಾರ, ಕೇಸರ ಬಣ್ಣ, ಪಾರ್ಶ್ವದಲ್ಲಿ ೨ ಚಕ್ರಗಳಿದ್ದಲ್ಲಿ ಅದು ವಾಮನ ಮೂರ್ತಿಯು. ಗೃಹಸ್ಥಾಶ್ರಮಿಗಳಿಗೆ ಸುಖಸೌಭಾಗ್ಯವನ್ನುಂಟುಮಾಡುವುದು.

ವಾಮನಶಾಲಗ್ರಾಮವು ಒಟ್ಟು ೨೧ ಪ್ರಕಾರಗಳಲ್ಲಿ ಇದು ಲಭ್ಯವಿದೆ:

ದಧಿವಾಮನ, ಶುದ್ಧವಾಮನ, ಅತಸೀಪುಷ್ಪವಾಮನ, ಹೇಮಾಂಗವಾಮನ, ಇಂದ್ರನೀಲವಾಮನ, ಚಿತ್ರ ಕುಂಡಲ ವಾಮನ, ಸೂಕ್ಷ್ಮದ್ವಾರವಾಮನ, ಭೂಲಾಭವಾಮನ, ಅಭೀಷ್ಟಾರ್ಥವಾಮನ, ಈಪ್ಸಿತವಾಮನ, ಕಾಮ್ಯವಾಮನ, ಬೃಹತ್‌ಕುಕ್ಷಿವಾಮನ, ದಧಿವಾಮನ (ಇನ್ನೊಂದು), ಉಜ್ಜ್ವಲವಾಮನ, ದಧಿಬುದ್ಬುದ ವಾಮನ, ರಕ್ತಬಿಂದು ವಾಮನ, ಮಹಾಭಾರವಾಮನ, ಶ್ಯಾಮಕೃಷ್ಣವಾಮನ, ಸಿತೋಮುಖವಾಮನ, ಅಂಡದ್ವಯವಾಮನ, ರಕ್ತನೀಲೋವಾಮನ.

## ೬. ಪರಶುರಾಮಮೂರ್ತಿ ಲಕ್ಷಣಮ್ :

**ಜಾಮದಗ್ನ್ಯಸ್ತು ಭಗವಾನ್ ದ್ವಿವಿಧಃ ಪರಿಕೀರ್ತಿತಃ ।**
**ಪೀತಂ ಕೃಷ್ಣ ಖುರೋಪೇತಂ ದೀರ್ಘಾಕಾರಂ ಬೃಹದ್ಬಲಮ್ ॥**

**ಭಿತ್ತಿಭಾಗೇ ಗತೇ ಚಕ್ರೇ ವಾಮೇ ವಾ ದಕ್ಷಿಣೇಽಪಿ ವಾ ।**
**ಚಕ್ರಭಾಗೇ ಗತೇ ಬಿಂದುಃ ಪರಶ್ವಾಕೃತಿರೇವ ವಾ ॥**

**ಪೃಷ್ಠೇ ವಾ ಪಾರ್ಶ್ವತೋ ವಾಽಪಿ ರೇಖಾದಂಷ್ಟ್ರಾಕೃತಿರ್ಭವೇತ್ ।**
**ಸರಾಮೋ ಜಾಮದಗ್ನ್ಯಃ ಸ್ಯಾತ್ ಅರ್ಚನೀಯೋ ಮಹಾತ್ಮಭಿಃ ॥**

ಪರಶುರಾಮಮೂರ್ತಿಯು ಎರಡು ತೆರನಾಗಿವೆ– ಬಿಳಿಯ ಬಣ್ಣ, ಕಪ್ಪುಗೊರಸಿನ ಆಕೃತಿ, ಉದ್ದವಾಗಿದ್ದು, ದೊಡ್ಡ ಹೊಟ್ಟೆ, ಎಡ ಅಥವಾ ಬಲಭಾಗದಲ್ಲಿ ಗೋಡೆಯಂತಿರುವಲ್ಲಿ ೨ ಚಕ್ರಗಳು, ಚಕ್ರದ ಬಳಿ ಬಿಂದುವಾಗಲಿ ಕೊಡಲಿಯ ಚಿಹ್ನೆಯಾಗಲಿ, ಬೆನ್ನಿನಲ್ಲಿ ಅಥವಾ ಪಾರ್ಶ್ವಗಳಲ್ಲಿ ಕೋರೆದಾಡೆಯಂತಹ ರೇಖೆ ಇದ್ದರೆ ಅದು ಪರಶುರಾಮಮೂರ್ತಿ ಶಾಲಗ್ರಾಮ. ಇದು ಮಹಾತ್ಮರಿಗೆ ಪೂಜೆಗೆ ಯೋಗ್ಯವಾದದ್ದು.

**ಕೇವಲಂ ಲಾಂಛಿತಂ ಪೃಷ್ಠೇ ಪರಶ್ವಾಕೃತಿರೇಖಯಾ ।**
**ಸ ಜಾಮದಗ್ನಿರ್ಭಗವಾನ್ ಶಾಂತಾಖ್ಯಃ ಶಾಂತಿದೋ ನೃಣಾಮ್ ॥**

ಬೆನ್ನಿನಲ್ಲಿ ಕೊಡಲಿಯ ಚಿಹ್ನೆ ಇದ್ದರೆ ಶಾಂತ ಪರಶುರಾಮಮೂರ್ತಿಯು. ಇದನ್ನು ಪೂಜಿಸುವವರಿಗೆ ಶಾಂತಿಯನ್ನುಂಟು ಮಾಡುವುದು. ಇದರಲ್ಲಿ ಒಟ್ಟು ೪ ವಿಧಗಳಿವೆ: ರಾಜಪೂಜ್ಯಪರಶುರಾಮ, ಶಾಂತಪರಶುರಾಮ, ಅತಸಿಪುಷ್ಪಪರಶುರಾಮ, ದೂರ್ವಾಭ ಪರಶುರಾಮ.

## ೭. ಶ್ರೀರಾಮಮೂರ್ತಿ ಲಕ್ಷಣಮ್ :

ಅಪ್ಪದಾ ರಾಮಮೂರ್ತಿಃ ಸ್ಯಾದ್ವೀರರಾಮವಿಭೇದತಃ ।
ಸೀತಾರಾಮಸ್ತು ತತ್ರಾಪಿ ದ್ವಿವಿಧಃ ಪರಿಕೀರ್ತಿತಃ ॥

ಕೋದಂಡೀ ಕುಕ್ಕುಟಾಂಡಾಭಂ ಶ್ಯಾಮಲಂ ಪೃಷ್ಠ ಉನ್ನತಮ್ ।
ರೇಖಾದ್ವಯಸಮಾಯುಕ್ತಂ ದ್ವಾರಪಾರ್ಶ್ವೇ ಖಗೇಶ್ವರಃ ॥

ಧನುರ್ಬಾಣಾಕೃತೀ ರೇಖಾ ದೃಶ್ಯತೇ ಪಾರ್ಶ್ವತೇಽಥವಾ ।
ಪೃಷ್ಠತೋ ವಾ ಭವೇದ್ರಾಮೋ ದಶಕಂಠಕುಲಾಂತಕಃ ॥

ಬಾಣತೂಣೀರಚಾಪಾಢ್ಯಃ ಕುಂಡಲಸ್ರಕ್ ಸಮನ್ವಿತಃ ।
ಸೂಕ್ಷ್ಮಕೇಸರಚಕ್ರಾಢ್ಯೋ ವೀರರಾಮಃ ಶ್ರಿಯಾವಹಃ ॥

ಬಿಲ್ಲಿನ ಚಿಹ್ನೆಯಿದ್ದು, ಕೋಳಿಮೊಟ್ಟೆಯ ಆಕಾರ, ನೀಲವರ್ಣ, ಎತ್ತರವಾದ ಬೆನ್ನು, ಮುಖದ್ವಾರದಲ್ಲಿ ೨ ಚಕ್ರಗಳಿರುವುದು, ಬಿಲ್ಲುಬಾಣಗಳ ಚಿಹ್ನೆಗಳು ಪಾರ್ಶ್ವಗಳಲ್ಲಾಗಲಿ ಬೆನ್ನಿನಲ್ಲಾಗಲಿ ಇದ್ದರೆ ರಾವಣ ವಂಶನಾಶಕನಾದ ಶ್ರೀರಾಮಮೂರ್ತಿ ಎಂದು ತಿಳಿಯಬೇಕು. ಬಾಣ, ಬತ್ತಳಿಕೆ, ಬಿಲ್ಲುಗಳ ಚಿಹ್ನೆಗಳು, ಒಂಟಿಗಳು, ಪುಷ್ಪಮಾಲೆಗಳ ಚಿಹ್ನೆಗಳು, ಚಿಕ್ಕದಾದ ಕೇಸರ 'ಉಳ್ಳ ಚಕ್ರಗಳಿದ್ದರೆ ವೀರರಾಮಮೂರ್ತಿ. ಸೀತಾದೇವಿಯೊಡನೆ ಇರತಕ್ಕ ಈ ಮೂರ್ತಿಯು ಸಂಪತ್ತನ್ನು ಕೊಡತಕ್ಕದ್ದು.

ದೀರ್ಘಾಕಾರಃ ಶ್ಯಾಮವರ್ಣಶ್ಚಕ್ರದ್ವಯಮುಖಾನ್ವಿತಃ ।
ವಾಮಭಾಗೇ ತ್ವೇಕಚಕ್ರಃ ಸೀತಾರಾಮಸ್ತ್ರಿಚಕ್ರಕಃ ॥

ಉದ್ದವಾದ ಆಕಾರ, ನೀಲವರ್ಣ, ಮುಖದಲ್ಲಿ ೨ ಚಕ್ರಗಳು, ಎಡಭಾಗದಲ್ಲಿ ಒಂದು ಚಕ್ರ. ಈ ಚಿಹ್ನೆಗಳಿದ್ದು ೩ ಚಕ್ರಗಳಿಂದ ಕೂಡಿದುದು ಸೀತಾರಾಮಮೂರ್ತಿ.

ದೀರ್ಘಾಕಾರಃ ಕೃಷ್ಣವರ್ಣಃ ಆಸ್ಯದ್ವಯಸಮಾಯುತಃ ।
ಚತುಶ್ಚಕ್ರೈರುಪೇತೋ ಯಃ ಸೀತಾರಾಮೋ ಧನಪ್ರದಃ ॥

ಉದ್ದವಾದ ಆಕಾರ, ಕಪ್ಪುಬಣ್ಣ, ಎರಡು ಮುಖಗಳು, ನಾಲ್ಕುಚಕ್ರಗಳಿದ್ದಲ್ಲಿ ಸೀತಾರಾಮಮೂರ್ತಿ. ಇದರ ಪೂಜೆ ಮಾಡಿದವನಿಗೆ ಧನಪ್ರದವಾಗುವುದು.

ಆಸ್ಯತ್ರಯಸಮಾಯುಕ್ತಃ ಷಟ್ಚಕ್ರಃ ಪಂಚಭಿಸ್ತು ವಾ ।
ಬಾಣರೇಖಾ ಸಮಾಯುಕ್ತಃ ಸೀತಾರಾಮಃ ಶುಭಪ್ರದಃ ॥

ಮೂರು ದ್ವಾರಗಳು, ಆರು ಅಥವಾ ಐದು ಚಕ್ರಗಳು, ಬಾಣರೇಖೆ ಇದ್ದರೆ ಸೀತಾರಾಮಮೂರ್ತಿ. ಇದು ಪೂಜೆ ಮಾಡಿದವನಿಗೆ ಧನಪ್ರದವೂ, ಶುಭಪ್ರದವೂ ಆಗುತ್ತದೆ.

ದಿವ್ಯಬಾಣೇನ ಸಂಯುಕ್ತಶ್ಚಾಪತೂಣೀರಸಂಯುತಃ ।
ಕರಾಲವದನೋ ರಕ್ತೋ ಬಿಂದುಯುಕ್ಚಕ್ರಶೋಭಿತಃ ॥

ಸಸ್ಯಾದ್ವಿಜಯರಾಮಾಖ್ಯಃ ಕೇಸರೋಪೇತ ಚಕ್ರಕಃ ।
ಮೂರ್ಧ್ನಿಃ ಮಾಲಾಧನುರ್ಬಾಣಾ ಪಾರ್ಶ್ವೇ ಖುರಯುಗಂ ತಥಾ ॥

ಹೃಷ್ಟರಾಮ ಇತಿ ಖ್ಯಾತೋ ಭುಕ್ತಿಮುಕ್ತಿಫಲಪ್ರದಃ ।

ಉತ್ತಮ ಬಾಣ, ಬಿಲ್ಲು, ಬತ್ತಳಿಕೆ ಚಿಹ್ನೆಗಳು, ದೊಡ್ಡಮುಖ, ಕೆಂಪುಬಣ್ಣ, ಬಿಂದುವಿನಿಂದ ಕೂಡಿದ ಚಕ್ರಗಳಿದ್ದು ಶಿರಸ್ಸಿನಲ್ಲಿ ಮಾಲೆ, ಪಾರ್ಶ್ವಗಳಲ್ಲಿ ಬಿಲ್ಲುಬಾಣಗಳಿದ್ದರೆ ಮತ್ತು ಗೊರಸಿನ ಚಿಹ್ನೆ ಇದ್ದರೆ ಹೃಷ್ಟರಾಮಮೂರ್ತಿ. ಇದು ಇಹಪರಗಳಲ್ಲಿ ಭೋಗಮೋಕ್ಷಗಳನ್ನು ಕೊಡತಕ್ಕದ್ದು.

ಪೃಷ್ಠಭಾಗೇ ಪಂಚರೇಖಾಃ ಚಾಪಬಾಣೇ ಚ ಪಾರ್ಶ್ವಯೋಃ ।
ಬಲರಾಮೋಽಪಿ ವಿಜ್ಞೇಯಃ ಪುತ್ರದಾಯೀ ಧನಪ್ರದಃ ॥

ಬೆನ್ನಿನಲ್ಲಿ ೫ ರೇಖೆಗಳು, ಪಾರ್ಶ್ವಗಳಲ್ಲಿ ಬಿಲ್ಲುಬಾಣಗಳಿದ್ದಲ್ಲಿ ಬಲರಾಮಮೂರ್ತಿ ಎಂದರೆ ಬಲವುಳ್ಳ ರಾಮಮೂರ್ತಿ ಎಂದರ್ಥ. ಈ ಮೂರ್ತಿಯನ್ನು ಪೂಜಿಸಿದಾತನಿಗೆ ಪುತ್ರಸಂತಾನವನ್ನೂ ಧನವನ್ನೂ ಕೊಡತಕ್ಕುದು.

ಧನುಷಾ ತು ಸುಸಂಯುಕ್ತೋ ದ್ವಿಚಕ್ರಃ ಕಿಂಚಿದಾಯತಃ ।
ಕೋದಂಡರಾಮೋ ವಿಜ್ಞೇಯಃ ಶುದ್ಧನೀಲಾಂಬುದಪ್ರಭಃ ॥

ಬಿಲ್ಲಿನ ಚಿಹ್ನೆ, ೨ ಚಕ್ರಗಳು, ಸ್ವಲ್ಪ ಉದ್ದವಾದ ಆಕಾರ, ನೀಲಮೇಘಕಾಂತಿಯುಳ್ಳದ್ದು ಕೋದಂಡರಾಮ.

ಕೋದಂಡೀ ಕುಕ್ಕುಟಾಂಡಾಭಃ ಶ್ಯಾಮಲಃ ಪೃಷ್ಠತೋನ್ನತಃ ।
ಸವ್ಯಾಪಸವ್ಯತೂಣೀರೌ ಪೃಷ್ಠೇ ಛಿದ್ರಸಮನ್ವಿತಃ ॥

ರಾವೋ ದಾಶರಥಿರ್ಜ್ಞೇಯೋ ದುರ್ಲಭೋ ಭುವನತ್ರಯೇ ।

ಬಿಲ್ಲು, ಕೋಳಿಮೊಟ್ಟೆಯಂತಹ ಆಕಾರ, ಕಪ್ಪುಬಣ್ಣ, ಬೆನ್ನು ಎತ್ತರ, ಎಡಬಲಗಳಲ್ಲಿ ಬತ್ತಳಿಕೆಗಳು, ಬೆನ್ನಿನಲ್ಲಿಯೂ ಹೊಕ್ಕುಳಿನಲ್ಲಿಯೂ ಕಲ್ಪವೃಕ್ಷದ ಚಿಹ್ನೆ, ಬೆನ್ನಿನಲ್ಲಿ ರಂಧ್ರಗಳಿದ್ದರೆ ದಾಶರಥಿರಾಮ. ಇದು ೩ ಲೋಕಗಳಲ್ಲಿಯೇ ದುರ್ಲಭವಾದದ್ದು.

ರೇಖಾಕಾರಾ ಧನುರ್ಬಾಣೌ ಸ್ಥೂಲಂ ದೀರ್ಘಸಬಿಂದುಕಮ್ ।
ನಾಭಿಚಕ್ರಂ ಬಹುಛಿದ್ರಂ ರಾಮಂ ದಾಶರಥಿಂ ವಿದುಃ ॥

ಬಿಲ್ಲುಬಾಣಗಳ ರೇಖೆಗಳು, ದೊಡ್ಡದಾದ ಆಕಾರ, ಉದ್ದವಾದ ಬಿಂದು, ಹೊಕ್ಕುಳಿನಲ್ಲಿ ಚಕ್ರ, ಅನೇಕ ಛಿದ್ರಗಳಿದ್ದರ ಅದು ದಾಶರಥಿರಾಮನ ಮೂರ್ತಿ.

ಏಕಚಕ್ರಂ ತು ವದನೇ ಕೃಷ್ಣವರ್ಣಾತಿಶೋಭಿತಾ ।
ಸಾ ರಾಮಮೂರ್ತಿರ್ವಿಜ್ಞೇಯಾ ಪೂಜಿತಾಮಿಷ್ಟದಾಯಿನೀ ॥

ಮುಖದಲ್ಲಿ ಒಂದು ಚಕ್ರ, ಕಪ್ಪುಬಣ್ಣವಿರುವುದು ರಾಮಮೂರ್ತಿ. ಇದನ್ನು ಪೂಜಿಸುವವನಿಗೆ ಇದು ಇಷ್ಟಾರ್ಥ ವನ್ನೀಯುವುದು.

ಜಂಬೂಫಲಸಮಾಕಾರಂ ಕೃಷ್ಣವರ್ಣಂ ಸಬಿಂದುಕಮ್ ।
ಲಲಾಟೇ ಹೇಮರೇಖಾ ಚ ಬಿಂದುನಾ ಧನುಷಾಯುತಮ್ ॥

ಗೋಪಾಲಕ್ಷೇತ್ರಮುತ್ಪತ್ತ್ಯಾ ತದ್ರಾಮಸ್ಯ ಚ ಲಕ್ಷಣಮ್ ।
ಅಪುತ್ರೋ ಲಭತೇ ಪುತ್ರಾನ್ ಧನಕಾಮೋ ಲಭೇದ್ಧನಮ್ ॥

ನೇರಳೆಹಣ್ಣಿನ ಆಕಾರ, ಕಪ್ಪುಬಣ್ಣ, ಬಿಂದುಗಳು, ಹಣೆಯಲ್ಲಿ ಚಿನ್ನದ ರೇಖೆ, ಬಿಂದು ಮತ್ತು ಬಿಲ್ಲಿನ ಚಿಹ್ನೆ ಇರುವ **ರಾಮಮೂರ್ತಿ ಗೋಪಾಲಕ್ಷೇತ್ರ**ವೆನಿಸುತ್ತದೆ. ಇದರ ಪೂಜೆಯಿಂದ ಪುತ್ರಾಪೇಕ್ಷಿಯು ಪುತ್ರರನ್ನೂ, ದ್ರವ್ಯಾಪೇಕ್ಷಿಯು ದ್ರವ್ಯವನ್ನೂ ಪಡೆಯುವನು.

## ೭೮. ಸೀತಾರಾಮಮೂರ್ತಿ ಲಕ್ಷಣಮ್ :

ಕೃಷ್ಣವರ್ಣೋ ಧನುಃ ಪಾರ್ಶ್ವೇ ವನಮಾಲೋಪಶೋಭಿತಃ ।
ಭಾನುತ್ರಯಸಮಾಯುಕ್ತಃ ಸ್ವರ್ಣಬಿಂದುಶ್ಚ ಮಸ್ತಕೇ ॥

ಜಾನಕೀವಲ್ಲಭೋ ರಾಮಃ ಸರ್ವಸಿದ್ಧಿಪ್ರದೋರ್ಚತಾಮ್ ।

ಕಪ್ಪುಬಣ್ಣ, ಪಾರ್ಶ್ವದಲ್ಲಿ ಬಿಲ್ಲಿನ ಚಿಹ್ನೆ, ವನಮಾಲೆ, ೩ ಸೂರ್ಯಮಂಡಲಚಿಹ್ನೆಗಳು, ತಲೆಯಲ್ಲಿ ಸುವರ್ಣಬಿಂದು ಇದ್ದರೆ ಸೀತಾರಾಮಮೂರ್ತಿ. ಇದು ಪೂಜಿಸುವವನಿಗೆ ಸರ್ವಸಿದ್ಧಿಯನ್ನು ಕೊಡುವುದು.

ಚಾಪಬಾಣಾಂಕುಶೈಸ್ತತ್ರ ಧ್ವಜಚಾಮರಸಂಯುತಃ ।
ವನಮಾಲಾಯುತೋ ವಾಪಿ ಸೀತಾರಾಮಃ ಪ್ರಕೀರ್ತಿತಃ ॥

ಬಿಲ್ಲು, ಬಾಣ, ಅಂಕುಶ, ಧ್ವಜ, ಚಾಮರ, ವನಮಾಲೆಗಳ ಚಿಹ್ನೆಗಳಿದ್ದರೆ ಕೂಡಾ ಸೀತಾರಾಮಮೂರ್ತಿಯೆಂದೆನಿಸುವುದು.

ದೀರ್ಘಾಕಾರಂ ಕೃಷ್ಣವರ್ಣಮಧೋ ವಕ್ತ್ರಂ ಸಕುಂಡಲಮ್ ।

ಚಾಪತೂಣೀರಬಾಣಾಢ್ಯಂ ಬಹಿಶ್ಚಕ್ರಸಮನ್ವಿತಮ್ ।
ಸೀತಾರಾಮಮಿತಿ ಖ್ಯಾತಂ ಭುಕ್ತಿಮುಕ್ತಿಫಲಪ್ರದಮ್ ॥

ಉದ್ದವಾದ ಆಕಾರ, ಕೆಳಮುಖವಾಗಿದ್ದು, ಕಪ್ಪುಬಣ್ಣ, ಕುಂಡಲದಿಂದ ಕೂಡಿದ್ದು, ಬಿಲ್ಲುಬಾಣ ಬತ್ತಳಿಕೆ ಚಿಹ್ನೆಗಳು, ಹೊರಗಿನಿಂದ ಚಕ್ರವಿರುವುದು ಸೀತಾರಾಮಮೂರ್ತಿ. ಇದನ್ನು ಭಜಿಸುವವನಿಗೆ ಐಹಿಕಭೋಗ, ಪರತ್ರ ಮೋಕ್ಷಗಳನ್ನು ನೀಡತಕ್ಕದ್ದು.

ರೇಖಾಕಾರಧನುರ್ಬಾಣಶಿರಶ್ಚಕ್ರಂ ಸಮುನ್ನತಮ್ ।
ಕಲ್ಪದ್ರುಮಸಮಾಯುಕ್ತಂ ದ್ವೇದ್ವೇ ಚಕ್ರೇ ತು ಪಾರ್ಶ್ವಯೋಃ ॥

ಪಟ್ಟಾಭಿರಾಮ ಇತ್ಯುಕ್ತಂ ದುರ್ಲಭಂ ಭುವನತ್ರಯೇ ।

ಬಿಲ್ಲುಬಾಣಗಳ ರೇಖೆಗಳು, ತಲೆಯಲ್ಲಿ ಚಕ್ರ, ಎತ್ತರವಾಗಿರುವುದು, ಕಲ್ಪವೃಕ್ಷದ ಚಿಹ್ನೆ, ೨ ಪಾರ್ಶ್ವಗಳಲ್ಲಿ ಎರಡೆರಡು ಚಕ್ರಗಳಿರುವ ಪಟ್ಟಾಭಿರಾಮ ೩ ಲೋಕಗಳಲ್ಲಿ ದುರ್ಲಭವಾದದ್ದು.

ಮಧ್ಯಾಸ್ಯೇ ರಾಮಚಕ್ರಂ ಸ್ಯಾತ್ಸೀತಾ ಚಕ್ರಂ ತು ವಾಮಗಮ್ ॥

ಭಾಗೇ ಲಕ್ಷ್ಮಣಚಕ್ರಂ ತದ್ದಕ್ಷಿಣೇ ಪಾರ್ಶ್ವಚಕ್ರಯೋಃ ।
ಶತ್ರುಘ್ನಭರತೋಪೇತಂ ಆಸನೋಪರಿ ಚಾಗ್ರತಃ ॥

ಜಂಬೂಫಲಸಮಾಕಾರಂ ತೂಣೀರದ್ವಯಮುಂಡಿತಮ್ ।
ಧ್ವಜಚಾಮರಸಂಯುಕ್ತಂ ಬಾಣಬಾಣಾಸನೋಜ್ಜ್ವಲಮ್ ॥

ಸ್ವರ್ಣಬಿಂದುರಚಿತಂ ಕೃಷ್ಣಮುನ್ನತಮಸ್ತಕಮ್ ।
ಪಟ್ಟಾಭಿಷಿಕ್ತಂ ಶ್ರೀರಾಮಂ ಪರಿವಾರಸಮನ್ವಿತಮ್ ॥

ಆಯುರಾರೋಗ್ಯಫಲದಂ ಪುತ್ರಪೌತ್ರಾದಿವೃದ್ಧಿದಮ್ ।
ಸರ್ವಭಾಗ್ಯಪ್ರದಂ ತಸ್ಮಾದ್ರಾಮಮೂರ್ತಿಂ ಪ್ರಪೂಜಯೇತ್ ॥

ಮಧ್ಯಮುಖದಲ್ಲಿ ಶ್ರೀರಾಮಚಕ್ರ, ಎಡದಲ್ಲಿ ಸೀತಾಚಕ್ರ, ಬಲಭಾಗದಲ್ಲಿ ಲಕ್ಷ್ಮಣಚಕ್ರ, ಆಸನದಲ್ಲಿ ಶತ್ರುಘ್ನಚಕ್ರ, ತಲೆ ಯಲ್ಲಿ ಭರತಚಕ್ರ, ನೇರಳೆಹಣ್ಣಿನ ಆಕಾರ, ೨ ಬತ್ತಳಿಕೆಗಳ ಚಿಹ್ನೆ, ಧ್ವಜಚಾಮರಚಿಹ್ನೆ, ಬಿಲ್ಲುಬಾಣಗಳ ಚಿಹ್ನೆ, ಕಪ್ಪುಬಣ್ಣ, ತಲೆ ಎತ್ತಿರುವ ಪರಿವಾರದಿಂದ ಕೂಡಿದ ಪಟ್ಟಾಭಿಷಿಕ್ತರಾಮಮೂರ್ತಿ ಆರಾಧಿಸುವವನಿಗೆ ಆಯುಸ್ಸು, ಆರೋಗ್ಯ, ಪುತ್ರಪೌತ್ರಾದಿಸಂತಾನವೃದ್ಧಿ ಸರ್ವಭಾಗ್ಯಗಳನ್ನು ಕೊಡತಕ್ಕದ್ದು.

ಇದರಲ್ಲಿ ಒಟ್ಟು ೨೪ ವಿಧಗಳಿವೆ: ದಶರಥರಾಮ, ಪಟ್ಟಾಭಿರಾಮ, ಸೀತಾರಾಮ (೧ರಿಂದ ೭ ಚಕ್ರಗಳುಳ್ಳದ್ದು), ವೀರರಾಮ, ಬಾಲರಾಮ, ದಶಕಂಠಕುಲಾಂತಕರಾಮ, ಪರಿವಾರ ಪಟ್ಟಾಭಿರಾಮ (೪ ಚಕ್ರ ಗಳುಳ್ಳದ್ದು), ವಿಜಯರಾಮ, ಶ್ರೀರಾಮ, ಗೋಪಾಲರಾಮ, ವನರಾಮ, ಯೋಗರಾಮ, ರಾಮಪಂಜರ, ರಾಮಬಾಣ, ತ್ರಿಚಕ್ರಬಲರಾಮ, ಕಲಿನಾಶಕರರಾಮ, ತ್ರಿಚಕ್ರಬಾಲರಾಮ, ಏಕಚಕ್ರರಾಮ –ಇತ್ಯಾದಿ.

## ೭ಆ. ಬಲರಾಮಮೂರ್ತಿ ಲಕ್ಷಣಮ್ :

ಪೃಷ್ಠಭಾಗೇ ಪಂಚರೇಖಾ ಚಾಪಬಾಣೌ ಚ ಪಾರ್ಶ್ವಯೋಃ ।
ಸಬಾಲರಾಮೋ ವಿಜ್ಞೇಯಃ ಪುತ್ರದಾಯೀ ನ ಸಂಶಯಃ ॥

ಬೆನ್ನಿನಲ್ಲಿ ೫ ರೇಖೆಗಳು, ಪಾರ್ಶ್ವದಲ್ಲಿ ಬಿಲ್ಲುಬಾಣಗಳು ಇರುವ ಬಲರಾಮನು ಪೂಜಕರಿಗೆ ಪುತ್ರರನ್ನು ಕೊಡುವವನು. ಇದರಲ್ಲಿ ಸಂಶಯವಿಲ್ಲ.

ಹಲರೇಖಾಮುಸಲವಾನ್ ಶುದ್ಧಸ್ಫಟಿಕವರ್ಣವಾನ್ ।
ಮಧುಬಿಂದುಧರಃ ಶ್ರೀಮಾನ್ ರಾಮಃ ಸಂಕರ್ಷಣಃ ಸ್ಮೃತಃ ॥

ನೇಗಿಲು ಒನಕೆಗಳ ಚಿಹ್ನೆಗಳು, ಸ್ಪಟಿಕದಂತಹ ಬಿಳಿಯ ಬಣ್ಣ, ಜೇನಿನ ಬಣ್ಣದ ಬಿಂದು ಇರುವಂತಹುದು ಬಲರಾಮ ಅಥವಾ ಸಂಕರ್ಷಣಮೂರ್ತಿ.

ದ್ವೇಚಕ್ರೇ ಅಂಕಭಾಗೇ ತು ಪೂರ್ವಭಾಗೇ ತು ಪುಷ್ಕರಮ್ ।
ಸಂಕರ್ಷಣಸ್ಸವಿಜ್ಞೇಯೋ ರಕ್ತಾಭಸ್ಸರ್ವಸಿದ್ಧಿದಃ ॥

ಮಧ್ಯಭಾಗದಲ್ಲಿ ೨ ಚಕ್ರಗಳು, ಪೂರ್ವಭಾಗದಲ್ಲಿ ಕಮಲಚಿಹ್ನೆ, ಕೆಂಪುಬಣ್ಣಗಳಿದ್ದರೆ ಸಂಕರ್ಷಣನು ಸರ್ವಸಿದ್ಧಿಯನ್ನೀಯುವನು.

ಮೂಲೇ ಚಕ್ರಂ ಭವೇದ್ಯತ್ರ ಹರಿಲೋಹಿತವರ್ಣಭಾಕ್ ।
ಬಲಭದ್ರೋ ಭವೇದ್ದೇವಃ ಪುತ್ರಪೌತ್ರಾದಿವರ್ಧನಃ ॥

ಬುಡದಲ್ಲಿ ಚಕ್ರವಿದ್ದು ಸಿಂಹದ ಮೈಬಣ್ಣದಂತೆ ಕೆಂಪಾದುದು ಬಲರಾಮಮೂರ್ತಿ. ಪೂಜಕರಿಗೆ ಪುತ್ರಪೌತ್ರಾದಿ ಸಂತಾನಪ್ರದವು.

ದೀರ್ಘಾಕಾರಂ ಬೃಹದ್ವಾರಂ ಪೃಥುಚಕ್ರಂ ಚ ತದ್ಭವೇತ್ ।
ಶ್ವೇತಾಭಂ ಹಲಚಿಹ್ನಂ ತು ಮುಸಲಾಕೃತಿರೇವ ವಾ ॥

ನೀಲೋತ್ಪಲಪ್ರಸೂನಾಭಂ ಪೃಷ್ಠೇ ವಾ ವದನೇಽಪಿ ವಾ ।
ಬಲಶಾಲೀ ಭವೇದ್ರಾಮೋ ವಂಶಕೋಶವಿವರ್ಧನಃ ॥

ಉದ್ದವಾದ ಆಕಾರ, ದೊಡ್ಡ ದ್ವಾರ, ವಿಶಾಲವಾದ ಚಕ್ರ, ಬಿಳಿಯ ಬಣ್ಣ, ನೇಗಿಲು ಅಥವಾ ಒನಕೆಯು ಚಿಹ್ನೆ ಇದ್ದು ತಾವರೆಯಾಕಾರದಲ್ಲಿ ಕಪ್ಪುಬಣ್ಣವು ಬೆನ್ನಿನಲ್ಲಿ ಅಥವಾ ಮುಖದಲ್ಲಿದ್ದರೆ ಬಲರಾಮಮೂರ್ತಿ. ಈ ಮೂರ್ತಿಯು ಸಂತಾನ, ದ್ರವ್ಯಗಳನ್ನು ವೃದ್ಧಿ ಮಾಡತಕ್ಕದ್ದು. ಇದು ೫ ರೀತಿಗಳಲ್ಲಿ ಕಂಡುಬರುತ್ತವೆ: ಬಲಭದ್ರ, ಬಲರಾಮ, ಬಲಶಾಲಿರಾಮ, ಶಾಂತಬಲಭದ್ರರಾಮ, ಸೀರಪಾಣಿ.

## ೮. ಕೃಷ್ಣಮೂರ್ತಿ ಲಕ್ಷಣಮ್ :

ಕೃಷ್ಣಮೂರ್ತಿಪ್ರಭೇದಾಃ ಸ್ಯುಃ ತ್ರಯೋದಶಸಮೀರಿತಾಃ ।
ಕೃಷ್ಣಪೀತಃ ಕೃಶತನುರ್ಭಿತ್ತಿಪಾರ್ಶ್ವೇ ದ್ವಿಚಕ್ರಯುಕ್ ॥

ದ್ವಾರತುಲ್ಯೋ ಭವೇನ್ನಾಭಿಃ ಕೂರ್ಮಾಕಾರಸ್ತು ಪೃಷ್ಠತಃ ।
ಪಾರ್ಶ್ವಚಕ್ರಾಖ್ಯ ಕೃಷ್ಣೋಽಯಂ ಧರ್ಮತಃ ಪಾಪನಾಶನಃ ॥

ಕೃಷ್ಣಮೂರ್ತಿಗಳು ೧೩ ತೆರನಾಗಿವೆ. ಅವುಗಳಲ್ಲಿ ಕಪ್ಪು ಮತ್ತು ಚಿನ್ನದ ಬಣ್ಣವಿದ್ದು ಕೃಶವಾಗಿದ್ದು ಶಾಲ ಗ್ರಾಮದ ಒಳಬದಿಯಲ್ಲಿ ೨ ಅಥವಾ ೩ ಚಕ್ರಗಳುಳ್ಳದ್ದು ದ್ವಾರದಂತಿರುವ ನಾಭಿ(ಹೊಕ್ಕುಳು), ಹಿಂಬದಿ ಆಮೆ ಯಂತಹ (ಗದೆ) ಆಕಾರವಿರುವುದು, ಪಾರ್ಶ್ವಚಕ್ರವಿರುವುದು, ಕೃಷ್ಣಮೂರ್ತಿ. ಇದು ಪಾಪಹರವಾದದ್ದು.

ಕೃಷ್ಣೋಽತಿಕೃಷ್ಣಃ ಸಂಸ್ಥೂಲೋ ನ ಕೃಶೋ ನಾತಿಶೋಭನಃ ।
ವನಮಾಲಾ ಪರಿವೃತಃ ಪೃಷ್ಠೇ ಶ್ರೀವತ್ಸಲಾಂಛನಃ ॥

ಸಮಚಕ್ರೋ ದ್ವಾರದೇಶೇ ಬಿಂದುಯುಕ್ತಃ ಸುಶೋಭನಃ ।
ಸಕೃಷ್ಣಮೂರ್ತಿರ್ವಿಜ್ಞೇಯಃ ಪೂಜಕಸ್ಯ ಶುಭಪ್ರದಃ ॥

ಅತಿ ಕಪ್ಪು ಬಣ್ಣ, ದೊಡ್ಡ ಆಕಾರ, ಕೃಶವಲ್ಲದಿದ್ದು ನೋಟಕ್ಕೆ ಅಷ್ಟು ಚಂದವಲ್ಲದ ವನಮಾಲೆ, ಬೆನ್ನಿನಲ್ಲಿ ಶ್ರೀವತ್ಸಚಿಹ್ನೆ, ದ್ವಾರದಲ್ಲಿ ಸಮಾನಗಳಾದ ಚಕ್ರಗಳು, ಬಿಂದುಗಳಿರುವುದು ಕೃಷ್ಣಮೂರ್ತಿ. ಇದನ್ನು ಪೂಜಿಸಿದವ ನಿಗೆ ಶುಭವನ್ನೀಯುವುದು.

ದಂಡಶೃಂಗಯುತಃ ಪಾರ್ಶ್ವೇ ವೇಣುನಾ ಶೋಭಿತೋ ಮುಖೇ ।
ಗೋಪಾಲಕೃಷ್ಣ ಇತ್ಯುಕ್ತೋ ಗೋಭೂಧಾನ್ಯಧನಪ್ರದಃ ॥

ಪಾರ್ಶ್ವದಲ್ಲಿ ದಂಡ ಮತ್ತು ಮೃಗದ ಕೋದಿನ ಚಿಹ್ನೆ, ಮುಖದ ತುದಿಯಲ್ಲಿ ಕೊಳಲು ಚಿಹ್ನೆ ಇದ್ದರೆ **ಗೋಪಾಲಕೃಷ್ಣಮೂರ್ತಿ**. ಇದು ಪಸು, ಭೂಮಿ, ಧಾನ್ಯ, ದ್ರವ್ಯ, ಸಂಪತ್ತುಗಳನ್ನು ಕೊಡತಕ್ಕದ್ದು.

ಶ್ಯಾಮವರ್ಣೋ ಮಹಾಸ್ನಿಗ್ಧಶ್ಚಕ್ರಾಕಾರಸ್ತಥೈವ ಚ ।
ಸೂಕ್ಷ್ಮಾಕ್ತಾರೋ ಬಿಂದುಯುತೋ ರಕ್ತರೇಖಾಸಮನ್ವಿತಃ ॥

ಗೋಪಾಲಮೂರ್ತಿರ್ವಿಜ್ಞೇಯಃ ಸರ್ವಭಾಗ್ಯಪ್ರದೋ ನೃಣಾಮ್ ।

ಕಪ್ಪುಬಣ್ಣ, ನುಣ್ಣಗಿದ್ದು, ಚಕ್ರದಂತೆ ಉರುಟಾಗಿರುವುದು, ಚಿಕ್ಕದಾದ ಆಕಾರ ಬಿಂದುವಿನಿಂದ ಕೂಡಿ ಕೆಂಪುರೇಖೆಯಿಂದ ಕೂಡಿದ್ದರೆ ಗೋಪಾಲಮೂರ್ತಿ ಪೂಜಕರಿಗೆ ಸರ್ವಭಾಗ್ಯವನ್ನೀಯುವುದು.

ಗೋಪಾಲಃ ಪಾರ್ಶ್ವಭಾಗೇ ರೇಖಾಯುಕ್ತಶ್ಚ ಕಾರ್ಷ್ಣ್ಯಭಾಕ್ ।

ಸಸ್ಯಾನ್ಮದನಗೋಪಾಲೋ ಮಾಲಾಕುಂಡಲಶೋಭಿತಃ ।
ಪುತ್ರಪೌತ್ರಧನೈಶ್ವರ್ಯಾಣ್ಯತುಲಂ ಸಂಪ್ರಯಚ್ಛತಿ ॥

ಪಾರ್ಶ್ವದಲ್ಲಿ ರೇಖೆ, ಕಪ್ಪುಬಣ್ಣ, ಮಾಲೆ ಮತ್ತು ಕುಂಡಲ ರೇಖೆಗಳಿದ್ದರೆ ಮದನಗೋಪಾಲಮೂರ್ತಿ. ಇದು ಪೂಜಕ ರಿಗೆ ಪುತ್ರ, ಪೌತ್ರ, ಧನ ಮುಂತಾದ ಸಕಲೈಶ್ವರ್ಯಗಳನ್ನು ಸಂಪೂರ್ಣವಾಗಿ ಕೊಡುವುದು.

**ಅರ್ಧಶ್ಯಾಮೋಽರ್ಧರಕ್ತಶ್ಚ ಶಂಖಚಕ್ರಧರಃ ಖಗ ।**
**ದೀರ್ಘಾಕಾರಃ ಸುಷಿರವಾನ್ ಗೋಪಾಲೋ ಮದನಾಹ್ವಯಃ ॥**

ಅರ್ಧಕಪ್ಪು, ಅರ್ಧ ಕೆಂಪು ಬಣ್ಣ, ಶಂಖಚಕ್ರ ಚಿಹ್ನೆಗಳು, ಉದ್ದವಾದ ಆಕಾರ, ರಂಧ್ರ ಇದ್ದರೂ ಮದನಗೋಪಾಲ ಮೂರ್ತಿ.

**ದೀರ್ಘಾಕಾರಃ ಕೃಷ್ಣವರ್ಣಶ್ಚಾರ್ಧಚಂದ್ರನಿಭಾನನಃ ।**
**ಸಸ್ಯಾತ್ಸಂತಾನಗೋಪಾಲಃ ಪುತ್ರಪೌತ್ರಾದಿವೃದ್ಧಿದಃ ॥**

ಉದ್ದವಾದ ಆಕಾರ, ಕಪ್ಪುಬಣ್ಣ, ಮುಖವು ಅರ್ಧಚಕ್ರಾಕಾರವಿದ್ದರೆ ಸಂತಾನಗೋಪಾಲಮೂರ್ತಿ. ಪುತ್ರ ಪೌತ್ರಾದಿ ಸಂತಾನವೃದ್ಧಿಯನ್ನು ಮಾಡತಕ್ಕದ್ದು.

**ಉನ್ನತೋ ಮೂರ್ಧ್ನಿಕೃಷ್ಣಾಭೋ ನಿಮ್ನೋಽಧಸ್ತಾತ್ ತ್ರಿಬಿಂದುಯುಕ್ ।**
**ಸಬಾಲಕೃಷ್ಣ ವಿಜ್ಞೇಯೋ ದೀರ್ಘಾಸ್ಯಃ ಪುತ್ರಭಾಗ್ಯದಃ ॥**

ಶಿರಸ್ಸಿನಲ್ಲಿ ಎತ್ತರವಾಗಿರುವುದು, ಕಪ್ಪುಬಣ್ಣ, ಕೆಳಗೆ ಆಳವಾಗಿದ್ದು, ೩ ಬಿಂದುಗಳಿಂದ ಕೂಡಿದ್ದು, ಮುಖವು ಉದ್ದವಾಗಿದ್ದರೆ ಬಾಲಕೃಷ್ಣಮೂರ್ತಿ. ಇದು ಪುತ್ರಸಂಪತ್ತನ್ನು ನೀಡುವುದು.

**ವರ್ತುಲೋ ಮಸ್ತಕೇ ನಿಮ್ನಃ ಪಾರ್ಶ್ವೇ ರಜತಬಿಂದುಯುಕ್ ।**
**ಗೋವರ್ಧನಾಖ್ಯೋ ಗೋಪಾಲೋ ದೀರ್ಘರೇಖಾ ತು ದಕ್ಷಿಣೇ ॥**

**ಸರ್ವಕಷ್ಟವಿನಾಶಾಯ ಗೋಧಾನ್ಯಧನವರ್ಧನಃ ।**

ಶಿರಸ್ಸಿನಲ್ಲಿ ದುಂಡಾಗಿ, ಪಾರ್ಶ್ವದಲ್ಲಿ ಆಳವಾಗಿದ್ದು, ಬೆಳ್ಳಿಯಂತಹ ಬಿಳಿ ಬಿಂದುಗಳು, ಬಲಬದಿಯಲ್ಲಿ ಉದ್ದವಾದ ರೇಖೆಗಳಿದ್ದರೆ ಗೋವರ್ಧನವೆಂಬ ಗೋಪಾಲಮೂರ್ತಿ. ಸರ್ವವಿಪತ್ತನ್ನು ಪರಿಹರಿಸಿ ಗೋವು, ಧನ, ಧಾನ್ಯಗಳನ್ನು ವೃದ್ಧಿ ಮಾಡುವುದು.

**ವರ್ತುಲಃ ಕೃಷ್ಣವರ್ಣಸ್ತು ಮಧ್ಯಾಸ್ಯೋ ಚ ದ್ವಿಚಕ್ರಯುಕ್ ।**
**ದಕ್ಷಾದಿ ವಾಮಪರ್ಯಂತಂ ರೇಖಾಯಾಸ್ತ್ರಿಮೃದುಚ್ಛ್ರಿತಃ ॥**

**ಊರ್ಧ್ವಾಧಸ್ತಾಚ್ಚ ರೇಖಾಯಾಃ ಬಿಂದುದ್ವಯಸಮನ್ವಿತಃ ।**
**ಕಾಲಿಯಮರ್ದನಃ ಸಾಕ್ಷಾತ್ ಸರ್ವದಾರಿದ್ರ್ಯನಾಶನಃ ॥**

ದುಂಡಾಗಿದ್ದು ಕಪ್ಪುಬಣ್ಣ ಮಧ್ಯದಲ್ಲಿ ಮುಖ ಅದರಲ್ಲಿ ೨ ಚಕ್ರಗಳು, ಬಲದಿಂದ ಎಡದ ವರೆಗೆ ೩ ರೇಖೆಗಳ ಸುತ್ತು, ಎತ್ತರವಾದದ್ದು, ರೇಖೆಯ ಮೇಲೆ, ಕೆಳಗಡೆ ಎರಡು ಬಿಂದುಗಳು ಇದ್ದರೆ ಕಾಲೀಯ ಮರ್ದನ ಮೂರ್ತಿ, ಸರ್ವದಾರಿದ್ರ್ಯವನ್ನು (ಸರ್ವಶತ್ರುಗಳನ್ನೂ) ಪರಿಹರಿಸುವನು.

**ಸವ್ಯಾಪಸವ್ಯರೇಖಾಭ್ಯಾಂ ಭೂಷಿತಃ ಸೂಕ್ಷ್ಮಚಕ್ರಯುಕ್ ।**
**ಪಾರ್ಶ್ವೇ ಖುರಯುತೋ ದೇವೋ ಧನಂಜಯವಿಭುಃ ಸ್ಮೃತಃ ॥**

ಎಡಬಲಗಳಲ್ಲಿ ರೇಖೆಗಳು, ಸೂಕ್ಷ್ಮವಾದ ಚಕ್ರ, ಪಾರ್ಶ್ವದಲ್ಲಿ ಗೊರಸಿನ ಚಿಹ್ನೆ ಇದ್ದರೆ ಧನಂಜಯನ (ಅರ್ಜುನನ) ಸ್ವಾಮಿ ಶ್ರೀಕೃಷ್ಣನು.

ಅತಸೀವರ್ಣವಾನ್ ಸ್ಥೂಲಚಕ್ರಭಾಗೋಽತಿಶೋಭನಃ ।
ವನಮಾಲಾ ಪರಿವೃತಃ ಪೃಷ್ಠೇ ಶ್ರೀವತ್ಸಲಾಂಛನಃ ॥
ಸ್ಯಮಂತಹಾರೀ ವಿಜ್ಞೇಯಃ ಪುಷ್ಟಿಶ್ರೀಕೀರ್ತಿದೋ ನೃಣಾಮ್ ।

ಅಗಸಿಯ ಹೂವಿನಂತಹ ವರ್ಣ, ದೊಡ್ಡ ಚಕ್ರಗಳು, ವನಮಾಲಾ ಚಿಹ್ನೆ, ಬೆನ್ನಿನಲ್ಲಿ ಶ್ರೀವತ್ಸಚಿಹ್ನೆಯಿದ್ದರೆ ಸ್ಯಮಂತ ಹಾರಿ ಶ್ರೀಕೃಷ್ಣನು. ಪುಷ್ಟಿ, ಸಂಪತ್ತು, ಕೀರ್ತಿಗಳನ್ನು ಕೊಡತಕ್ಕವನು.

ರಕ್ತಬಿಂದುದ್ವಯಯುತಃ ಶ್ಯಾಮೋ ದಂತಿಭುಜೋಪಮಃ ॥

ರೇಖಾ ತು ದಕ್ಷಿಣೇ ಭಾಗೇ ಮುಖೇ ಚ ದ್ರುಮಬಿಂದುಯುಕ್ ।
ಚಾಣೂರಮರ್ದನಾಖ್ಯಃ ಸ್ಯಾತ್ ಸರ್ವಶತ್ರುವಿನಾಶನಃ ॥

ಕೆಂಪುಬಣ್ಣದ ೨ ಬಿಂದುಗಳು, ಕಪ್ಪುಬಣ್ಣ, ಆನೆಯ ಹೆಗಲಿನಂತಿರುವುದು, ಬಲಬದಿಯಲ್ಲಿ ರೇಖೆ, ಮುಖದಲ್ಲಿ ಮರದಂತಹ ಬಿಂದುವಿದ್ದರೆ ಚಾಣೂರಮರ್ದನ ಕೃಷ್ಣ. ಸರ್ವಶತ್ರುನಾಶ ಮಾಡತಕ್ಕವನು.

ಪೂರ್ವಭಾಗ್ಯೈಕವದನಃ ಪಾರ್ಶ್ವೈಕವದನೋಽಪಿ ವಾ ।
ಕಂಸಮರ್ದೀ ಭವೇತ್ ಕೃಷ್ಣೋ ನೀಲಾಂಬುದನಿಭಃ ಶುಭಃ ॥

ಪೂರ್ವಭಾಗದಲ್ಲಿ ಒಂದು ಮುಖ ಅಥವಾ ಪಾರ್ಶ್ವದಲ್ಲಿ ಒಂದು ಚಕ್ರ, ನೀಲವಾದ ಮೇಘದಂತಹ ವರ್ಣವಿದ್ದರೆ ಕಂಸಮರ್ದಕ ಶ್ರೀಕೃಷ್ಣನು. ಮಂಗಳವನ್ನು ಕೊಡತಕ್ಕವನು.

ಸಮಚಕ್ರಾ ದ್ವಾರದೇಶೇ ಕೃಷ್ಣಾಕೃಷ್ಣಾ ಸುಶೋಭನಾ ।
ಸಾ ಕೃಷ್ಣಮೂರ್ತಿರ್ವಿಜ್ಞೇಯಾ ಪೂಜಿತಾ ಸೌಖ್ಯದಾಯಿನೀ ॥

ದ್ವಾರದಲ್ಲಿ ೨ ಸಮವಾದ ಚಕ್ರಗಳು, ಕಪ್ಪು ಅಥವಾ ಬಿಳಿಯ ಬಣ್ಣವಿದ್ದು ಕೃಷ್ಣಮೂರ್ತಿ, ಇದನ್ನು ಪೂಜಿಸಿದರೆ ಇದು ಮಂಗಳವನ್ನು ಉಂಟುಮಾಡತಕ್ಕದು.

ಅಧಸ್ತಾದ್ದ್ರುಮವಾನ್ ವೃತ್ತಃ ಪಾರ್ಶ್ವೇ ವಸ್ತ್ರೇಣ ಚಿಹ್ನಿತಃ ।
ಪ್ರಚ್ಛನ್ನ ಸೂಕ್ಷ್ಮಚಕ್ರಶ್ಚ ವಾಮೇ ವಾ ದಕ್ಷಿಣೇಽಪಿ ವಾ ॥

ಗೋಪಿವಸ್ತ್ರಾಪಹಾರೀ ಸ್ಯಾತ್ ಕೃಷ್ಣಃ ಸರ್ವಾರ್ಥಸಿದ್ಧಿದಃ ।

ಕೆಳಗಡೆ ಮರದ ಚಿಹ್ನೆ, ಪಾರ್ಶ್ವದಲ್ಲಿ ವಸ್ತ್ರದ ಚಿಹ್ನೆ, ಒಳಗಡೆ ಮುಚ್ಚಿದಂತಿರುವ ಸೂಕ್ಷ್ಮವಾದ ಚಕ್ರಗಳು ಎಡದಲ್ಲಾಗಲಿ, ಬಲಬದಿಯಲ್ಲಾಗಲಿ ಇದ್ದರೆ ಗೋಪಿವಸ್ತ್ರಾಪಹಾರಿ ಶ್ರೀಕೃಷ್ಣನು ಸರ್ವಾಭೀಷ್ಟವನ್ನೂ ಕೊಡತಕ್ಕವನು.

ಕುಕ್ಕುಟಾಂಡಸಮಾಕಾರಃ ಶ್ರೀಕರೋ ವನಮಾಲಯಾ ॥

ಲಾಂಗೂಲವೇಣುಚಿಹ್ನಂ ಚ ಕುಂಡಲಾಭ್ಯಾಂ ಚ ವೇಷ್ಟಿತಃ ।
ಜ್ಞೇಯಃ ಸಲಕ್ಷ್ಮೀಗೋಪಾಲೋ ದುರ್ಲಭೋ ಭುವನತ್ರಯೇ ॥
ಪುತ್ರಲಾಭಂ ತಥಾ ಮೋಕ್ಷಂ ಗೋಧಾನ್ಯಧನದೋ ನೃಣಾಮ್ ।

ಕೋಳಿಮೊಟ್ಟೆಯ ಆಕಾರ, ವನಮಾಲೆಯ ಚಿಹ್ನೆ, ಬಾಲ ಮತ್ತು ಕೊಳಲಿನ ಚಿಹ್ನೆಗಳು, ೨ ಕುಂಡಲದಂತಹ ಸುತ್ತು ಚಿಹ್ನೆಗಳು, ಇದ್ದರೆ ವೇಣುಗೋಪಾಲಮೂರ್ತಿ, ೩ ಲೋಕಗಳಲ್ಲಿಯೂ ಅತ್ಯಂತ ದುರ್ಲಭವಾದದ್ದು. ಪುತ್ರ, ಗೋವು, ಧಾನ್ಯ, ದ್ರವ್ಯಗಳನ್ನು ಕೊಡುವನು.

ರೇಖಾ ಪಂಚಾಯುಧಧರಂ ವನಮಾಲಾ ವಿಭೂಷಿತಮ್ ।
ಅಬ್ಜಚಿಹ್ನಃ ಸೂಕ್ಷ್ಮಚಕ್ರಃ ಕೃಷ್ಣಮೇನಂ ಪ್ರಚಕ್ಷತೇ ॥

ಪಂಚಾಯುಧರೇಖೆಗಳು, ವನಮಾಲೆ, ತಾವರೆಯ ಚಿಹ್ನೆಗಳು, ಸೂಕ್ಷ್ಮವಾದ ಚಕ್ರಗಳಿದ್ದರೆ ಕೃಷ್ಣ ಮೂರ್ತಿ.

ಇದು ಒಟ್ಟು ೨೫ ಪ್ರಕಾರಗಳಿಂದ ಕೂಡಿದೆ: ಶುದ್ಧಕೃಷ್ಣ, ಬಾಲಕೃಷ್ಣ, ಕೂರ್ಪಾಕಾರಕೃಷ್ಣ, ಗದಾಕಾರಕೃಷ್ಣ, ಛತ್ರಾಕಾರಗೋಪಾಲ, ಶ್ಯಾಮರಕ್ತಕೃಷ್ಣ, ಮದನಗೋಪಾಲ, ವೇಣುಗೋಪಾಲ, ಲಕ್ಷ್ಮೀಗೋಪಾಲ, ಶ್ರೀಗೋಪಾಲ, ಸಂತಾನಗೋಪಾಲ, ಕಾಲೀಯ ಮರ್ದನಕೃಷ್ಣ, ಕಂಸಮರ್ದನಕೃಷ್ಣ, ಧನಂಜಯಕೃಷ್ಣ, ಚಾಣೂರಮರ್ದನಕೃಷ್ಣ, ಗೋಪೀವಸ್ತ್ರಾಪಹಾರೀ ಕೃಷ್ಣ, ಗೋವರ್ಧನಕೃಷ್ಣ, ಶ್ಯಮಂತಕಹಾರೀ.

## ೯. ಬುದ್ಧಮೂರ್ತಿ ಲಕ್ಷಣಮ್ :

ಬುದ್ಧಮೂರ್ತಿಯು ೨ ಕೈಗಳಿಂದ ಕೂಡಿದ್ದು, ಒಂದರಲ್ಲಿ ವರ, ಇನ್ನೊಂದರಲ್ಲಿ ಅಭಯವನ್ನಿತ್ತು ಬದ್ಧಪದ್ಮಾಸನದ ಮೇಲೆ ಹಾಸದಂತೆ ಅರ್ಧಮುಚ್ಚಿದ ಕಣ್ಣುಗಳನ್ನು ರೆಪ್ಪೆಯಿಂದ ಮುಚ್ಚಿ ಮುನಿಯಂತೆ ಕುಳಿತಿರುತ್ತದೆ. ವೈಷ್ಣವರಲ್ಲಿ ಎಲ್ಲಿಯೂ ವಿಷ್ಣುವು ಯೋಗಿಯಂತೆ ಕುಳಿತಿರುವುದಿಲ್ಲ. ಬದರಿನಾಥಕ್ಷೇತ್ರದ ಬದರಿನಾಥನ ಮೂರ್ತಿಯು ವಿಷ್ಣುವಿನ ಬೌದ್ಧಾವತಾರದ ಮೂರ್ತಿಯಾಗಿದೆ.

ನರನಾರಾಯಣ, ದತ್ತಾತ್ರೇಯ, ಪರವಾಸುದೇವ, ಯೋಗಮೂರ್ತಿ, ಮಾಧವಮೂರ್ತಿಗಳು, ಬುದ್ಧ ಮೂರ್ತಿಯ ಲಕ್ಷಣಗಳನ್ನೇ ಹೊಂದಿರುತ್ತವೆ.

ಅಂತರ್ಗಹರಸಂಯುಕ್ತಂ ಚಕ್ರಹೀನಂ ತಥಾ ಭವೇತ್ ।
ನಿರ್ವಾಣ ಬುದ್ಧಸಂಜ್ಞಂ ಸ್ಯಾದ್ದದಾತಿ ಪರಮಂ ಪದಮ್ ॥

ಒಳಗೆ ರಂಧ್ರಮಾತ್ರವಿದ್ದು ಚಕ್ರಗಳಿಲ್ಲದಿದ್ದರೆ ನಿರ್ವಾಣಬುದ್ಧಮೂರ್ತಿ. ಇದು ಪೂಜಕರಿಗೆ ಮೋಕ್ಷವನ್ನೀಯುವುದು.

ರಂಧ್ರೇಷು ದೃಷ್ಟಚಕ್ರಂ ಚಂಪಕಾಕಾರಂ ಸಬಿಂದುಕಮ್ ।
ಬುದ್ಧಾಕಾರಂ ವಿಜಾನೀಯಾಚ್ಚಕ್ರಂ ವಾ ಮಲಿನಾವಹಮ್ ॥

ರಂಧ್ರದಲ್ಲಿ ಅಸ್ಪಷ್ಟವಾಗಿ ಕಾಣಿಸುವ ಚಕ್ರವು ಸಂಪಿಗೆ ಹೂವಿನ ಆಕಾರವುಳ್ಳ, ಅಸ್ಪಷ್ಟವಾದ ಚಕ್ರವುಳ್ಳ ಹಾಗೂ ಬಿಂದುಗಳುಳ್ಳ ಬುದ್ಧನ ಆಕಾರಮೂರ್ತಿಯು ಬುದ್ಧಶಾಲಗ್ರಾಮ.

ರಂಧ್ರದೃಶ್ಯದ್ವಯೋಪಾಂತ ಅಂತಶ್ಚಕ್ರದ್ವಯಾನ್ವಿತಾಮ್ ।
ಶಿರೋದೃಷ್ಟೋರ್ಧ್ವಚಕ್ರಂ ಚ ಪಾರ್ಶ್ವಯೋರ್ವಾಪಿ ದೃಶ್ಯತೇ ।
ನಾನಾವರ್ಣಮಯಿಂ ವಾಪಿ ಬುದ್ಧಮೂರ್ತಿಂ ಪ್ರಚಕ್ಷತೇ ॥

ರಂಧ್ರದ ೨ ಕಡೆಗಳಲ್ಲಿ ೨ ಚಕ್ರಗಳುಳ್ಳ ಆ ಮಸ್ತಕವು ಊರ್ಧ್ವಚಕ್ರದಂತಿದ್ದು ೨ ಪಾರ್ಶ್ವಗಳಲ್ಲಿ ಚಕ್ರಗಳು ಕಾಣಿಸುವವು ಮತ್ತು ನಾನಾ ರೀತಿಯ ಬಣ್ಣಗಳನ್ನು ಹೊಂದಿದ ಶಾಲಗ್ರಾಮವು ಬುದ್ಧಮೂರ್ತಿಯಂತಿರುವುದು.

ಒಟ್ಟು ೫ ರೀತಿಯಲ್ಲಿ ಕಂಡುಬರುತ್ತದೆ: ನಿರ್ವಾಣಬುದ್ಧ, ಬುದ್ಧಮೂರ್ತಿ, ಬುದ್ಧಾಕಾರ, ಸರ್ವಜ್ಞ ಶ್ರೀಘನ, ಅಂತರ್‌ವಿಶಾಲ.

## ೧೦. ಕಲ್ಕಿಮೂರ್ತಿ ಲಕ್ಷಣಮ್ :

ಅತಿರಕ್ತಂ ಸೂಕ್ಷ್ಮಬಿಲಂ ಸೂಕ್ಷ್ಮಚಕ್ರಂ ಸ್ಥಿರಾಸನಮ್ ।
ಕೃಪಾಣಾಕೃತಿರೇಖಾ ದ್ವಾರಸ್ಯೋಪರಿ ಪೃಷ್ಠಕೇ ।
ಮ್ಲೇಚ್ಛನಾಶೀ ಭವೇತ್ಕಲ್ಕೀ ಕಲಿಕಲ್ಮಷನಾಶನಃ ॥

ಅತಿ ಕೆಂಪು ಬಣ್ಣ, ಸೂಕ್ಷ್ಮವಾದ ಚಕ್ರ, ಸ್ಥಿರವಾದ ಆಸನ, ಖಡ್ಗದ ರೇಖಾಚಿಹ್ನೆಯು ದ್ವಾರದ ಮೇಲೆ ಅಥವಾ ಬೆನ್ನಿನಲ್ಲಿದ್ದರೆ ಮ್ಲೇಚ್ಛರನ್ನು ಕೊಂದಿರುವ ಕಲ್ಕಿಮೂರ್ತಿ. ಇದು ಕಲಿದೋಷವನ್ನು ನಿವಾರಿಸುವುದು.

ಹಯರೇಖಾ ಸಮಾಯುಕ್ತೋ ರೇಖಾಕುಂತಾಯುಧಾಕೃತಿಃ ।
ಶ್ವೇತವರ್ಣೋ ದೀರ್ಘಮುಖಃ ಕಲ್ಕಿರಿತ್ಯಭಿಧೀಯತೇ ॥

ಕುದುರೆಯ ಆಕಾರದ ರೇಖೆಗಳುಳ್ಳ, ಭಲ್ಲೆ(ಈಟಿ)ಯ ಆಕಾರದ ರೇಖೆಗಳುಳ್ಳ, ದೀರ್ಘವಾದ ಮುಖ ಹಾಗೂ ಬಿಳಿಯ ಬಣ್ಣದ ಶಾಲಗ್ರಾಮವು ಕಲ್ಕಿಮೂರ್ತಿ ಶಾಲಗ್ರಾಮ.

ಈ ಮೂರ್ತಿಯು ೪ ವಿಧಗಳಲ್ಲಿ ಕಂಡುಬರುತ್ತದೆ: ಕೆಂಪಾಗಿ ಸಣ್ಣ ಖಡ್ಗದಂತಿರುವ ಮೂರ್ತಿ, ಬಿಳಿಯಾಗಿ ಕುಂತನಂತಿರುವ ಮೂರ್ತಿ, ಕಲ್ಯಾಣಕಲ್ಕೀ, ಸ್ವರ್ಣಕುಂಕುಮ ಮಿಶ್ರ ಕಲ್ಕೀ.

## ಕೇಶವಾದಿ [12] ಮತ್ತು ಸಂಕರ್ಷಣಾದಿ [12] ಮೂರ್ತಿಲಕ್ಷಣಾನಿ

### ೧. ಕೇಶವಮೂರ್ತಿ ಲಕ್ಷಣಮ್ :

ರಾಜತೇ ಬಿಂದುಭಿರ್ಹೈಮೈರಾನ್ವಿತಂ ಸೂಕ್ಷ್ಮಚಕ್ರಕಮ್ ।
ವನಮಾಲಾನ್ವಿತಂ ಶ್ಯಾಮಂ ಕೇಶವಾಖ್ಯಂ ದ್ವಿಚಕ್ರಕಮ್ ॥

ಸೌಭಾಗ್ಯಂ ಕೇಶವೋ ದದ್ಯಾತ್ ಚತುಷ್ಕೋಣಃ ಸದಾ ಭವೇತ್ ।
ದ್ವಾರದೇಶೇ ದ್ವಿಚಕ್ರಂ ಸ್ಯಾತ್ ಕೃಷ್ಣವರ್ಣಂ ಫಲಪ್ರದಮ್ ॥

ಚಿನ್ನದ ಬಣ್ಣದ ಬಿಂದುಗಳು, ಸೂಕ್ಷ್ಮವಾದ ಎರಡು ಚಕ್ರಗಳು, ವನಮಾಲೆಯ ಚಿಹ್ನೆ ಇದ್ದರೆ, ಕಪ್ಪುಬಣ್ಣ ಇದ್ದರೆ ಕೇಶವಮೂರ್ತಿ; ಚಚ್ಚೌಕವಾದ ಆಕಾರ, ದ್ವಾರದಲ್ಲಿ ಎರಡು ಚಕ್ರಗಳು, ಕಪ್ಪುಬಣ್ಣಗಳಿದ್ದರೆ ಕೇಶವ ಮೂರ್ತಿ; ಇದು ಪೂಜಕರಿಗೆ ಸೌಭಾಗ್ಯಫಲವನ್ನೀಯುವುದು.

### ೨. ನಾರಾಯಣಮೂರ್ತಿ ಲಕ್ಷಣಮ್ :

ಶ್ಯಾಮೋ ನಾರಾಯಣೋ ದೇವಃ ನಾಭಿಚಕ್ರಸ್ತಥೋನ್ನತಃ ।
ದೀರ್ಘರೇಖಾತ್ರಯೋಪೇತಃ ದಕ್ಷಿಣೇ ಸುಷಿರಂ ಪೃಥಕ್ ॥

ಏಕವಕ್ತ್ರೇ ಚತುಶ್ಚಕ್ರೋ ವರ್ತುಲಃ ಶ್ಯಾಮವರ್ಣಕಃ ।
ಧ್ವಜವಜ್ರಾಂಕುಶೋಪೇತೋ ಮಾಲಾಯುಕ್ತಃ ಸಬಿಂದುಕಃ ॥

ನಾತಿಹ್ರಸ್ವೋ ನ ಚ ಸ್ಥೂಲೋ ಲಕ್ಷ್ಮೀನಾರಾಯಣಃ ಸ್ಮೃತಃ ।
ತಸ್ಯ ದರ್ಶನಮಾತ್ರೇಣ ಹ್ಯಭೀಷ್ಟಫಲಮಾಪ್ನುಯಾತ್ ॥

ಸರ್ವಾಭೀಷ್ಟಪ್ರದೋ ನೃಣಾಂ ವಿಶೇಷಾತ್ಪುತ್ರಭಾಗ್ಯದಃ ।
ಲಕ್ಷ್ಮೀನಾರಾಯಣೋ ದೇವೋ ಭುಕ್ತಿಮುಕ್ತಿಫಲಪ್ರದಃ ॥

ನಾಭಿಯಲ್ಲಿ ಚಕ್ರ ಎತ್ತರವಾದುದು, ಕಪ್ಪುಬಣ್ಣ, ಉದ್ದವಾದ ಮೂರು ರೇಖೆಗಳು, ಬಲಭಾಗದಲ್ಲಿ ರಂಧ್ರ, ಒಂದು ಮುಖದಲ್ಲಿ ನಾಲ್ಕು ಚಕ್ರಗಳು, ಉರುಟಾಗಿರುವುದು, ಧ್ವಜ-ವಜ್ರ-ಅಂಕುಶಚಿಹ್ನೆಗಳು, ವನಮಾಲೆಯ ಚಿಹ್ನೆ, ಬಿಂದುಗಳು, ಬಹಳ ಚಿಕ್ಕದೂ ಅಲ್ಲ-ದೊಡ್ಡದೂ ಅಲ್ಲದುದು ಲಕ್ಷ್ಮೀನಾರಾಯಣ ಮೂರ್ತಿ; ಇದರ ದರ್ಶನಮಾತ್ರದಿಂದಲೇ ಸರ್ವಾಭೀಷ್ಟ ಲಭಿಸುವುದು. ವಿಶೇಷವಾಗಿ ಪುತ್ರಭಾಗ್ಯವನ್ನೂ ಇಹಪರಗಳಲ್ಲಿ ಭೋಗ, ಮೋಕ್ಷಗಳನ್ನೂ ಕೊಡತಕ್ಕುದು.

ಯತ್ರ ಶಂಖಗದಾಪದ್ಮಂ ರೇಖಾಕೃತಿವಿರಾಜತೇ ।
ಚತುಶ್ಚಕ್ರಯುತೋ ವಾಽಪಿ ತ್ರಿಚಕ್ರಶ್ಚೈಕಚಕ್ರವಾನ್ ॥

ಲಕ್ಷ್ಮೀನಾರಾಯಣೋ ನೃಣಾಂ ಸರ್ವಾಭೀಷ್ಟಫಲಪ್ರದಃ ।

ಶಂಖ, ಗದೆ, ಪದ್ಮಗಳ ರೇಖೆಗಳು, ನಾಲ್ಕು ಚಕ್ರಗಳು ಅಥವಾ ಮೂರು ಚಕ್ರಗಳು, ಇಲ್ಲವೇ ಒಂದು ಚಕ್ರವು ಇರುವಂತಹುದು ಕೂಡಾ ಲಕ್ಷ್ಮೀನಾರಾಯಣಮೂರ್ತಿ; ಎಲ್ಲಾ ಅಭೀಷ್ಟಗಳನ್ನೂ ಭಜಕರಿಗೆ ಕೊಡತಕ್ಕುದು.

ಲಕ್ಷ್ಮೀನಾರಾಯಣಸ್ತಾರ್ಕ್ಷ್ಯ ಚತುಶ್ಚಕ್ರಯುತೋ ವರಃ ॥

ತ್ರಿಚಕ್ರಶ್ಚ ದ್ವಿಚಕ್ರಶ್ಚ ಹ್ಯೇಕಚಕ್ರಶ್ಚ ಶೋಭನಃ ।

ನಾಲ್ಕು ಚಕ್ರ ಅಥವಾ ಮೂರು ಇಲ್ಲವೇ ಎರಡು ಅಥವಾ ಒಂದು ಚಕ್ರವಿರುವುದೂ ಲಕ್ಷ್ಮೀನಾರಾಯಣ ಮೂರ್ತಿ; ಇದು ಮಂಗಳಕರವಾದುದು.

ಧ್ವಜವಜ್ರಾಂಕುಶೋಪೇತೋ ಮಾಲಾಯುಕ್ತಃ ಸ ಬಿಂದುಕಃ ॥

ನಾತಿಹ್ರಸ್ವೋ ನ ಚ ಸ್ಥೂಲೋ ಲಕ್ಷ್ಮೀನಾರಾಯಣಃ ಸ್ಮೃತಃ ।
ತಸ್ಯ ದರ್ಶನಮಾತ್ರೇಣ ಹ್ಯಭೀಷ್ಟಫಲಮಾಪ್ನುಯಾತ್ ॥

ಧ್ವಜ-ವಜ್ರ, ಅಂಕುಶಚಿಹ್ನೆಗಳು, ಮಾಲಾಚಿಹ್ನೆ ಬಿಂದುಗಳಿದ್ದು, ಅತಿ ಗಿಡ್ಡಾಗಿರದೆ, ಅತಿ ದೊಡ್ಡ ದಾಗಿಯೂ ಇಲ್ಲದಿರುವುದು ಲಕ್ಷ್ಮೀನಾರಾಯಣಮೂರ್ತಿ. ಈ ಮೂರ್ತಿಯ ದರ್ಶನಮಾತ್ರದಿಂದ ಇಷ್ಟಸಿದ್ಧಿ ಯಾಗುವುದು.

ತಮಾಲದಲಸಂಕಾಶಃ ಸ್ವರ್ಣಪಂಕವಿಲೇಪವಾನ್ ।
ವೀರನಾರಾಯಣೋ ದೇವಃ ಶ್ವೇತಚ್ಛತ್ರ ಸುಶೋಭನಃ ॥

ಸೀಗುರ್ಂಡಿಯ ಪುಷ್ಪದಲದಂತೆ ನೀಲವೂ ಚಿನ್ನದ ಲೇಪವಿದ್ದುದೂ ಶ್ವೇತಚ್ಛತ್ರದ ಚಿಹ್ನೆಯಿಂದ ಕೂಡಿದುದೂ ಆದ ವೀರನಾರಾಯಣಮೂರ್ತಿಯು ಮಂಗಳಕರವಾದುದು.

ಮುಸಲಾಯುಧಮಾಲಾಸಿ ಶಂಖಚಕ್ರಗದಾನ್ವಿತಃ ।
ಕೂರ್ಮನಾರಾಯಣೋ ದೇವಃ ಸರ್ವಕಾಮಫಲಪ್ರದಃ ॥

ಒನಕೆಯ ಚಿಹ್ನೆ, ಖಡ್ಗ, ಶಂಖ-ಚಕ್ರ-ಗದೆಗಳ ಚಿಹ್ನೆಗಳು, ವನಮಾಲಾಚಿಹ್ನೆಗಳಿಂದ ಕೂಡಿದುದು ಕೂರ್ಮನಾರಾಯಣ; ಇದು ಸರ್ವಾಭೀಷ್ಟಗಳನ್ನು ಕೊಡತಕ್ಕುದು.

ವರ್ತುಲಂ ದಕ್ಷಿಣೇ ಪಾರ್ಶ್ವೇ ಚಕ್ರದ್ವಯಯುತಂ ಬೃಹತ್ ।
ಧ್ವಜರೇಖಾಲಂಕೃತಂ ತನ್ನೀಲಗೋಖುರಸಂಯುತಮ್ ॥

ದ್ವಿಚಕ್ರಲಕ್ಷ್ಮೀಸಂಯುಕ್ತಂ ನಾರಾಯಣ ಇತೀರಿತಮ್ ।

ಉರುಟಾದುದು, ಬಲಭಾಗದಲ್ಲಿ ಎರಡು ಚಕ್ರಗಳಿದ್ದು ದೊಡ್ಡದಾಗಿದ್ದು, ಧ್ವಜರೇಖೆ ನೀಲವಾದ ದನದ ಗೊರಸಿನ ಚಿಹ್ನೆ ಇದ್ದುದು ದ್ವಿಚಕ್ರಲಕ್ಷ್ಮೀನಾರಾಯಣಮೂರ್ತಿಯಾಗಿದೆ.

ಏಕವಕ್ತ್ರ ಚತುಶ್ಚಕ್ರಂ ವರ್ತುಲಂ ಶ್ಯಾಮವರ್ಣಕಮ್ ॥

ನಾತಿಸ್ಥೂಲಂ ನಾತಿ ಹ್ರಸ್ವಂ ಲಕ್ಷ್ಮೀನಾರಾಯಣಃ ಸ್ಮೃತಃ ।

ಒಂದು ಮುಖದಲ್ಲಿ ನಾಲ್ಕು ಚಕ್ರಗಳಿದ್ದು ಉರುಟಾಗಿ, ನೀಲ ಬಣ್ಣವಿದ್ದು, ಬಹಳ ದೊಡ್ಡದೂ, ಬಹಳ ಗಿಡ್ಡಾದುದೂ ಅಲ್ಲದಿದ್ದುದು ಲಕ್ಷ್ಮೀನಾರಾಯಣಮೂರ್ತಿ.

ಚತುಶ್ಚಕ್ರಯುತಂ ದೇವಂ ಲಕ್ಷ್ಮೀನಾರಾಯಣಂ ವಿದುಃ ।
ಅರ್ಚತಾಂ ಸರ್ವದಾ ಪುಂಸಾಂ ಸರ್ವಕಾಮಫಲಪ್ರದಮ್ ॥

ನಾಲ್ಕು ಚಕ್ರಗಳುಳ್ಳದ್ದು ಲಕ್ಷ್ಮೀನಾರಾಯಣಮೂರ್ತಿ; ಪೂಜಿಸುವವರಿಗೆ ಸರ್ವಾಭೀಷ್ಟಗಳನ್ನೀಯುವುದು.

ರೇಖಾತ್ರಯಯುತಂ ಪಾರ್ಶ್ವೇ ಪೃಷ್ಠೇ ಪದ್ಮೇನ ಚಿಹ್ನಿತಮ್ ।
ಧ್ವಜವಜ್ರಗದೋಪೇತಂ ಚತುಷ್ಚಕ್ರಸಮನ್ವಿತಮ್ ॥

ಲಕ್ಷ್ಮೀನಾರಾಯಣಂ ಪ್ರಾಹುಃ ಸರ್ವಾಭಿಷ್ಟಫಲಪ್ರದಮ್ ।

ಪಾರ್ಶ್ವದಲ್ಲಿ ಮೂರು ರೇಖೆಗಳು, ಬೆನ್ನಿನಲ್ಲಿ ಪದ್ಮಚಿಹ್ನೆ, ಧ್ವಜ, ವಜ್ರ, ಗದೆಗಳ ಚಿಹ್ನೆಗಳು, ನಾಲ್ಕು ಚಕ್ರಗಳಿದ್ದುದು ಲಕ್ಷ್ಮೀನಾರಾಯಣಮೂರ್ತಿ; ಇದು ಸಕಲಾಭೀಷ್ಟಗಳನ್ನೂ ನೆರವೇರಿಸಿಕೊಡುವುದು.

ವರದೂರ್ವಾದಲಶ್ಯಾಮಂ ವನಮಾಲಾವಿಭೂಷಿತಮ್ ॥

ಸೂಕ್ಷ್ಮಚಕ್ರದ್ವಯೋಪೇತಂ ಪಂಕಜದ್ವಯಶೋಭಿತಮ್ ।
ಲಕ್ಷ್ಮೀನಾರಾಯಣಂ ಪ್ರಾಹುರ್ದುರ್ಲಭಂ ಶೀಘ್ರಸಿದ್ಧಿದಮ್ ॥

ಉತ್ತಮ ಗರಿಕೆಯ ಹುಲ್ಲಿನಂತಹ ಬಣ್ಣ, ವನಮಾಲೆ, ಶ್ರೀವತ್ಸ-ಶಂಖ-ಚಕ್ರ ಮೊದಲಾದ ಐದು ಆಯುಧಗಳ ಚಿಹ್ನೆಗಳಿದ್ದು, ಸೂಕ್ಷ್ಮವಾದ ೨ ಚಕ್ರಗಳು, ಕಮಲದ ಚಿಹ್ನೆಗಳೆರಡೂ ಇದ್ದಲ್ಲಿ ಅದು ಲಕ್ಷ್ಮೀ ನಾರಾಯಣಮೂರ್ತಿ. ಇದು ಅತಿದುರ್ಲಭವಾದುದು; ಪೂಜಕರಿಗೆ ಶೀಘ್ರವಾಗಿ ಇಷ್ಟಸಿದ್ಧಿಯನ್ನು ಕೊಡತಕ್ಕುದು.

ಏತಲ್ಲಕ್ಷಣಸಂಯುಕ್ತೋ ನಾಗಭೋಗೇನ ವೇಷ್ಟಿತಃ ।
ಪೃಷ್ಠೇ ರೇಖಾದ್ವಯೋಪೇತಃ ಪದ್ಮರೇಖಾಸಮನ್ವಿತಃ ॥

ದ್ವಿಚಕ್ರಾಂಕಿತ ವಕ್ತ್ರಸ್ತು ಚತುಷ್ಚಕ್ರಾಂಕಿತೋಽಪಿ ವಾ ।
ಲಕ್ಷ್ಮೀನಾರಾಯಣೋ ಜ್ಞೇಯಃ ಸರ್ವಾಭೀಷ್ಟಫಲಪ್ರದಃ ॥

ಹಿಂದೆ ಹೇಳಿದ ಶ್ರೀವತ್ಸಪಂಚಾಯುಧಗಳ ಚಿಹ್ನೆಗಳಿದ್ದು ಶೇಷಕುಂಡಲಚಿಹ್ನೆಗಳಿದ್ದು ಬೆನ್ನಿನಲ್ಲಿ ಎರಡು ಚಿಹ್ನೆಗಳು, ತಾವರೆಯ ರೇಖೆಗಳಿದ್ದು ೨ ಚಕ್ರ ಅಥವಾ ೪ ಚಕ್ರಗಳಿರುವುದು ಲಕ್ಷ್ಮೀನಾರಾಯಣಮೂರ್ತಿ; ಇದು ಸರ್ವಾಭೀಷ್ಟಗಳನ್ನು ಕೊಡತಕ್ಕುದು.

ಅಧಶ್ಚೋರ್ಧ್ವಂ ಪಾರ್ಶ್ವಯೋಶ್ಚ ಚಕ್ರೈರಪ್ಯುಪಲಕ್ಷಿತಃ ।
ಚತುರ್ಭಿರ್ಮಧ್ಯಸುಷಿರೋ ಲಕ್ಷ್ಮೀನಾರಾಯಣಃ ಸ್ಮೃತಃ ॥

ಸರ್ವಸಂಪತ್ಪ್ರದಶ್ಚೈವ ಪೂಜಕಸ್ಯಾರ್ಥಸಿದ್ಧಿದಃ ।

ಕೆಳಗೆ, ಮೇಲೆ, ಪಾರ್ಶ್ವಗಳಲ್ಲಿ ೪ ಚಕ್ರಗಳಿಂದ ಕೂಡಿ, ಮಧ್ಯದಲ್ಲಿ ತೂತು ಇದ್ದರೆ ಲಕ್ಷ್ಮೀನಾರಾಯಣ ಮೂರ್ತಿ; ಪೂಜಿಸುವವರಿಗೆ ಸರ್ವಸಂಪತ್ತನ್ನೂ ಇಷ್ಟಾರ್ಥಗಳನ್ನೂ ಕೊಡತಕ್ಕುದು.

ದ್ವಾರದ್ವಯೇ ಚತುಷ್ಚಕ್ರಂ ವಾಮೇ ವಾ ದಕ್ಷಿಣೇಽಪಿ ವಾ ॥

ಶ್ರೀವತ್ಸಶಂಖಚಕ್ರಾಢ್ಯಂ ಪಾರ್ಶ್ವೇ ಚಣಕಪುಷ್ಪವತ್ ।
ಲಕ್ಷ್ಮೀನಾರಾಯಣಂ ಪ್ರಾಹುರ್ಭುಕ್ತಿಮುಕ್ತಿಫಲಪ್ರದಮ್ ॥

ಎರಡು ದ್ವಾರದಲ್ಲಿ ೪ ಚಕ್ರಗಳು, ಎಡದಲ್ಲಾಗಲಿ ಬಲದಲ್ಲಾಗಲಿ ಶ್ರೀವತ್ಸ-ಶಂಖ-ಚಕ್ರಗಳ ಚಿಹ್ನೆಗಳು ಪಾರ್ಶ್ವದಲ್ಲಿ ಕಡಲೆಪುಷ್ಪದಂತಹ ಚಿಹ್ನೆಗಳಿದ್ದರೆ ಲಕ್ಷ್ಮೀನಾರಾಯಣಮೂರ್ತಿ; ಇದು ಇಹಪರಗಳಲ್ಲಿ ಐಹಿಕ ಭೋಗವನ್ನೂ ಮೋಕ್ಷವನ್ನೂ ಕೊಡತಕ್ಕುದು.

ಶೃಂಗಾಕೃತಿಸ್ತಥಾ ರೇಖಾ ದೃಶ್ಯತೇ ಮಧ್ಯದೇಶತಃ ।
ದ್ವೇ ಚಕ್ರೇ ಪಾರ್ಶ್ವಯುಗಳೇ ವಾಮೇ ಚಕ್ರಚತುಷ್ಟಯಮ್ ॥

ಲಕ್ಷ್ಮೀನಾರಾಯಣೋ ದೇವಃ ಪ್ರಭುರಿಷ್ಟಪ್ರದೋ ನೃಣಾಮ್ ।
ಅಧಶ್ಚೋರ್ಧ್ವಂ ಪಾರ್ಶ್ವಯೋಶ್ಚ ದ್ವಿದ್ವಿಚಕ್ರಂ ಭವೇದ್ಯದಿ ॥

ಲಕ್ಷ್ಮೀನಾರಾಯಣಂ ಪ್ರಾಹುಸ್ಸರ್ವಾಭೀಷ್ಟಫಲಪ್ರದಮ್ ।

ಕೆಳಗೆ, ಮೇಲೆ ಪಾರ್ಶ್ವಗಳಲ್ಲಿ ಕೂಡಾ ಎರಡೆರಡು ಚಕ್ರಗಳಿದ್ದರೆ ಸರ್ವಾಭೀಷ್ಟಗಳನ್ನು ಕೊಡುವ ಲಕ್ಷ್ಮೀನಾರಾಯಣಮೂರ್ತಿ ಎನ್ನುತ್ತಾರೆ. ನಾಲ್ಕು ಕಡೆಗಳಲ್ಲಿ ಎರಡೆರಡು ಚಕ್ರಗಳೆಂದರೆ ೮ ಚಕ್ರಗಳಿರಬೇಕಾಗಿದೆ.

ಮುಸಲಾಸಿ ಧನುರ್ಮಾಲಾ ಶಂಖಚಕ್ರಸಮನ್ವಿತಮ್ ॥

ಮೂಲೇ ವಾ ನಾಭಿದೇಶೇ ವಾ ಚಕ್ರದ್ವಯಸಮನ್ವಿತಮ್ ।
ಲಕ್ಷ್ಮೀನಾರಾಯಣಂ ದೇವಮಭೀಷ್ಟಫಲದಂ ವಿದುಃ ॥

ಒನಕೆ-ಖಡ್ಗ-ಬಿಲ್ಲು-ವನಮಾಲೆ-ಶಂಖ-ಚಕ್ರಗಳ ಚಿಹ್ನೆ ಇದ್ದು ಬುಡದಲ್ಲಾಗಲಿ ಹೊಕ್ಕುಳು ಪ್ರದೇಶದಲ್ಲಾಗಲಿ ಎರಡು ಚಕ್ರಗಳಿದ್ದರೆ ಅಭೀಷ್ಟಫಲವನ್ನೀಯುವ ಲಕ್ಷ್ಮೀನಾರಾಯಣನೆಂದು ತಿಳಿಯುವರು.

ದ್ವೇ ಚಕ್ರೇ ಹ್ಯಧಶ್ಚೋರ್ಧ್ವಂ ಲಕ್ಷ್ಮೀನಾರಾಯಣೋ ಭವೇತ್ ॥

ಕೆಳಗೂ ಮೇಲೆಯೂ ಎರಡೆರಡು ಚಕ್ರಗಳಿದ್ದರೆ ಲಕ್ಷ್ಮೀನಾರಾಯಣ ಶಾಲಗ್ರಾಮ.

## ೨೮. ವೀರನಾರಾಯಣಮೂರ್ತಿ ಲಕ್ಷಣಮ್ :

ತಮಾಲದಲಸಂಕಾಶಃ ಸ್ವರ್ಣವರ್ಣವಿಲೇಪವಾನ್ ।
ವೀರನಾರಾಯಣೋ ದೇವ ಏಕಚಕ್ರಸಮನ್ವಿತಃ ॥

ಸೀಗುರ್ಂದಿ ಪುಷ್ಪದ ಬಣ್ಣ, ಚಿನ್ನದ ಲೇಪದ ಬಣ್ಣ, ಒಂದು ಚಕ್ರವಿದ್ದರೆ ಆ ಮೂರ್ತಿಯೇ ವೀರನಾರಾಯಣಮೂರ್ತಿ.

ಒಟ್ಟು ೩೨ ರೀತಿಯಲ್ಲಿ ಕಂಡುಬರುತ್ತದೆ: ಒಟ್ಟು ೩೨ ವಿಧಗಳಿದ್ದರೂ ಸಾಮಾನ್ಯವಾಗಿ ಕಂಡುಬರುವುದು ಮತ್ತು ಹೆಚ್ಚು ಪಾವಿತ್ರ್ಯವನ್ನು ಹೊಂದಿರುವುದು ಲಕ್ಷ್ಮೀನಾರಾಯಣ ಶಾಲಗ್ರಾಮ.

ಲಕ್ಷ್ಮೀನಾರಾಯಣ ಶಾಲಗ್ರಾಮದಲ್ಲಿ ೧೩ ಪ್ರಬೇಧಗಳಿವೆ: ಅಭೀಷ್ಟಫಲದಲಕ್ಷ್ಮೀನಾರಾಯಣ., ತ್ರಿಗಂಭೀರ ಲಕ್ಷ್ಮೀನಾರಾಯಣ. ಅಂಜನಾಚಲಲಕ್ಷ್ಮೀನಾರಾಯಣ. ಜಂಬೂಫಲ, ಅಷ್ಟೈಶ್ವರ್ಯಪ್ರದಲಕ್ಷ್ಮೀ ನಾರಾಯಣ. ತ್ರಿರೇಖಾಲಕ್ಷ್ಮೀ ನಾರಾಯಣ. ಧ್ವಜವಜ್ರಾಂಕಿತ, ನವದೂರ್ವಾದಲ, ಪಕ್ಷಿರಾಜ, ಶ್ವೇತರೇಖಾ ದ್ವಯ, ಮಧ್ಯೇ ಸುಶಿರ, ಸುವರ್ಣತಾಲು, ಸ್ಮಿತಾನನ ಲಕ್ಷ್ಮೀನಾರಾಯಣ.

ಇತರ ೧೫ ವಿಧಗಳು: ಏಕಚಕ್ರ, ದ್ವಿಚಕ್ರ, ತ್ರಿಚಕ್ರ ಲಕ್ಷ್ಮೀನಾರಾಯಣ, ವೀರನಾರಾಯಣ, ಶುದ್ಧ ನಾರಾಯಣ, ಶ್ಯಾಮ ವರ್ಣನಾರಾಯಣ, ಕೃಷ್ಣವರ್ಣನಾರಾಯಣ, ವೇತ್ರಾಂಕನಾರಾಯಣ (ನಾಲ್ಕು ಚಕ್ರ ಗಳಿರುವ) ನಾಲ್ಕು, ಆರು, ಎಂಟು ಚಕ್ರಗಳನ್ನು ಹೊಂದಿರುವಂತಹ ಲಕ್ಷ್ಮೀನಾರಾಯಣ ಚಕ್ರಗಳಿಂದ ಲಕ್ಷ್ಮೀ ನಾರಾಯಣ. ರೂಪನಾರಾಯಣ, ಕೇಶಿಹಂತೃನಾರಾಯಣ, ಮಹಾದ್ಯುತಿನಾರಾಯಣ, ಅಚಕ್ರನಾರಾಯಣ.

## ೩. ಮಾಧವಮೂರ್ತಿ ಲಕ್ಷಣಮ್ :

ಮಧುವರ್ಣೋ ಮಧ್ಯಚಕ್ರಃ ಸ್ನಿಗ್ಧಸೂಕ್ಷ್ಮಮುಖಸ್ತಥಾ ।
ಮಾಧವಶ್ಚೇತಿ ವಿಜ್ಞೇಯೋ ಯತೀನಾಂ ಮೋಕ್ಷದಾಯಕಃ ॥

ಜೇನಿನ ಬಣ್ಣ, ಮಧ್ಯದಲ್ಲಿ ಚಕ್ರ, ನುಣ್ಣಗಿದ್ದು ಸೂಕ್ಷ್ಮವಾದ ವದನವಿದ್ದರೆ ಅದು ಮಾಧವಮೂರ್ತಿ. ಸನ್ಯಾಸಿಗಳಿಗೆ ಮೋಕ್ಷವನ್ನು ಕೊಡುವನು (ಅಂದರೆ, ಗೃಹಸ್ಥರಿಗೆ ಪೂಜೆಗೆ ಅಯೋಗ್ಯವೆಂದು ತಾತ್ಪರ್ಯ.) ಇದರಲ್ಲಿ ಎರಡು ವಿಧಗಳಿದ್ದು, ಎರಡರಲ್ಲೂ ಜೇನಿನ ಬಣ್ಣವನ್ನು ಹೊಂದಿದ್ದು– ಒಂದರ ಮಧ್ಯಭಾಗದಲ್ಲಿ ಚಕ್ರ ಹೊಂದಿದ್ದು ಸಣ್ಣದಾಗಿ, ಸೂಕ್ಷ್ಮವಾಗಿ ಸುಣ್ಣಾಗಿರುತ್ತದೆ. ಅಂತೆಯೇ ಇನ್ನೊಂದು ಇದಕ್ಕಿಂತ ದೊಡ್ಡ ಚಕ್ರವನ್ನು ಹೊಂದಿರುತ್ತದೆ.

## ೪. ಗೋವಿಂದಮೂರ್ತಿ ಲಕ್ಷಣಮ್ :

ನಾತಿಸ್ಥೂಲಃ ಕೃಷ್ಣವರ್ಣೋ ಗೋವಿಂದಃ ಪಂಚಚಕ್ರಕಃ ।
ದ್ವಿಚಕ್ರಯುಕ್ತ ಸರ್ವತ್ರ ಸರ್ವಾಭೀಷ್ಟಪ್ರದೋಽರ್ಚತಾಮ್ ॥

ಅತಿ ದೊಡ್ಡದಾಗಿರದೆ, ಕಪ್ಪುಬಣ್ಣವಿದ್ದರೆ ಗೋವಿಂದಮೂರ್ತಿ. ಇದು ಐದು ಚಕ್ರಗಳಿದ್ದುದು ಅಥವಾ ಎರಡು ಚಕ್ರಗಳಿದ್ದುದು ಪೂಜಕರಿಗೆ ಸರ್ವಾಭೀಷ್ಟವನ್ನು ಕೊಡುವುದು.

## ೫. ವಿಷ್ಣುಮೂರ್ತಿ ಲಕ್ಷಣಮ್ :

ವಾಮಚಕ್ರೇ ಬೃಹದ್ವಾರೋ ಉನ್ನತೋ ನಿಮ್ನಮಸ್ತಕಃ ।
ಸ ಕಾಪಿಲಸ್ನಿಗ್ಧವರ್ಣೋ ವಿಷ್ಣುರ್ವಿಷಯಭೋಗದಃ ॥

ಎಡದಲ್ಲಿ ಚಕ್ರ, ದೊಡ್ಡ ತೂತು, ಎತ್ತರವಾಗಿದ್ದು ತಲೆಯಲ್ಲಿ ಆಳವಾಗಿ ಕಪಿಲ(ಅರಸಿನ ಮಿಶ್ರಕೆಂಪು) ಬಣ್ಣವಿದ್ದು ನುಣ್ಣಗಿದ್ದರೆ ವಿಷ್ಣುಮೂರ್ತಿ; ಇದು ಲೌಕಿಕ ವಿಷಯಸುಖಭೋಗಪ್ರದಾಯಕ.

ವಿಷ್ಣುಕ್ರಾಂತಿಸಮಾಕಾರೋ ವನಮಾಲಾ ಸುಲಾಂಛಿತಃ ।
ಪಂಚಾಯುಧಸಮಾಯುಕ್ತೋ ವಿಷ್ಣುರಿತ್ಯಭಿಧೀಯತೇ ॥ – (ವಿಷ್ಣುರಿತ್ಯುಚ್ಯತೇ ಬುಧೈಃ)

ವಿಷ್ಣುಕ್ರಾಂತಿಪುಷ್ಪದಂತಹ ಬಣ್ಣ, ವನಮಾಲೆಯ ರೇಖೆ, ಶಂಖ–ಚಕ್ರ–ಗದಾ–ಪದ್ಮ–ಖಡ್ಗಗಳೆಂಬ ಐದು ಆಯುಧಗಳ ಚಿಹ್ನೆಗಳಿದ್ದರೆ ಕೂಡ ವಿಷ್ಣುಮೂರ್ತಿ ಎನಿಸುವುದು.

ವಿಷ್ಣುಸ್ತಥಾ ಕೃಷ್ಣವರ್ಣಃ ಸ್ಥೂಲಚಕ್ರಸ್ತು ವರ್ತುಲಃ ।
ಗದಾಕಾರಾ ಚ ರೇಖಾ ತು ಲಕ್ಷ್ಯತೇ ಮಧ್ಯದೇಶತಃ ।
ಚಕ್ರದ್ವಯಯುತೋ ನೃಣಾಂ ಬಹುಭಾಗ್ಯಪ್ರದೋಽರ್ಚತಾಮ್ ॥

ಕಪ್ಪುಬಣ್ಣ, ದೊಡ್ಡ ಚಕ್ರಗಳೆರಡು, ಉರುಟಾದ ಆಕಾರ, ಮಧ್ಯದಲ್ಲಿ ಗದಾರೇಖೆ ಇದ್ದರೆ ವಿಷ್ಣು; ಇದು ಪೂಜಕರಿಗೆ ಬಹುಭಾಗ್ಯವನ್ನು ಕೊಡುವುದು. ಒಟ್ಟು ಪ್ರಕಾರಗಳಿಂದ ಉಂಟಾಗುತ್ತದೆ. ಈ ಮೂರ್ತಿಯು ಒಟ್ಟು ೬ ಬಣ್ಣಗಳಿಂದ ರೂಪುಗೊಳ್ಳುತ್ತದೆ: ಕಪಿಲಾ, ಕೃಷ್ಣ, ರಕ್ತಾಭ, ಸಪ್ರಕಾಶ, ವಿಷ್ಣುಕ್ರಾಂತಪುಷ್ಪದಂತೆ ಮತ್ತು ಹೇಮ(ಬಂಗಾರ)ದಂತೆ.

## ೭. ಮಧುಸೂದನಮೂರ್ತಿ ಲಕ್ಷಣಮ್ :

ಮಧುಸೂದನಸ್ತಥಾ ದೇವ ಏಕಚಕ್ರೋ ಮಹಾದ್ಯುತಿಃ ।
ಸರ್ವವರ್ಣಸಮೋಪೇತೋ ಮಹಾಭಾಗ್ಯಪ್ರದೋ ನೃಣಾಮ್ ॥

ಒಂದು ಚಕ್ರವಿದ್ದು ಎಲ್ಲ ಬಣ್ಣಗಳೂ ಸೇರಿ ಇದ್ದು ಬಹಳ ಕಾಂತಿ ಇದ್ದರೆ ಮಧುಸೂದನಮೂರ್ತಿ; ಪೂಜಿಸುವ ಮನುಷ್ಯರಿಗೆ ಮಹಾಭಾಗ್ಯವನ್ನು ಕೊಡುವುದು.

## ೭. ತ್ರಿವಿಕ್ರಮಮೂರ್ತಿ ಲಕ್ಷಣಮ್ :

ತ್ರಿವಿಕ್ರಮಸ್ತ್ರಿಕೋಣಾಢ್ಯಶ್ಚಕ್ರತ್ರಯವಿಭೂಷಿತಃ ।
ಶಿಷ್ಟೈರ್ದ್ವಿಜೈರೇವ ಪೂಜ್ಯೋ ನೇತರೈಸ್ಸ ಕದಾಚನ ॥

ತ್ರಿಕೋಣಾಕಾರ, ಮೂರು ಚಕ್ರಗಳಿದ್ದರೆ ತ್ರಿವಿಕ್ರಮ. ಅತ್ಯಂತ ಶಿಷ್ಟರಾದ ಬ್ರಾಹ್ಮಣರು ಎಂದರೆ, ಸನ್ಯಾಸಿಗಳು ಅಥವಾ ಕೇವಲ ಮೋಕ್ಷಾರ್ಥಕಾರ್ಯಗಳನ್ನು ಮಾಡುವವರು ಮಾತ್ರವೇ ಈ ತ್ರಿವಿಕ್ರಮ ಮೂರ್ತಿಯನ್ನು ಪೂಜಿಸಬಹುದಲ್ಲದೆ, ಇತರ ಸಾಮಾನ್ಯ ಜನರು ಇದನ್ನು ಪೂಜಿಸಕೂಡದು.

ತ್ರಿವಿಕ್ರಮಸ್ತಥಾ ದೇವಃ ಶ್ಯಾಮವರ್ಣಃ ಪ್ರಕೀರ್ತಿತಃ ।
ವಾಮಭಾಗೇ ಗದಾ ಚಕ್ರರೇಖಾ ಚೈವ ತು ದಕ್ಷಿಣೇ ॥

ತ್ರಿಕೋಣಾಢ್ಯಃ ಸ್ನಿಗ್ಧಚಕ್ರೋ ಧನಂ ಪೂರ್ಣಂ ಪ್ರಯಚ್ಛತಿ ।

ಕಪ್ಪು ಬಣ್ಣ, ಎಡಭಾಗದಲ್ಲಿ ಗದಾರೇಖೆ, ಬಲಭಾಗದಲ್ಲಿ ಚಕ್ರರೇಖೆ, ತ್ರಿಕೋಣಾಕಾರ, ನುಣ್ಣಗಿರುವ ಚಕ್ರವಾಗಿದ್ದರೆ ತ್ರಿವಿಕ್ರಮ; ಪೂಜಿಸುವವರಿಗೆ ಸಂಪೂರ್ಣ ದ್ರವ್ಯವನ್ನು ಕೊಡುವನು.

ಕುಕ್ಕುಟಾಂಡಸಮಾಕಾರೋ ಊರ್ಧ್ವಚಕ್ರಂ ಸುಶೋಭನಮ್ ।
ದ್ವೇ ಚಕ್ರೇ ಹ್ಯೇಕಭಾಗೇ ತು ಪೂರ್ವಭಾಗೇ ತು ಪುಷ್ಕರಮ್ ॥
ತ್ರಿವಿಕ್ರಮ ಇತಿ ಜ್ಞೇಯೋ ಧನಧಾನ್ಯಪ್ರದಾಯಕಃ ॥

ಧ್ವಜಾಕಾರ ಸುಬಿಂದ್ವಾಢ್ಯಃ ಶಂಖಲಾಂಗಲಸಂಯುತಃ ।
ತ್ರಿವಿಕ್ರಮಸ್ಸವಿಜ್ಞೇಯೋ ಹ್ಯಪಮೃತ್ಯುಹರಃ ಶುಭಃ ॥

ಕೋಳಿಮೊಟ್ಟೆಯಂತಹ ಆಕಾರ, ತಲೆಯಲ್ಲಿ ಅಂದವಾದ ಚಕ್ರ, ಒಂದು ಭಾಗದಲ್ಲಿ ಎರಡು ಚಕ್ರಗಳು, ಪೂರ್ವಭಾಗದಲ್ಲಿ ಪದ್ಮಚಿಹ್ನೆಗಳಿದ್ದರೆ, ಧ್ವಜಾಕಾರ ಬಿಂದುಸಹಿತ, ಶಂಖಸಹಿತನಾದವನು ತ್ರಿವಿಕ್ರಮಮೂರ್ತಿ; ಇದು ಪೂಜಕರಿಗೆ ಶುಭಕರವಾಗಿದ್ದು, ಅಪಮೃತ್ಯು ಪರಿಹಾರಕವಾಗಿರುವುದು.

ಒಟ್ಟು ೫ ಪ್ರಕಾರಗಳಿಂದ ಉಂಟಾಗುತ್ತದೆ: ತ್ರಿಕೋಣದಂತೆ, ಶ್ಯಾಮಲವರ್ಣದಿಂದ, ದೀರ್ಘಾಕಾರ ದಿಂದ, ಪುಷ್ಪದಂತ (ಆನೆಯ ಸೊಂದಿಲಿನ ಚಿಹ್ನೆಯಿಂದ), ಧ್ವಜಕರ್ಣದಂತೆ ರೂಪುಗೊಳ್ಳುತ್ತದೆ.

## ೮, ೯, ೧೦. ವಾಮನಮೂರ್ತಿ/ನರಸಿಂಹಮೂರ್ತಿ/ಶ್ರೀಕೃಷ್ಣಮೂರ್ತಿಲಕ್ಷಣಮ್ :

ವಾಮನೋ ನರಸಿಂಹಶ್ಚ ಕೃಷ್ಣಶ್ಚೈವ ತಥಾ ತ್ರಯಃ ।
ಉಕ್ತತ್ವಾದತ್ರ ನೋಚ್ಯಂತೇ ಪ್ರಾಗ್ವದೇವ ಹಿ ಲಕ್ಷಣಮ್ ॥

೨೪ ಮೂರ್ತಿಗಳ ಕ್ರಮದಲ್ಲಿ ವಾಮನ-ನರಸಿಂಹ-ಕೃಷ್ಣ ಈ ಮೂರು ಮೂರ್ತಿಗಳ ಲಕ್ಷಣಗಳನ್ನು ದಶಾವತಾರ ಮೂರ್ತಿಕ್ರಮದಲ್ಲಿ ಹಿಂದೆ ಹೇಳಿರುವುದರಿಂದ ಇಲ್ಲಿ ಹೇಳುವುದಿಲ್ಲ. ಹಿಂದಿನ ಲಕ್ಷಣಗಳಿಂದಲೇ ತಿಳಿಯತಕ್ಕದ್ದು.

## ೧೧. ಶ್ರೀಧರಮೂರ್ತಿ ಲಕ್ಷಣಮ್ :

ಶ್ರೀಧರಶ್ಚ ತಥಾ ದೇವಶ್ಚಿಹ್ನಿತೋ ವನಮಾಲಯಾ ।
ಕದಂಬಕುಸುಮಾಕಾರ ರೇಖಾಪಂಚಾಯುಧಾನ್ವಿತಃ ॥

ಮಧ್ಯದೇಶೇ ವಾಮಭಾಗೇ ಪಂಕಜೇನ ಸಮನ್ವಿತಃ ।
ಸೂಕ್ಷ್ಮಾನನಃ ಶ್ಯಾಮಲಾಭಃ ಸ ತು ವೈ ಶ್ರೀಧರಃ ಸ್ಮೃತಃ ॥

ವನಮಾಲೆಯ ಚಿಹ್ನೆ, ಕದಂಬಪುಷ್ಪದಂತಹ ರೇಖೆ, ಮಧ್ಯದಲ್ಲಿ ಪಂಚಾಯುಧಗಳ ಚಿಹ್ನೆ, ಎಡದಲ್ಲಿ ಪದ್ಮರೇಖೆ, ಚಿಕ್ಕ ಮುಖ, ಕಪ್ಪುಬಣ್ಣಗಳಿದ್ದರೆ ಶ್ರೀಧರಮೂರ್ತಿ.

ದೂರ್ವಾಶ್ಯಾಮಲಸಂಕಾಶೋ ವನಮಾಲಾವಿಭೂಷಿತಃ ।
ಆಸ್ಯತ್ರಯೇ ದ್ವಿಚಕ್ರಾಢ್ಯಃ ಶ್ರೀಧರಃ ಪರಿಕೀರ್ತಿತಃ ॥

ಗರಿಕೆಯಂತೆ ನೀಲವರ್ಣ, ವನಮಾಲೆಯ ಚಿಹ್ನೆ, ಮೂರು ದ್ವಾರಗಳಲ್ಲಿ ಎರಡು ಚಕ್ರಗಳಿದ್ದರೆ ಶ್ರೀಧರಮೂರ್ತಿ.

ಪುರಶ್ಚಕ್ರದ್ವಯಂ ಯಸ್ಯ ಪಾರ್ಶ್ವೇ ಚಕ್ರದ್ವಯಂ ತಥಾ ।
ಪಾರ್ಶ್ವೇ ಚಕ್ರದ್ವಯಶ್ಚೈವ ಶ್ರೀಧರಃ ಪರಿಕೀರ್ತಿತಃ ॥

ಇದಿರಿನಲ್ಲಿ ಎರಡು ಚಕ್ರ, ಪಾರ್ಶ್ವದಲ್ಲಿ ಎರಡು ಚಕ್ರ ಮತ್ತೊಂದು ಪಾರ್ಶ್ವದಲ್ಲಿ ಎರಡು ಚಕ್ರಗಳಿದ್ದರೆ ಶ್ರೀಧರ ಮೂರ್ತಿಯು.

ಶ್ರೀಧರೋ ವರ್ತುಲಶ್ಚೈವ ಆಸ್ಯತ್ರಯಸಮನ್ವಿತಃ ।
ಚಕ್ರದ್ವಯಸಮಾಯುಕ್ತಃ ಸರ್ವಭಾಗ್ಯಪ್ರದೋಽರ್ಚತಾಮ್ ॥

ಉರುಟಾಗಿದ್ದು ಮೂರು ದ್ವಾರಗಳೂ ಎರಡು ಚಕ್ರಗಳೂ ಇರುವುದು ಶ್ರೀಧರಮೂರ್ತಿ; ಇದನ್ನು ಪೂಜಿಸುವವರಿಗೆ ಭಾಗ್ಯವನ್ನು ಕೊಡತಕ್ಕದು.

## ೧೨. ಹೃಷೀಕೇಶಮೂರ್ತಿ ಲಕ್ಷಣಮ್ :

ಕದಂಬಕುಸುಮಾಕಾರೋ ರೇಖಾಪಂಚಕಸಂಯುತಾಃ ।
ಅರ್ಧಚಂದ್ರಾಕೃತಿರ್ದೇವಃ ಪಂಚಚಕ್ರಸಮನ್ವಿತಃ ॥

ತ್ರಿಚಕ್ರಶ್ಚೈಕಚಕ್ರೋ ಹೃಷೀಕೇಶ ಇತೀರಿತಃ ।

ಕದಂಬಪುಷ್ಪದಂತಹ ಆಕಾರ, ೫ ರೇಖೆಗಳು, ಅರ್ಧಚಂದ್ರಾಕೃತಿ, ೫ ಅಥವಾ ೩ ಚಕ್ರಗಳಿದ್ದರೆ ಇಲ್ಲವೆ ಒಂದು ಚಕ್ರವಿದ್ದರೆ ಹೃಷೀಕೇಶಮೂರ್ತಿ ಎನಿಸುತ್ತದೆ.

ಕೃಶಂ ವಿಷಮಚಕ್ರಾಢ್ಯಂ ಇಂದ್ರನೀಲಸಮಪ್ರಭಮ್ ।
ಹೃಷೀಕೇಶಮಿಮಂ ಪ್ರಾಹುಃ ಶುದ್ಧಜ್ಞಾನಪ್ರದಾಯಕಮ್ ॥

ಕೃಶವಾಗಿದ್ದು ವಿಷಮಸಂಖ್ಯೆಯ ಚಕ್ರಗಳು ನೀಲಮಣಿಯಂತಹ ಕಾಂತಿ ಇದ್ದರೆ ಹೃಷೀಕೇಶನು ಉತ್ತಮ ಜ್ಞಾನವನ್ನು ಕೊಡತಕ್ಕವನು.

**ಪಂಚವಕ್ತ್ರಸಮಾಯುಕ್ತಂ ದಶಚಕ್ರಸಮನ್ವಿತಮ್ ।**
**ಶ್ಯಾಮಲಂ ಕೋಮಲಾಕಾರಂ ಹೃಷೀಕೇಶಂ ಪ್ರಚಕ್ಷತೇ ॥**

೫ ಮುಖಗಳು, ೧೦ ಚಕ್ರಗಳು, ನೀಲವರ್ಣ, ಕೋಮಲವಾದ ಆಕಾರವಿದ್ದರೆ ಹೃಷೀಕೇಶನೆನ್ನುತ್ತಾರೆ.

## ೧೩. ಪದ್ಮನಾಭಮೂರ್ತಿ ಲಕ್ಷಣಮ್ :

**ನಿಷ್ಕೇಸರೋರ್ಧ್ವಚಕ್ರಶ್ಚ ಅಧಶ್ಚಕ್ರೇ ಸಕೇಸರಃ ।**
**ಪದ್ಮನಾಭ ಇತಿ ಪ್ರೋಕ್ತೋ ವಿಪರೀತೋ ಹಲಾಯುಧಃ ॥**

ಮೇಲಿನ ಚಕ್ರದಲ್ಲಿ ಕೇಸರಗಳಿಲ್ಲದೆ, ಕೆಳ ಚಕ್ರದಲ್ಲಿ ಕೇಸರಗಳಿದ್ದರೆ ಪದ್ಮನಾಭ ಎಂದು ಹೇಳಲ್ಪಡುತ್ತದೆ; ಇದಕ್ಕೆ ವಿರುದ್ಧವಾಗಿ ಮೇಲಿನ ಚಕ್ರದಲ್ಲಿ ಕೇಸರಗಳಿದ್ದು ಕೆಳ ಚಕ್ರದಲ್ಲಿ ಕೇಸರಗಳಿಲ್ಲದಿದ್ದರೆ ಬಲರಾಮಮೂರ್ತಿ.

ಇದು ೫ ರೀತಿಯಲ್ಲಿ ಕಂಡುಬರುತ್ತದೆ: ಅಶತ್ರು ಪದ್ಮನಾಭ, ಶುಭದಾಯಕ ಪದ್ಮನಾಭ, ನಾಭಿಚಕ್ರ ಪದ್ಮನಾಭ, ಶಂಖವರ್ಣ ಪದ್ಮನಾಭ, ಚಾಮೀಕರ ಪದ್ಮನಾಭ.

## ೧೪. ದಾಮೋದರಮೂರ್ತಿ ಲಕ್ಷಣಮ್ :

**ನಾಭಿಚಕ್ರಲಸನ್ಮೂರ್ತಿರ್ಜಂಬೂಫಲಸಮದ್ಯುತಿಃ ।**
**ದಾಮೋದರ ಇತಿ ಖ್ಯಾತೋ ಭುಕ್ತಿಮುಕ್ತಿಫಲಪ್ರದಃ ॥**

ಹೊಕ್ಕುಳಿನಲ್ಲಿ ಚಕ್ರ, ನೇರಳೆ ಹಣ್ಣಿನಂತಹ ವರ್ಣವಿದ್ದರೆ ಅದು ದಾಮೋದರಮೂರ್ತಿ; ಇದು ಐಹಿಕಭೋಗ ಮತ್ತು ಕೊನೆಯಲ್ಲಿ ಮೋಕ್ಷವನ್ನು ಕೊಡತಕ್ಕುದು.

**ದಾಮೋದರಸ್ತಥಾ ಸ್ಥೂಲೋ ಮಧ್ಯಚಕ್ರಪ್ರತಿಷ್ಠಿತಃ ।**
**ದೂರ್ವಾಭೋ ದ್ವಾರಸಂಕೀರ್ಣೋ ದೀರ್ಘರೇಖಾಯುತಃ ಶುಭಃ ॥**
**ವನಮಾಲಾಲಸತ್ಕಂಠಃ ಪ್ರೋಕ್ತೋ ದಾಮೋದರೋ ದ್ವಿಜಃ ।**

ದೊಡ್ಡದಾದ ಆಕಾರ, ಮಧ್ಯದಲ್ಲಿ ಚಕ್ರ, ಗರಿಕೆಹುಲ್ಲಿನ ಬಣ್ಣ, ದ್ವಾರಗಳಿದ್ದು, ಉದ್ದವಾದ ರೇಖೆಯಿಂದ ಕೂಡಿದ್ದು ವನಮಾಲೆಯ ಚಿಹ್ನೆಯಿರುವ ಕುತ್ತಿಗೆ ಇದ್ದರೆ ಅದು ದಾಮೋದರಮೂರ್ತಿ; ಈ ಮೂರ್ತಿಯು ಪೂಜಕರಿಗೆ ಶುಭವನ್ನೀಯುವುದು.

**ಸ್ಥೂಲೋ ದಾಮೋದರೋ ಜ್ಞೇಯಃ ಸೂಕ್ಷ್ಮರಂಧ್ರೋ ದ್ವಿಚಕ್ರಯುಕ್ ।**
**ಸಕಾಪಿಲಃ ಕೃಷ್ಣವರ್ಣೋ ನೃಣಾಂ ಶುಭಫಲಪ್ರದಃ ॥**

ಸೂಕ್ಷ್ಮವಾದ ರಂಧ್ರಗಳು, ಎರಡು ಚಕ್ರಗಳಿದ್ದು, ಕಪ್ಪು-ಕೆಂಪುಮಿಶ್ರ ಅಥವಾ ಕೇವಲ ಕಪ್ಪುಬಣ್ಣವಿದ್ದರೆ ಸ್ಥೂಲ ದಾಮೋದರಮೂರ್ತಿ; ಪೂಜಿಸುವ ಮನುಷ್ಯರಿಗೆ ಶುಭಫಲವನ್ನೀಯುವುದು.

ಇದು ೫ ರೀತಿಯಿಂದ ಕೂಡಿರುತ್ತದೆ: ದೂರ್ವಾಭ, ನೀಲಮೇಘ, ಕಪಿಲಾ, ಸೂಕ್ಷ್ಮರಂಧ್ರ, ಗದಾಕಾರ ದಾಮೋದರ.

## ೧೫. ಸಂಕರ್ಷಣಮೂರ್ತಿ ಲಕ್ಷಣಮ್ :

ದ್ವಿಚಕ್ರಮೇಕಭಾಗೇ ತು ಭಾಗ್ಯೈಕೇ ಪುಷ್ಕರಂ ಭವೇತ್ ।
ಸಂಕರ್ಷಣಸ್ಸವಿಜ್ಞೇಯೋ ರಕ್ತಾಭಶ್ಚಾತಿಶೋಭನಃ ॥

ಒಂದು ಭಾಗದಲ್ಲಿ ಎರಡು ಚಕ್ರಗಳು ಮತ್ತೊಂದು ಭಾಗದಲ್ಲಿ ಕಮಲದ ಚಿಹ್ನೆ, ಕೆಂಪುಬಣ್ಣವಿದ್ದರೆ ಅದು ಸಂಕರ್ಷಣಮೂರ್ತಿ; ಇದು ಅತಿಮಂಗಳಕರವಾದುದು.

೪ ರೀತಿಯಲ್ಲಿ ಉಂಟಾಗುತ್ತದೆ: ರಾಜಪೂಜ್ಯ ಪರಶುರಾಮ, ಶಾಂತಪರಶುರಾಮ, ಅತಸೀಪುಷ್ಪ ಪರಶುರಾಮ ಮತ್ತು ದೂರ್ವಾಭ ಪರಶುರಾಮ.

## ೧೬. ವಾಸುದೇವಮೂರ್ತಿ ಲಕ್ಷಣಮ್ :

ದ್ವಾರದೇಶೇ ಸಮೇ ಚಕ್ರೇ ದೃಶ್ಯತೇ ನಾಂತರೀಯಕೇ ।
ವಾಸುದೇವಸ್ಸವಿಜ್ಞೇಯಃ ಶುಕ್ಲಾಭಶ್ಚಾತಿಶೋಭನಃ ॥

ದ್ವಾರದೇಶದಲ್ಲಿ ಸಮಾನವಾದ ಎರಡು ಚಕ್ರಗಳಿದ್ದು ಅವು ಅತಿ ಒಳಗಿರದಿದ್ದರೆ, ಬಿಳಿಯ ವರ್ಣವಿದ್ದರೆ ಅದು ವಾಸುದೇವಮೂರ್ತಿ; ಇದು ಅತಿ ಮಂಗಳಕರವಾದುದು.

ರೇಖಾಪಂಚಾಯುಧಧರೋ ಹಿಮಾಂಶುಸದೃಶಪ್ರಭಃ ।
ನಾಭಿಚಕ್ರಧರಃ ಶಾಂತೋ ವಾಸುದೇವ ಇತೀರಿತಃ ॥

ಚಕ್ರ-ಶಂಖ-ಗದಾ-ಪದ್ಮ-ಶಾರ್ಙ್ಗಗಳೆಂಬ ಐದು (ಆಯುಧರೂಪದ) ರೇಖೆಗಳು, ಚಂದ್ರನಿಗೆ ಸಮಾನವಾದ ಕಾಂತಿ ಹೊಕ್ಕುಳಿನಲ್ಲಿ ಚಕ್ರವಿದ್ದರೆ ಅತಿ ಶಾಂತವಾದ ವಾಸುದೇವಮೂರ್ತಿ.

ಪೂಗೀಫಲಸಮಾಕಾರಂ ಹ್ರಸ್ವಂ ಚ ಪರಿವರ್ತುಲಮ್ ।
ದ್ವಾರದೇಶೇ ಸಮೇ ಚಕ್ರೇ ದೃಶ್ಯತೇ ನಾಂತರೀಯಕೇ ॥

ಲಲಾಟೇ ಶ್ವೇತರೇಖಾ ತು ವಾಸುದೇವಸ್ಯ ಲಕ್ಷಣಮ್ ।

ಅಡಕೆಯಂತಹ ಗಿಡ್ಡಾದ ಆಕಾರ, ಉರುಟಾಗಿದ್ದು, ಮುಖಭಾಗದಲ್ಲಿ ಎರಡು ಸಮಾನಚಕ್ರಗಳು ಅತಿ ಒಳಗಡೆ ಇರದಿರುವುದು ಹಾಗೂ ಹಣೆಯಲ್ಲಿ ಬಿಳಿರೇಟೆ ಇರುವುದು ವಾಸುದೇವಮೂರ್ತಿಯ ಲಕ್ಷಣ.

ತುಂಬಾ ಪ್ರಸಿದ್ಧಿಯಾಗಿ, ವಿಪುಲತರವಾಗಿ, ಸಾಮಾನ್ಯವಾಗಿ ಸಿಗುವಂತಹ ಈ ಮೂರ್ತಿಯಲ್ಲಿ ೬ ಪ್ರಭೇದ ಗಳಿವೆ. ಚಂದ್ರಾಭವಾಸುದೇವ, ದ್ವಾರಕಾಚಕ್ರವಾಸುದೇವ, ಪೂಗೀಫಲವಾಸುದೇವ, ಛಿದ್ರಪೃಷ್ಠ ವಾಸುದೇವ, ಪದ್ಮಯುಕ್ತ ವಾಸುದೇವ, ನೀಲೋತ್ಪಲ ವಾಸುದೇವ.

## ೧೭. ಪ್ರದ್ಯುಮ್ನಮೂರ್ತಿ ಲಕ್ಷಣಮ್ :

ಪ್ರದ್ಯುಮ್ನಃ ಸೂಕ್ಷ್ಮಚಕ್ರಸ್ತು ಶ್ವೇತವರ್ಣಸ್ತಥೈವ ಚ ।
ಸುಷಿರಂ ಬಹುಲಂ ಚೈವ ದೀರ್ಘಾಕಾರಂ ತು ತದ್ಭವೇತ್ ॥

ಪ್ರದ್ಯುಮ್ನ ಇತಿ ವಿಖ್ಯಾತಃ ಸರ್ವಕಾಮಫಲಪ್ರದಃ ।

ಸೂಕ್ಷ್ಮವಾದ ಚಕ್ರ, ಬಿಳಿಯಬಣ್ಣ, ಹೆಚ್ಚು ತೂತುಗಳು, ಉದ್ದವಾದ ಆಕಾರವಿದ್ದರೆ, ಪ್ರದ್ಯುಮ್ನನೆಂದು ಪ್ರಸಿದ್ಧವಾದುದು; ಇದು ಪೂಜಕರಿಗೆ ಸರ್ವಾಭೀಷ್ಟಗಳನ್ನೂ ಕೊಡುವಂತಹುದು.

ಪ್ರದ್ಯುಮ್ನಃ ಸೂಕ್ಷ್ಮಚಕ್ರಸ್ತು ಪೀತವರ್ಣಸ್ತಥೈವ ಚ ।
ಮಕರಾಭಾ ಭವೇದ್ರೇಖಾ ಪಾರ್ಶ್ವತಃ ಪೃಷ್ಠತೋಽಪಿ ವಾ ॥

ಸೂಕ್ಷ್ಮವಾದ ಚಕ್ರ, ಅರಸಿನ ಬಣ್ಣ, ಪಾರ್ಶ್ವದಲ್ಲಾಗಲಿ, ಬೆನ್ನಿನಲ್ಲಾಗಲಿ ಮೊಸಳೆಯಂತಹ ರೇಖೆಗಳಿದ್ದರೆ ಪ್ರದ್ಯುಮ್ನಮೂರ್ತಿಯು.

ಇದು ೪ ರೀತಿಯಲ್ಲಿ ಉಂಟಾಗುತ್ತದೆ: ಬಹುಛಿದ್ರಪ್ರದ್ಯುಮ್ನ, ಕೃಷ್ಣವರ್ಣಪ್ರದ್ಯುಮ್ನ, ಮಕರಾಭ ಪ್ರದ್ಯುಮ್ನ, ಜಪಾಕುಸುಮಪ್ರದ್ಯುಮ್ನ.

## ೧೮. ಅನಿರುದ್ಧಮೂರ್ತಿ ಲಕ್ಷಣಮ್ :

ಅನಿರುದ್ಧಸ್ತು ನೀಲಾಭೋ ವರ್ತುಲಶ್ಚಾತಿಶೋಭನಃ ।
ರೇಖಾತ್ರಯಸಮಾಯುಕ್ತೋ ದ್ವಾರೇ ಪದ್ಮವಿಭೂಷಿತಃ ॥
ಕೃಷ್ಣವರ್ಣಃ ಸಮದ್ವಾರಶ್ಚಕ್ರಂ ಭಿತ್ತಿಸಮೀಪಗಮ್ ।
ಅನಿರುದ್ಧ ಇತಿ ಪ್ರೋಕ್ತಃ ಸರ್ವಾಭೀಷ್ಟಫಲಪ್ರದಃ ॥

ಕಪ್ಪುಬಣ್ಣ, ಉರುಟಾದ ಆಕಾರ, ಮೂರು ರೇಖೆಗಳು, ದ್ವಾರದಲ್ಲಿ ಪದ್ಮದ ಚಿಹ್ನೆ, ಸಮವಾದ ದ್ವಾರ, ಶಾಲಗ್ರಾಮದೊಳಗಡೆಯ ಗೋಡೆಯಂತಿರುವ ಸ್ಥಳಕ್ಕೆ ತಗಲಿದ ಚಕ್ರ ಈ ಲಕ್ಷಣಗಳಿದ್ದರೆ ಅದು ಅನಿರುದ್ಧ ಮೂರ್ತಿ; ಇದು ಪೂಜಕನಿಗೆ ಸರ್ವಾಭೀಷ್ಟಗಳನ್ನು ಕೊಡುವಂತಹುದು.

ಇದು ೫ ರೀತಿಯಲ್ಲಿ ಉಂಟಾಗುತ್ತದೆ: ಸುಸ್ಥಿರ, ತ್ರಿರೇಖಾ, ಕೃಷ್ಣವರ್ಣ, ಸ್ವರ್ಣಕಾಂಶ್ಯ ರೇಖೆಯಿಂದ ಕೂಡಿದ ಬಿಳಿವರ್ಣದ ಅನಿರುದ್ಧ.

## ೧೯. ಪುರುಷೋತ್ತಮಮೂರ್ತಿ ಲಕ್ಷಣಮ್:

ಮಧ್ಯಚಕ್ರಂ ಸುವರ್ಣಂ ತು ಮಸ್ತಕೇ ಪೃಥುಚಕ್ರವತ್ ।
ಪುರುಷೋತ್ತಮಸ್ಸವಿಜ್ಞೇಯೋ ಸರ್ವಭಾಗ್ಯಪ್ರದೋಽರ್ಚತಾಮ್ ॥

ಮಧ್ಯದಲ್ಲಿ ಚಕ್ರ, ಸುವರ್ಣರೇಖೆ, ತಲೆಯಲ್ಲಿ ದೊಡ್ಡ ಚಕ್ರ ಇವು ಇದ್ದಲ್ಲಿ ಅದು 'ಪುರುಷೋತ್ತಮ ಮೂರ್ತಿ'; ಇದನ್ನು ಪೂಜಿಸುವವರಿಗೆ ಸರ್ವಭಾಗ್ಯವನ್ನೀಯುವುದು.

ಕೃಷ್ಣವರ್ಣಂ ಸೂಕ್ಷ್ಮರಂಧ್ರಂ ದೂರೇ ಚಕ್ರದ್ವಯಾನ್ವಿತಮ್ ।
ಶಿರಸ್ಯೇಕಂ ಬೃಹಚ್ಚಕ್ರಂ ಜ್ಞೇಯಂ ತತ್ಪುರುಷೋತ್ತಮಮ್ ॥

ಕಪ್ಪುಬಣ್ಣ, ಸೂಕ್ಷ್ಮವಾದ ತೂತು, ದೂರದೂರದಲ್ಲಿ ಎರಡು ಚಕ್ರಗಳು, ಶಿರಸ್ಸಿನಲ್ಲಿ ಒಂದು ದೊಡ್ಡ ಚಕ್ರವಿದ್ದರೆ ಅದು ಪುರುಷೋತ್ತಮಮೂರ್ತಿಯು.

ಆಸ್ಯಾಂತರಾಳೇ ದ್ವೇ ಚಕ್ರೇ ಶಿರಶ್ಚಕ್ರಂ ಬೃಹದ್ಭವೇತ್ ।
ಲಲಾಟೇ ದಂಡರೇಖಾ ಚ ದ್ವಾರಪಾರ್ಶ್ವೇ ಚ ಕಲ್ಪಕಮ್ ॥

ಸಕುಂಡಲಂ ಚ ವಿಜ್ಞೇಯಮಿಷ್ಟದಂ ಪುರುಷೋತ್ತಮಮ್ ।

ಮುಖದೊಳಗೆ ಎರಡು ಚಕ್ರಗಳು, ಶಿರಸ್ಸಿನಲ್ಲಿ ದೊಡ್ಡ ಚಕ್ರ, ಹಣೆಯಲ್ಲಿ ದಂಡಾಕಾರದ ರೇಖೆ, ದ್ವಾರ ಪಾರ್ಶ್ವಗಳಲ್ಲಿ ಕಲ್ಪವೃಕ್ಷಗಳ ಚಿಹ್ನೆ, ಕುಂಡಲದಿಂದ ಕೂಡಿದುದು ಪುರುಷೋತ್ತಮಮೂರ್ತಿ; ಇದು ಇಷ್ಟಾರ್ಥ ಗಳನ್ನು ಕೊಡುವಂತಹುದು.

**ಮೂರ್ತಿಸ್ತ್ವನಂತಚಕ್ರಾಢ್ಯೋ ಹ್ಯನಂತಪುರುಷೋತ್ತಮಃ ।**
**ಯಸ್ಯ ಮೂರ್ತೇರುತ್ತಮಾಂಗೇ ಶಿರಶ್ಚಕ್ರಂ ಪ್ರದೃಶ್ಯತೇ ।**

**ತತ್ತನ್ಮೂರ್ತಿಃ ಖಗೇಶಾನ ತನ್ನಾಮಾ ಪುರುಷೋತ್ತಮಃ ।**

ಅನಂತಚಕ್ರಗಳಿಂದ ಕೂಡಿದರೆ **ಅನಂತಪುರುಷೋತ್ತಮ**; ಯಾವ ಮೂರ್ತಿಯ ಶಿರಸ್ಸಿನಲ್ಲಿ ಚಕ್ರವು ತೋರುವುದೋ, ಎಲೈ ಗರುಡನೇ, ಆಯಾ ಹೆಸರುಳ್ಳ ಪುರುಷೋತ್ತಮನೆಂದು ತಿಳಿಯಬೇಕು.

ಈ ಮೂರ್ತಿಯು ೫ ವಿಧಗಳಲ್ಲಿ ಉಂಟಾಗುತ್ತದೆ: ದ್ವಾರಚಕ್ರಪುರುಷೋತ್ತಮ, ತ್ರೈಲೋಕ್ಯಮೋಹನ, ಅತಸೀಪುಷ್ಪಸಂಕಾಶ, ಪದ್ಮಿನೀಪತ್ರಸಂಕಾಶ, ಅನಂತ ಪುರುಷೋತ್ತಮ.

## ೨೦. ಅಧೋಕ್ಷಜಮೂರ್ತಿ ಲಕ್ಷಣಮ್ :

**ಅತಿಕೃಷ್ಣೋ ರಕ್ತರೇಖಾ ವೃತ್ತಗೇಹಸುಚಕ್ರವಾನ್ ।**
**ಕಿಂಚಿತ್ಕಪಿಲಸಂಯುಕ್ತಃ ಸ್ಥೂಲೋ ವಾ ಸೂಕ್ಷ್ಮ ಏವ ವಾ ॥**

**ಅಧೋಕ್ಷಜ ಇತಿ ಖ್ಯಾತಃ ಪೂಜಕಾಮಿಷ್ಟಭೋಗದಃ ।**

ಅತಿ ಕಪ್ಪು ಬಣ್ಣ, ರಕ್ತರೇಖೆ, ಉರುಟಾದ ಆಕಾರ, ಉತ್ತಮವಾದ ಚಕ್ರವಿದ್ದು, ಸ್ವಲ್ಪ ಕಪ್ಪು-ಕೆಂಪುಮಿಶ್ರವರ್ಣವಿದ್ದರೆ ಅದು **ಅಧೋಕ್ಷಜಮೂರ್ತಿ**, ಇದು ಸ್ಥೂಲ ಯಾ ಸೂಕ್ಷ್ಮ ಇರಬಹುದು; ಪೂಜಕರಿಗೆ ಇಷ್ಟಭಾಗ್ಯಗಳನ್ನೀಯುವುದು.

## ೨೧. ಅಚ್ಯುತಮೂರ್ತಿ ಲಕ್ಷಣಮ್ :

**ಚತುರ್ಭಿಶ್ಚಾಪ್ಯಚಕ್ರೈಶ್ಚ ವಾಮದಕ್ಷಿಣಪಾರ್ಶ್ವಗೈಃ ।**
**ಅತಿವೃತ್ತಮುಖಂ ಹ್ಯೇಕಂ ಕುಂಡಲದ್ವಯಶೋಭಿತಃ ॥**

**ಶಂಖ, ಚಕ್ರ, ಗದಾ, ಶಾರ್ಙ್ಗಯುತಂ ಕಪಿಲವರ್ಣಕಮ್ ।**
**ತದಚ್ಯುತಮಿತಿ ಜ್ಞೇಯಂ ದುರ್ಲಭಂ ಭಾಗ್ಯದಂ ನೃಣಾಮ್ ॥**

ಎಡಬಲಪಾರ್ಶ್ವಗಳಲ್ಲಿ ನಾಲ್ಕು ಅಥವಾ ಎರಡು ಚಕ್ರಗಳು, ಎರಡು ಒಂಟಿಗಳ ಚಿಹ್ನೆ, ಶಂಖ ಚಕ್ರ ಗದಾ ಶಾರ್ಙ್ಗವೆಂಬ ಬಿಲ್ಲಿನ ಚಿಹ್ನೆಗಳು, ಕಪಿಲವರ್ಣವಿರುವುದು- **ಅಚ್ಯುತಮೂರ್ತಿ**, ಮನುಷ್ಯರಿಗೆ ದುರ್ಲಭ, ಭಾಗ್ಯವನ್ನು ಕೊಡುವುದು.

ಇದು ೫ ರೀತಿಯಿಂದ ಉಂಟಾಗುತ್ತದೆ: ಸಮ್ಯಗ್ವರ್ಣ, ದಧಿವರ್ಣಾಭ ಕುಂಡಲದ್ವಯ ಸಂಯುಕ್ತ, ಬಹು ವರ್ಣ (ಚಿತ್ರ), ಹಿಮಾಂಶುವರ್ಣ ಮತ್ತು ಸೂಕ್ಷ್ಮರಂಧ್ರಗಳಿಂದ ಕೂಡಿರುತ್ತದೆ.

## ೨೨. ಜನಾರ್ದನಮೂರ್ತಿ ಲಕ್ಷಣಮ್ :

**ಪೂರ್ವಭಾಗೈಕವದನಃ ಪಶ್ಚಾದೇಕೇನ ಸಂಯುತಃ ।**
**ಜನಾರ್ದನಶ್ಚತುಶ್ಚಕ್ರಃ ಶ್ರೀಪ್ರದಃ ಶತ್ರುನಾಶನಃ ॥**

ಪೂರ್ವಭಾಗದಲ್ಲಿಯೂ ಹಿಂದಿನ ಭಾಗದಲ್ಲಿಯೂ ಒಂದೊಂದು ಮುಖವಿದ್ದು ನಾಲ್ಕು ಚಕ್ರವಿದ್ದರೆ ಅದು ಜನಾರ್ದನಮೂರ್ತಿಯು; ಆತನು ಸಂಪತ್ತನ್ನು ಕೊಡುವನು, ಶತ್ರುವನ್ನು ನಾಶಗೊಳಿಸುವನು.

ಅಂತರ್ಲಕ್ಷ್ಯಶ್ಚತುಶ್ಚಕ್ರಂ ವರ್ತುಲಂ ಚೋತ್ಪಲಪ್ರಭಮ್ ।
ಜನಾರ್ದನಂ ವಿಜಾನೀಯಾದ್ವನಮಾಲಾ ವಿಭೂಷಿತಮ್ ॥

ಒಳಗಡೆ ಕಾಣಲಿರುವ ನಾಲ್ಕು ಚಕ್ರಗಳಿದ್ದು, ಉರುಟಾಗಿದ್ದು, ಕೆನ್ನೈದಿಲೆಯಂತಹ ಕಾಂತಿಯಿದ್ದು, ವನಮಾಲೆಯ ಚಿಹ್ನೆ ಇದ್ದರೆ ಜನಾರ್ದನನೆಂದು ತಿಳಿಯಬೇಕು.

ದ್ವಾರಷಟ್ಕಸಮಾಯುಕ್ತಂ ಚಕ್ರದ್ವಾದಶಸಂಯುತಮ್ ।
ಅರ್ಚಿತಾಮಿಷ್ಟದಂ ಕೃಷ್ಣವರ್ಣಮಾಹುರ್ಜನಾರ್ದನಮ್ ॥

ಆರು ಮುಖಗಳಲ್ಲಿ ಹನ್ನೆರಡು ಚಕ್ರಗಳು, ಕಪ್ಪುಬಣ್ಣವಿದ್ದರೆ ಜನಾರ್ದನಮೂರ್ತಿಯು; ಇದನ್ನು ಪೂಜಿಸು ವವರಿಗೆ ಇಷ್ಟವನ್ನೀಯುವುದು.

ಈ ಮೂರ್ತಿಯು ೭ ರೀತಿಯಲ್ಲಿ ಉಂಟಾಗುವುದು: ಪುತ್ರಲಾಭ, ಶಿರಃಶ್ಯಾಮ, ಶ್ರೀಪ್ರದ, ಉತ್ಪಲ ಪ್ರಭ, ದ್ವಾದಶಚಕ್ರದಿಂದ ಕೂಡಿ ೬ ರಂಧ್ರಗಳಿರುವ, ನೀಲೋತ್ಪಲಸಮಾಕಾಶ ಶಂಖಚಕ್ರಾಂಕಿತ ಜನಾರ್ದನ.

## ೨೩. ಉಪೇಂದ್ರಮೂರ್ತಿ ಲಕ್ಷಣಮ್ :

ಉಪೇಂದ್ರೋ ಮಣಿವರ್ಣಾಭೋ ಹ್ರಸ್ವಚಕ್ರಾತಿಶೋಭನಃ ।
ಕೋಮಲೋ ವೃತ್ತಕಶ್ಚೈವ ಸ ತು ಪಾರ್ಶ್ವೇ ದ್ವಿಚಕ್ರವಾನ್ ॥

(ಇಂದ್ರನೀಲ)ಮಣಿಯಂತಹ ವರ್ಣ, ಗಿಡ್ಡಾದ ಚಕ್ರ, ನುಣ್ಣಗಾಗಿ ಉರುಟಾಗಿ ಪಾರ್ಶ್ವದಲ್ಲಿ ಎರಡು ಚಕ್ರವಿದ್ದರೆ ಅದು ಉಪೇಂದ್ರಮೂರ್ತಿ ಎಂದು ತಿಳಿಯಬೇಕು.

ಈ ಮೂರ್ತಿಯು ೨ ವಿಧದಲ್ಲಿದೆ: ಮಣಿವರ್ಣಾಭ ಮತ್ತು ಶ್ಯಾಮಲಮೂರ್ತಿಯು.

## ೨೪. ಹರಿಮೂರ್ತಿ ಲಕ್ಷಣಮ್ :

ಬೃಹದ್ವಾರಸಮಾಯುಕ್ತಃ ಶ್ಯಾಮವರ್ಣೋ ದ್ವಿಚಕ್ರಯುಕ್ ।
ವರ್ತುಲೋ ಮೃದುಲಶ್ಚೈವ ಪೂಜತಾಮಿಷ್ಟಸೌಖ್ಯದಃ ॥

ಸ್ಥೂಲಚಕ್ರೋ ಭವೇದ್ದೇವೋ ಹರಿಃ ಲೋಹಿತವರ್ಣಕಃ ।

ದೊಡ್ಡ ವದನ, ಎರಡು ಚಕ್ರ, ಕಪ್ಪುಬಣ್ಣ, ಉರುಟಾಗಿಯೂ ಮೃದುವಾಗಿಯೂ ಇದ್ದರೆ ಹರಿ ಮೂರ್ತಿಯು; ಇದನ್ನು ಪೂಜಿಸುವವರಿಗೆ ಇಷ್ಟ ಮತ್ತು ಸೌಖ್ಯವನ್ನೀಯುವನು. ದಪ್ಪವಾದ, ಕೆಂಪುಬಣ್ಣ ವಿರುವ ಶಾಲಗ್ರಾಮವು ಶ್ರೀಹರಿಮೂರ್ತಿಯ ಶಾಲಗ್ರಾಮವು.

೨ ವಿಧಗಳಲ್ಲಿ ಉಂಟಾಗುವುದು: ಅಲ್ಪದ್ವಾರಹರಿ ಮತ್ತು ನೀಲವರ್ಣಹರಿ.

# ಹಯಗ್ರೀವಮೂರ್ತಿ ಲಕ್ಷಣಮ್ [24]

## ೧. ಹಯಗ್ರೀವಮೂರ್ತಿ ಲಕ್ಷಣಮ್ :

ಹಯಗ್ರೀವೋಽಪಿ ಭಗವಾನ್ ರಕ್ತಪೀತವಿಮಿಶ್ರಿತಃ ।
ಅಂಕುಶಾಕಾರರೂಪಸ್ತು ಚಕ್ರದ್ವಯಸಮನ್ವಿತಃ ॥

ಪದ್ಮಾಕೃತಿಸ್ತಥಾ ಪಾರ್ಶ್ವೇ ಕುಂಡಲಾಕೃತಿರೇವ ವಾ ।
ಭಾಗ್ಯಭೋಜ್ಯಾನ್ನದೋ ನೃಣಾಂ ಮೋಕ್ಷದೋ ವಿನತಾಸುತ ॥

ಕೆಂಪು-ಹಸಿರು ಮಿಶ್ರಬಣ್ಣ, ಅಂಕುಶದಂತಹ ಆಕಾರ, ಎರಡು ಚಕ್ರವಿದ್ದರೆ, ಪಾರ್ಶ್ವದಲ್ಲಿ ತಾವರೆಯ ಚಿಹ್ನೆ ಅಥವಾ ಒಂಟಿಯ ಚಿಹ್ನೆ ಇದ್ದರೆ ಹಯಗ್ರೀವಮೂರ್ತಿಯು; ಈತ ಭಾಗ್ಯವನ್ನೂ ಉತ್ತಮವಾದ ಅನ್ನವನ್ನೂ ಕೊನೆಗೆ ಮೋಕ್ಷವನ್ನೂ ಕೊಡುವನು.

ವಾಮಚಕ್ರೋ ಬೃಹದ್ವಾರಶ್ಚೋನ್ನತೋ ನಿಮ್ನಮಸ್ತಕಃ ।
ಸಕಾಪಿಲಃ ಕೃಷ್ಣವರ್ಣೋ ಹಯಗ್ರೀವಃ ಸುಖಪ್ರದಃ ॥

ಎಡದಲ್ಲಿ ಚಕ್ರ, ದೊಡ್ಡವದನ, ಆಳವಲ್ಲದ ಶಿರಸ್ಸು, ಎತ್ತರವಾಗಿದ್ದು, ಕಪ್ಪು-ಕೆಂಪುಮಿಶ್ರವರ್ಣ ಮತ್ತು ಕಪ್ಪುಬಣ್ಣವಿದ್ದರೆ ಹಯಗ್ರೀವಮೂರ್ತಿಯು; ಇದನ್ನು ಪೂಜಿಸುವವರಿಗೆ ಸುಖವನ್ನೀಯುವುದು.

ಕಾಪಿಲೋ ವರ್ತುಲೋಽತ್ಯಂತಸ್ಪಷ್ಟಚಕ್ರಸಮನ್ವಿತಃ ।
ಪಂಚಬಿಂದುಸಮಾಯುಕ್ತೋ ನೃಣಾಂ ವಿದ್ಯಾಧನಪ್ರದಃ ॥

ಕಪಿಲವರ್ಣ, ಚೆನ್ನಾಗಿ ಸ್ಪಷ್ಟವಾದ ಚಕ್ರ, ಐದು ಬಿಂದುಗಳಿದ್ದರೆ ಹಯಗ್ರೀವಮೂರ್ತಿಯು; ಪೂಜಕರಿಗೆ ವಿದ್ಯೆಯನ್ನೂ ಸಂಪತ್ತನ್ನೂ ಕೊಡುವುದು

ಅಶ್ವಾಕೃತಿರ್ಮುಖೇ ಮುದ್ರಾ ಸಾಕ್ಷಮಾಲಾ ಸಪುಸ್ತಕಮ್ ।
ಪಾದಾಂಕಿತಾ ಭವೇನ್ಮುದ್ರಾ ಹಯಗ್ರೀವಃ ಪ್ರಕೀರ್ತಿತಃ ॥

ಮುಖಭಾಗದಲ್ಲಿ ಕುದುರೆಮುಖದ ಆಕಾರ, ಜಪಸರದ ಮತ್ತು ಪುಸ್ತಕದ ಚಿಹ್ನೆ, ಕುದುರೆಯ ಗೊರಸಿನ ಚಿಹ್ನೆಗಳಿದ್ದರೆ ಹಯಗ್ರೀವಮೂರ್ತಿಯು.

ಹಯಗ್ರೀವೋಽಶಾಂಕಾರೋ ದ್ವಾರಚಕ್ರಸಮನ್ವಿತಃ ।
ಕೃಷ್ಣವರ್ಣೋ ದ್ವಿರೇಖಶ್ಚ ಹಯ ಸಾರಸ್ವತಪ್ರದಃ ॥

ಅಂಕುಶದಂತಹ ಆಕಾರ, ದ್ವಾರದಲ್ಲಿ ಚಕ್ರ, ಕಪ್ಪುಬಣ್ಣ, ಎರಡು ರೇಖೆಗಳಿದ್ದರೆ ಹಯಗ್ರೀವಮೂರ್ತಿ; ಪೂಜಿಸುವವರಿಗೆ ಕುದುರೆಗಳನ್ನೂ ವಿದ್ಯೆಯನ್ನೂ ಕೊಡುವುದು.

## ೧. ಯಜ್ಞಮೂರ್ತಿಮೂರ್ತಿ ಲಕ್ಷಣಮ್ :

ಯಜ್ಞಮೂರ್ತಿಸ್ತು ಭಗವಾನ್ ರಕ್ತಪೀತವಿಮಿಶ್ರಿತಃ ।
ದ್ವಾರಸ್ಯ ವಾಮತಶ್ಚಕ್ರಂ ಸ್ರುಕ್‌ಸ್ರುವೌ ದಕ್ಷಿಣೇಽಪಿ ಚ ॥

ಚಕ್ರದ್ವಯಸಮಾಯುಕ್ತೋ ಹ್ಯರ್ಚತಾಮಿಷ್ಟಸಿದ್ಧಿದಃ ।
ಯಜ್ಞಮೂರ್ತಿಸ್ತು ಭಗವಾನ್ ಸರ್ವಕಾಮಫಲಪ್ರದಃ ।

ಕೆಂಪು ಅರಸಿನ ಮಿಶ್ರಬಣ್ಣ, ದ್ವಾರದ ಎಡದಲ್ಲಿ ಚಕ್ರ, ದಕ್ಷಿಣದಲ್ಲಿ ಸ್ರುಕ್‌ಸ್ರುವ ಎನ್ನುವ ಯಜ್ಞದ ಸೌಟುಗಳ ಚಿಹ್ನೆಗಳಿದ್ದರೆ ಯಜ್ಞಮೂರ್ತಿಯು; ಪೂಜಿಸುವವರಿಗೆ ಇಷ್ಟಾರ್ಥವನ್ನೀಯುವನು.

## ೨. ದತ್ತಾತ್ರೇಯಮೂರ್ತಿ ಲಕ್ಷಣಮ್ :

ಪೀತಾಸಿತಾರುಣಭಸ್ತ ಹ್ರಸ್ವಪೃಷ್ಠೋನ್ನತೋ ಭವೇತ್ ।
ಅಕ್ಷಮಾಲಾಕೃತಿರ್ಮಧ್ಯೇ ದತ್ತಾತ್ರೇಯಃ ಪ್ರಕೀರ್ತಿತಃ ॥

ಅರಸಿನ-ಕಪ್ಪು-ಕೆಂಪು ಬಣ್ಣಗಳು, ಬೆನ್ನು ಗಿಡ್ಡವಾಗಿ ಎತ್ತರವಾಗಿದ್ದು, ಮಧ್ಯದಲ್ಲಿ ಅಕ್ಷಮಾಲೆಯ ಚಿಹ್ನೆ ಇದ್ದರೆ ದತ್ತಾತ್ರೇಯಮೂರ್ತಿಯು ಎನಿಸುವುದು.

## ೪. ಶಿಂಶುಮಾರಮೂರ್ತಿ ಲಕ್ಷಣಮ್ :

ಶಿಂಶುಮಾರೋ ದೀರ್ಘಕಾಯೋ ವಿಶಾಲಶ್ಚಾತಿಗಹ್ವರಃ ।
ದ್ವಾರಸ್ಯ ವಾಮಗೇ ಚಕ್ರೇ ದಕ್ಷಿಣೇ ಗೃಹಸನ್ನಿಭಃ ॥
ಉನ್ನತಃ ಪುಚ್ಛಭಾಗೇ ತು ಚಕ್ರೇಣೈಕೇನ ಸಂಯುತಃ ।
ಸರ್ವಾಧಾರಃ ಸವಿಜ್ಞೇಯಸ್ಸರ್ವಸಿದ್ಧಿಪ್ರದೋ ನೃಣಾಮ್ ॥

ಉದ್ದವಾದ ಆಕಾರ, ಒಳಗಿನ ತೂತು, ವಿಶಾಲದ್ವಾರದ ಎಡ ಭಾಗದಲ್ಲಿ ಎರಡು ಚಕ್ರಗಳು, ದಕ್ಷಿಣದಲ್ಲಿ ಮನೆಯ ಚಿಹ್ನೆ, ಎತ್ತರವಾಗಿದ್ದು, ಹಿಂಬದಿ ಪುಚ್ಛಭಾಗದಲ್ಲಿ ಚಕ್ರವು ಇದ್ದರೆ ಸರ್ವಕ್ಕೂ ಆಧಾರನಾದ ಶಿಂಶುಮಾರನು. ಈತ ಮನುಷ್ಯರಿಗೆ ಸರ್ವಸಿದ್ಧಿಯನ್ನು ಕೊಡುವನು.

## ೫. ಮುಕುಂದಮೂರ್ತಿ ಲಕ್ಷಣಮ್ :

ಷಣ್ಮುಖಂ ಚ ಮುಕುಂದಸ್ಯ ಚಕ್ರದ್ವಾದಶಕಂ ಸ್ಮೃತಮ್ ।
ಕೃಷ್ಣಂ ತು ಭಾಗ್ಯದಂ ಪ್ರೋಕ್ತಂ ಶುಕ್ಲಂ ಚೇನ್ಮೋಕ್ಷದಾಯಕಮ್ ॥

ಆರು ಮುಖಗಳು, ಹನ್ನೆರಡು ಚಕ್ರಗಳು, ಕಪ್ಪುಬಣ್ಣವಿದ್ದರೆ ಮುಕುಂದಮೂರ್ತಿಯು; ಇದನ್ನು ಪೂಜಿಸುವವರಿಗೆ ಭಾಗ್ಯವನ್ನೀಯುವುದು, ಮೂರ್ತಿಯು ಬಿಳಿಬಣ್ಣವಿದ್ದರೆ ಪೂಜಕನಿಗೆ ಮೋಕ್ಷವನ್ನೀಯುವುದು.

ಷಣ್ಮುಖೇನ ಮುಂದಾಖ್ಯಾ ಸದಾಮುಕ್ತಿ ಪ್ರದಾಯಕಃ ॥

## ೬. ಹಂಸಮೂರ್ತಿ ಲಕ್ಷಣಮ್ :

ಹಂಸಸ್ತು ಧನುಷಾಕಾರೋ ನೀಲಶ್ವೇತಪ್ರಭಸ್ತಥಾ ।
ಚಕ್ರದ್ವಯಸಮಾಯುಕ್ತಃ ಕೇವಲಂ ಮೋಕ್ಷದೋ ಭವೇತ್॥ ೨೫೪ ॥

ಬಿಲ್ಲಿನ ಆಕಾರ, ನೀಲ ಮತ್ತು ಬಿಳಿ ಬಣ್ಣ, ಎರಡು ಚಕ್ರಗಳಿದ್ದರೆ ಹಂಸಮೂರ್ತಿಯು; ಇದು ಪೂಜಕರಿಗೆ ಮೋಕ್ಷವನ್ನೀಯುವುದು. (ಇದನ್ನು ಕೇವಲ ಮೋಕ್ಷಾಪೇಕ್ಷಿಗಳು ಪೂಜಿಸತಕ್ಕದ್ದು.)

## ೭. ಪರಮಹಂಸಮೂರ್ತಿ ಲಕ್ಷಣಮ್ :

ವಕ್ಷ್ಯೇಽಹಂ ತೇ ಖಗೇಶಾನ ಶಿಖಂಡಿಗಲಸನ್ನಿಭಃ ।
ಸ್ನಿಗ್ಧಾಯತಶ್ಚ ವೃತ್ತಶ್ಚ ವರ್ತುಲದ್ವಾರಸಂಯುತಃ ॥
ಬಿಲಮಧ್ಯೇ ತಥಾ ಚಕ್ರದ್ವಯಂ ಚಾತ್ಯಂತಶೋಭನಮ್ ।
ವರ್ತುಲಾಕೃತಿಮಧ್ಯಾಗೇ ದೃಶ್ಯತೇ ಪದ್ಮಸನ್ನಿಭಮ್ ॥
ಮೂರ್ತಿಃ ಪರಮಹಂಸಾಖ್ಯಾ ಚತುರ್ವರ್ಗಫಲಪ್ರದಾ ।

ಎಲೈ ಗರುಡನೇ, ಹೇಳುವೆನು ಕೇಳು– ನವಿಲಿನ ಕುತ್ತಿಗೆಯಂತಹ ಬಣ್ಣ, ನುಣ್ಣಗೆ ಮತ್ತು ವಿಶಾಲವಾಗಿ ಉರುಟಾಗಿದ್ದು– ಉರುಟಾದ ದ್ವಾರದೊಳಗೆ ಎರಡು ಚಕ್ರಗಳು, ಬಹು ಸುಂದರವಾಗಿದ್ದರೆ, ಉರುಟಾದ

ಭಾಗದಲ್ಲಿ ಕಮಲದ ಚಿಹ್ನೆ ಇರುವುದು ಪರಮಹಂಸಮೂರ್ತಿಯು. ಇದನ್ನು ಪೂಜಿಸಿದರೆ ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡತಕ್ಕುದು.

## ೮. ವೈಕುಂಠಮೂರ್ತಿ ಲಕ್ಷಣಮ್ :

ವೈಕುಂಠೋ ಪಂಚವರ್ಣಾಭೋ ವಾಮಪಾರ್ಶ್ವೈಕ ಚಕ್ರಕಃ ॥
ದ್ವಾರೋಪರಿ ತಥಾ ರೇಖಾ ಪದ್ಮಾಕಾರಃ ಸುಶೋಭನಃ ।
ವೈಕುಂಠದೋಽರ್ಚತಾಂ ಪ್ರೋಕ್ತೋ ವೈಕುಂಠೋ ವಿನತಾಸುತ ॥

ಎಲೈ ಗರುಡನೇ, ನೀಲಮಣಿಯಂತಹ ಬಣ್ಣ, ಎಡ ಪಾರ್ಶ್ವದಲ್ಲಿ ಒಂದು ಚಕ್ರ, ದ್ವಾರದ ಮೇಲ್ಭಾಗದಲ್ಲಿ ಅಂದವಾದ ಕಮಲದಂತಹ ಚಿಹ್ನೆ ಇದ್ದರೆ ವೈಕುಂಠಮೂರ್ತಿಯು; ಇದನ್ನು ಪೂಜಿಸಿದವನಿಗೆ ವೈಕುಂಠಪ್ರಾಪ್ತಿಯಾಗುವುದು.

## ೯. ಪುಂಡರೀಕಾಕ್ಷಮೂರ್ತಿ ಲಕ್ಷಣಮ್ :

ಏಕಚಕ್ರಯುತೋಪೇತಂ ಶುಕ್ಲವರ್ಣ ಸಮನ್ವಿತಂ ।
ಪುಂಡರೀಕಾಕ್ಷಮೂರ್ತಿಃ ಸ್ಯಾತ್ಸರ್ವಲೋಕೈಕ ಶಂಕರಃ ॥

## ೧೦. ಲಕ್ಷ್ಮೀಪತಿಮೂರ್ತಿ ಲಕ್ಷಣಮ್ :

ಮುಖೇ ವಾ ಪಾರ್ಶ್ವತೋ ವಾಽಪಿ ಮಯೂರಗಲಸನ್ನಿಭಃ ।
ಕೃಷ್ಣವರ್ಣಃ ಸೂಕ್ಷ್ಮಚಕ್ರಃ ಪೃಥುಲಾಸ್ಯಃ ಸ್ರಗನ್ವಿತಃ ॥
ಲಕ್ಷ್ಮೀಪತಿರಿತಿಖ್ಯಾತೋ ಲಕ್ಷ್ಮೀಸಂಪತ್ತಿದಾಯಕಃ ।

ಮುಖದಲ್ಲಿಯೂ ಪಾರ್ಶ್ವದಲ್ಲಿಯೂ ನವಿಲಿನ ಕುತ್ತಿಗೆಯ ಬಣ್ಣ, ಉಳಿದ ಭಾಗದಲ್ಲಿ ಕಪ್ಪುಬಣ್ಣ, ಸೂಕ್ಷ್ಮವಾದ ಚಕ್ರ, ದೊಡ್ಡ ವದನ, ವನಮಾಲಾಚಿಹ್ನೆ ಇದ್ದರೆ ಲಕ್ಷ್ಮೀಪತಿಮೂರ್ತಿಯು; ಇದನ್ನು ಪೂಜಿಸಿದರೆ ಸಂಪತ್ಪ್ರದವು.

## ೧೧. ದೇವದೇವಮೂರ್ತಿ ಲಕ್ಷಣಮ್ :

ಆಯತಃ ಸೂಕ್ಷ್ಮಚಕ್ರಸ್ತು ಪೀತರೇಖಾಸ್ತು ಸೂಕ್ಷ್ಮಕಾಃ ।
ದ್ವಾರೇಷು ದಿಕ್ಷು ಸರ್ವಾಸು ಪ್ರದೃಶ್ಯಂತೇ ನಿರಂತರಮ್ ॥
ಸ ದೇವದೇವೋ ವಿಜ್ಞೇಯಃ ಪೂಜತಾಮಿಷ್ಟಸಿದ್ಧಿದಃ ।

ಉದ್ದವಾದ ಆಕಾರ, ಚಿಕ್ಕಚಕ್ರವಿದ್ದು, ಚಿಕ್ಕದಾದ ಅರಸಿನ ಬಣ್ಣದ ರೇಖೆಗಳು ದ್ವಾರಗಳಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಸಾಲಾಗಿ ತೋರಿದರೆ ದೇವದೇವನು; ಈತ ಪೂಜಕನಿಗೆ ಇಷ್ಟವನ್ನೀಯುವನು.

## ೧೨. ವಟಪತ್ರಶಾಯಿಮೂರ್ತಿ ಲಕ್ಷಣಮ್ :

ವಟಪತ್ರಶಾಯೀ ಭಗವಾನ್ ವರ್ತುಲಶ್ಚ ದ್ವಿಚಕ್ರವಾನ್ ।
ಕ್ಷೀರಬುದ್ಬುದವತ್ತಾರ್ಕ್ಷ್ಯ ನೀಲಶ್ವೇತಾವುಭೌ ತಥಾ ॥

ಉರುಟಾಗಿದ್ದು, ಎರಡು ಚಕ್ರಗಳಿದ್ದು, ಹಾಲಿನ ಗುಳ್ಳೆಯಂತಹ ಆಕಾರ, ನೀಲ ಮತ್ತು ಬಿಳಿ ಬಣ್ಣಗಳಿದ್ದರೆ ವಟಪತ್ರಶಾಯಿ.

## ೧೩. ವಿಶ್ವರೂಪಮೂರ್ತಿ ಲಕ್ಷಣಮ್ :

ವಿಶ್ವರೂಪೋಽಪಿ ಭಗವಾನ್ ದ್ವಿವಿಧಃ ಪರಿಕೀರ್ತಿತಃ ।
ಪಂಚಚಕ್ರಃ ಶ್ಯಾಮವರ್ಣೋ ದಶಚಕ್ರಸಮನ್ವಿತಃ ।
ವಿಶ್ವರೂಪೋ ಮಹಾತೇಜಾಃ ಪುತ್ರಪೌತ್ರಧನಪ್ರದಃ ॥

ವಿಶ್ವರೂಪಮೂರ್ತಿಯು ಎರಡು ಪ್ರಕಾರದಿಂದಿದೆ. ಐದು ಚಕ್ರವಿದ್ದುದು ಕಪ್ಪುಬಣ್ಣದ್ದು, ಹಾಗೆಯೇ ಹತ್ತು ಚಕ್ರವಿದ್ದುದು – ಈ ಎರಡು ರೀತಿಯ ವಿಶ್ವರೂಪಮೂರ್ತಿಗಳೂ ಪುತ್ರಪೌತ್ರಸಂಪತ್ತುಗಳನ್ನು ಕೊಡುವವು.

## ೧೪. ವಿಶ್ವಂಭರಮೂರ್ತಿ ಲಕ್ಷಣಮ್ :

ಚಕ್ರಾಣಾಂ ಚಾಪಿ ವಿಂಶಾದ್ಯಾ ಯುಕ್ತೋ ವಿಶ್ವಂ ವಿಶ್ವಂಭರಃ ಸ್ಮೃತಃ ।
ಶ್ಯಾಮೋ ದ್ವಾದಶರಂಧ್ರಸ್ತು ಚತುರ್ವಿಂಶತಿ ಚಕ್ರವಾನ್ ।
ವಿಶ್ವಂಭರ ಇತಿ ಖ್ಯಾತಃ ಸರ್ವ ಸೌಭಾಗ್ಯದಾಯಕಃ ॥

## ೧೫. ಗರುಡಧ್ವಜಮೂರ್ತಿ ಲಕ್ಷಣಮ್ :

ಸ್ವರ್ಣಶೃಂಗಯುತಃ ಶ್ಯಾಮೋ ವರ್ತುಲಃ ಸ್ನಿಗ್ಧಕೇಸರಃ ।
ಚಕ್ರಮಧ್ಯಗತಃ ಕೃಷ್ಣಃ ರೇಖಾಬಿಂದುವಿಭೂಷಿತಃ ।
ಲಕ್ಷ್ಮೀಕರೋ ವೈನತೇಯ ಗರುಡಧ್ವಜಸಂಜ್ಞಿತಃ ॥

ಚಿನ್ನದಂತಹ ಶೃಂಗ ಚಿಹ್ನೆ, ಕಪ್ಪುಬಣ್ಣ, ಉರುಟಾಗಿರುವುದು, ಅಂದವಾದ ಕೇಸರಗಳು, ಮಧ್ಯದಲ್ಲಿ ಚಕ್ರ, ಕಪ್ಪಾದ ರೇಖೆ ಮತ್ತು ಬಿಂದುಗಳಿದ್ದರೆ ಗರುಡಧ್ವಜನು; ಪೂಜಕನಿಗೆ ಸಂಪತ್ತನ್ನೀಯುವನು.

## ೧೬. ಪೀತಾಂಬರಧರಮೂರ್ತಿ ಲಕ್ಷಣಮ್ :

ಪೀತಾಂಬರಶ್ಚ ದ್ವಿವಿಧೋ ದ್ವಿಚಕ್ರೋಽತ್ರ ಪ್ರಕೀರ್ತಿತಃ ।
ಸ್ನಿಗ್ಧೋ ಗೋರೋಚನಾಕಾರೋ ವರ್ತುಲೋಭಯಚಕ್ರಯುಕ್ ॥

ದಿವ್ಯಪೀತಾಂಬರಧರಃ ಪೂಜಿತಃ ಶುಭದೋ ನೃಣಾಮ್ ।

ಪೀತಾಂಬರನು ಎರಡು ರೀತಿಯಲ್ಲಿರುವನು– ಎರಡು ಚಕ್ರವಿದ್ದು, ನುಣ್ಣಗಿದ್ದು, ಗೋರೋಚನದಂತೆ ಅರಸಿನ ಬಣ್ಣ, ಉರುಟಾಗಿದ್ದು, ಎರಡು ಚಕ್ರವಿರುವುದು ಪೀತಾಂಬರಧರಮೂರ್ತಿ; ಇದನ್ನು ಪೂಜಿಸಿದರೆ ಶುಭವನ್ನೀಯುವುದು.

ದ್ವಾರದೇಶೇ ಲಸಚ್ಚಕ್ರೋ ಬಹುವರ್ಣ ಸಮನ್ವಿತಃ ।
ಪೀತಾಂಬರಧರೋ ದೇವಃ ಸೌಖ್ಯೈಕ ಫಲದಾಯಕಃ ॥

ದ್ವಾರದೇಶದಲ್ಲಿ ಚಕ್ರದಿಂದ ಶೋಭಿಸುತ್ತ ಅನೇಕ ಬಣ್ಣವಿದ್ದರೆ ಅದು ಪೀತಾಂಬರಧರಮೂರ್ತಿ. ಇದನ್ನು ಪೂಜಿಸಿದವರಿಗೆ ಸೌಖ್ಯವನ್ನೀಯುವುದು, ಸೌಭಾಗ್ಯವನ್ನೀಯುವುದು. ಇದು ಕೂಡಾ ಎರಡು ಚಕ್ರವುಳ್ಳದ್ದೆಂದು ತಿಳಿಯಬೇಕು.

## ೧೭. ಸತ್ಯವೀರಶ್ರವಮೂರ್ತಿ ಲಕ್ಷಣಮ್ :

ಸುವರ್ತುಲೋ ಹ್ರಸ್ವಚಕ್ರಃ ಸರ್ವಾಂಗೇ ಹೇಮಬಿಂದುಕಃ ।
ಸತ್ಯವೀರಶ್ರವಾಃ ಪ್ರೋಕ್ತೋ ಬಲಯುಕ್ ಭಾಗ್ಯವರ್ಧನಃ ॥

ಉರುಟಾಗಿದ್ದು ಗಿಡ್ಡಾದ ಚಕ್ರ, ಸರ್ವಾಂಗದಲ್ಲಿ ಚಿನ್ನದ ಬಿಂದುಗಳು, ತೂತುಗಳು ಇದ್ದರೆ ಸತ್ಯವೀರಶ್ರವ ಎಂಬ ಮೂರ್ತಿ; ಈತನು ಭಾಗ್ಯವನ್ನು ಕರುಣಿಸುತ್ತಾನೆ.

## ೧೮. ಅಮೃತಾಹರಣಮೂರ್ತಿ ಲಕ್ಷಣಮ್ :

ಅಮೃತಾಹರಣಃ ಶ್ರೀದೋ ನೀಲೋತ್ಪಲಸಮಪ್ರಭಃ ।
ವರ್ತುಲೋ ಹ್ರಸ್ವವದನೋ ಹ್ರಸ್ವಚಕ್ರೋಽತಿ ಕೋಮಲಃ ।
ಅರ್ಚಿತಾಂ ಚ ದದಾತ್ಯೇಷಃ ಪುತ್ರಪೌತ್ರಧನಪ್ರದಃ ॥

ನೀಲೋತ್ಪಲ(ಕನ್ನೈದಿಲೆ)ದಂತೆ ಕಾಂತಿಯುಕ್ತವಾದ, ಉರುಟಾದ ಆಕಾರ, ಗಿಡ್ಡವಾದ ವದನ, ಗಿಡ್ಡವಾದ ಚಕ್ರ, ಮೃದುವಾದುದು ಅಮೃತಾಹರಣಮೂರ್ತಿ; ಇದನ್ನು ಪೂಜಿಸುವವರಿಗೆ ಪುತ್ರ, ಧನ, ಸಂಪತ್ತುಗಳನ್ನು ಕರುಣಿಸುವನು.

ಪೂರ್ವಭಾಗೇ ತ್ರಿವದನಃ ಪಶ್ಚಾದೇಕೇ ನ ಸಂಯುತಃ ।
ಅಷ್ಟಚಕ್ರೇಣ ಸಂಯುಕ್ತಶ್ಚಕ್ರಪಾಣಿರಿತೀರಿತಃ ॥

ಪೂರ್ವಭಾಗದಲ್ಲಿ ಮೂರು ವದನಗಳು, ಹಿಂಬದಿಯಲ್ಲಿ ಒಂದು ವದನವಿದ್ದು ಎಂಟು ಚಕ್ರಗಳಿದ್ದರೆ ಚಕ್ರಪಾಣಿ ಎಂದೆನಿಸಿಕೊಳ್ಳುವುದು.

## ೧೯. ಪುಂಡರೀಕಮೂರ್ತಿ ಲಕ್ಷಣಮ್ :

ಪಾರ್ಶ್ವೇ ವಾ ಮೂರ್ಧ್ನಿ ವಾ ಪೃಷ್ಠೇ ಚಕ್ರತ್ರಯಯುತಃ ಶುಭಃ ।
ಪುಂಡರೀಕಾಖ್ಯಮೂರ್ತಿಃ ಸ್ಯಾತ್ ಸರ್ವಭಾಗ್ಯ ಪ್ರದಾಯಕಃ ॥

ಪಾರ್ಶ್ವದಲ್ಲಿ, ಶಿರಸ್ಸಿನಲ್ಲಿ, ಬೆನ್ನಿನಲ್ಲಿ ಸುಂದರವಾದ ಮೂರು ಚಕ್ರಗಳಿದ್ದರೆ ಪುಂಡರೀಕಮೂರ್ತಿಯು; ಇದನ್ನು ಪೂಜಿಸಿದರೆ ಸರ್ವಭಾಗ್ಯಪ್ರಾಪ್ತಿಯಾಗುವುದು.

ಅಭ್ಯಂತರೇ ವೃತ್ತಚಕ್ರೋ ಬಹುಲಾಸ್ಯ ಸಮನ್ವಿತಃ ।
ಪುಂಡರೀಕ ಇತಿಖ್ಯಾತಃ ಪೂಜತಾಂ ಮೋಕ್ಷದಾಯಕಃ ॥

ಒಳಗಿನಿಂದ ಉರುಟಾದ ಚಕ್ರವಿದ್ದು, ಅನೇಕ ಮುಖಗಳಿದ್ದರೆ ಪುಂಡರೀಕಮೂರ್ತಿ; ಇದನ್ನು ಪೂಜಿಸಿದವರಿಗೆ ಮೋಕ್ಷ ದೊರಕುವುದು.

## ೨೦. ಪಾರಿಜಾತಹರಮೂರ್ತಿ ಲಕ್ಷಣಮ್ :

ಪರ್ಯಂತೇ ತು ದ್ವಿಚಕ್ರಾಸ್ಯಃ ಪಾರಿಜಾತಹರಃ ಸ್ಮೃತಃ ।
ಬ್ರಹ್ಮಚರ್ಯವ್ರತಸ್ಥೇನ ಪೂಜನೀಯಃ ಪ್ರಯತ್ನತಃ ॥

ಬದಿಯಲ್ಲಿ ಎರಡು ಚಕ್ರಗಳುಳ್ಳ ವದನವಿದ್ದುದು ಪಾರಿಜಾತಹರಮೂರ್ತಿ; ಇದನ್ನು ಬ್ರಹ್ಮಚಾರಿ ಹಂತದಿಂದಲೇ ಪ್ರಯತ್ನದಿಂದ ಪೂಜಿಸಬೇಕು.

## ೨೧. ಸುದರ್ಶನಮೂರ್ತಿ ಲಕ್ಷಣಮ್ :

ಸುದರ್ಶನೋ ದ್ವಿಧಾ ಜ್ಞೇಯೋಲಕ್ಷಣಾಂತರಯೋಗತಃ ।
ಏಕಚಕ್ರಃ ಶಿರೋದೇಶೇ ಕೃಷ್ಣವರ್ಣಸಮನ್ವಿತಃ ॥

ಯತಿಭಿಃ ಪೂಜನೀಯಸ್ಸ ಏಕಚಕ್ರಸ್ಸುರಕ್ತಕಃ ।
ಸರ್ವಪಾಪಪ್ರಶಮನೋ ನೃಣಾಂ ನಿಃಶ್ರೇಯಸಪ್ರದಃ ॥

ಸುದರ್ಶನಮೂರ್ತಿಯು ಬೇರೆಬೇರೆ ಲಕ್ಷಣಗಳದ್ದಿರುವುದರಿಂದ ಎರಡು ರೀತಿಯಲ್ಲಿದೆ- ಶಿರಸ್ಸಿನಲ್ಲಿ ಒಂದು ಚಕ್ರ ಕಪ್ಪುಬಣ್ಣವಿದ್ದರೆ ಸುದರ್ಶನಮೂರ್ತಿ; ಸರ್ವಪಾಪವನ್ನು ಕಳೆಯುವವನು. ಎರಡನೆಯ ಸುದರ್ಶನ ಮೂರ್ತಿಯು ಪದ್ಮ(ಕಮಲ)ಪುಷ್ಪದ ಆಕಾರ, ದೊಡ್ಡಚಕ್ರ, ಆಳವಾದ ಹೊಕ್ಕುಳು, ಒಂದೇ ಚಕ್ರ, ಕೆಂಪುಬಣ್ಣ ಹೊಂದಿರುತ್ತದೆ. ಇದು ಯತಿಗಳ ಪೂಜೆಗೆ ಯೋಗ್ಯವಾದುದು.

ಯತಿ ಸುದರ್ಶನ-

ಪದ್ಮಾಕಾರೋ ಬೃಹದ್ವಕ್ತ್ರೋ ನಿಮ್ನನಾಭಿಃ ಸುದರ್ಶನಃ
ಯತಿಭಿಃ ಸೇವನೀಯಷ್ಷ ಏಕಚಕ್ರಃ ಸುರಾಂತಕಃ ॥

ನೃಸಿಂಹ ಸುದರ್ಶನ-

ಕಪಿಲೋ ನರಸಿಂಹಷ್ಷ ಪೃಷ್ಠೇ ವಾ ಸ್ಥೂಲಚಕ್ರಿಣಮ್
ವನಮಾಲಾಸು ನಿಷ್ಪನ್ನಂ ಪೃಥುಚಕ್ರಂ ಸುದರ್ಶನಮ್ ।
ಬ್ರಹ್ಮಚರ್ಯೇಣ ಸಂಪೂಜ್ಯಂ ಭುಕ್ತಿಮುಕ್ತಿ ಫಲಪ್ರದಮ್ ॥

ಮಹಾವಿಷ್ಣು ಸುದರ್ಶನ-

ಸುದರ್ಶನಂ ಮಹಾವಿಷ್ಣುಂ ರೇಖಾಚಕ್ರ ಮಹಾದ್ಯುತಿಮ್ ।
ಕೃಷ್ಣವರ್ಣಾಮಿತಿ ಖ್ಯಾತಂ ಅಪಮೃತ್ಯುಹರಂ ಶುಭಮ್ ॥

ಅಭಯ ಸುದರ್ಶನ-

ವೃತ್ತಾಕಾರಂ ತು ತದ್ದೀರ್ಘಂ ದ್ವಾರಿ ಪೃಷ್ಠೇ ದ್ವಿಚಕ್ರತಮ್ ।
ಸುದರ್ಶನಂ ವಿಜಾನಂತಿ ಬಿಂದುಯುಕ್ತಂ ವಿಚಕ್ಷಣೈಃ ॥

ಮಹೋಗ್ರ ಸುದರ್ಶನ-

ಚಕ್ರದ್ವಯಂ ನಾಸ್ತಿ ಬಿಲಂ ಊರ್ಧ್ವವಕ್ತ್ರಂ ತು ಸುದರ್ಶನಮ್ ।
ದಕ್ಷಿಣೋದ್ಧಾ್ಯಜಗದಾಚಕ್ರೇ ಕೋಷ್ಠೇ ಪರ್ವತಲಾಂಛಿತಮ್ ॥

ಗೋವಿಂದಃ ಪುಂಡರೀಕಾಕ್ಷಂ ಕೃಷ್ಣಂ ವಿಷ್ಣುಂ ಮಹಾದ್ಯುತಿಮ್ ।
ದಕ್ಷಿಣೇ ಶುದ್ಧ ಚಕ್ರಾಬ್ಜಂ ವಾಮೇ ಪರ್ವತ ಲಾಂಛಿತಮ್ ॥

ದೇವ ಸುದರ್ಶನ–

ಕದಂಬ ಕುಸುಮಾಕಾರ ರೇಖಪಂಚಕ ಸಂಯುತಮ್ ।
ಸುದರ್ಶನಂ ತಥಿವಾಮೇ ದೇವ ಚಕ್ರಂ ಮಹಾದ್ಯುತಿಃ ।

ಲಕ್ಷ್ಮೀ ಸುದರ್ಶನ–

ಸುದರ್ಶನ ಮಹಾಚಕ್ರೇ ತ್ರೈಲೋಕ್ಯಂ ಸಚರಾಚರಮ್ ।
ರಮಯಾ ಸಹದೇವೋಪಿ ಸ್ವಯಂ ತಿಷ್ಠತಿ ಸರ್ವದಾ ॥
ಚಕ್ರದ್ವಯಂ ಬಿಲಂ ನಾಸ್ತಿ ಊರ್ಧ್ವವಕ್ತ್ರಂ ಸುದರ್ಶನಮ್ ।

ತ್ರೈಲೋಕ್ಯ ಸುದರ್ಶನ–

ಸುದರ್ಶನ ಮಹಾಚಕ್ರೇ ತ್ರೈಲೋಕ್ಯಂ ಸಚರಾಚರಮ್ ।
ರಮಯಾ ಸಹ ದೇವೋಽಪಿ ಸ್ವಯಂ ತಿಷ್ಠತಿ ಸರ್ವದಾ ॥

ಚಕ್ರಪಾಣಿ–

ಪೂರ್ವಭಾಗೇಽತ್ರಿವದನಃ ಪಕ್ಷ ದೇಕೇನ ಸಂಯುತಃ ।
ಚಕ್ರಪಾಣೇರಿತಿ ಖ್ಯಾತ ಚಕ್ರವರ್ತಿ ಪ್ರದಾಯಕಃ ॥

## ೨೨. ಜಗದ್ಯೋನಿಮೂರ್ತಿ ಲಕ್ಷಣಮ್ :

ದ್ವಾರಚಕ್ರೋ ಜಗದ್ಯೋನೀ ರಕ್ತವರ್ಣಃ ಸುಖಪ್ರದಃ ।

ದ್ವಾರದಲ್ಲಿಯೇ ಚಕ್ರ, ರಕ್ತವರ್ಣವಿದ್ದದ್ದು ಜಗದ್ಯೋನಿಮೂರ್ತಿ; ಇದು ಪೂಜಕರಿಗೆ ಸುಖವನ್ನೀಯು ವುದು.

## ೨೩. ಅನಂತಮೂರ್ತಿ ಲಕ್ಷಣಮ್ :

ಪಂಚವಕ್ತ್ರಂ ಸ್ಥೂಲತರಂ ಪುರುಷಂ ಬಹುಚಕ್ರಕಮ್ ।
ವಿಶ್ವರೂಪಮನಂತಂ ವಾ ಪುತ್ರಪೌತ್ರಾಭಿವೃದ್ಧಿದಮ್ ॥

ಐದು ವದನಗಳು, ಒರಟಾಗಿರುವ ದೊಡ್ಡ ಆಕಾರ, ಹತ್ತು ಚಕ್ರಗಳಿದ್ದರೆ ವಿಶ್ವರೂಪ ಅಥವಾ ಅನಂತಮೂರ್ತಿ; ಇದು ಪೂಜಕರಿಗೆ ಪುತ್ರಪೌತ್ರಾಭಿವೃದ್ಧಿಯನ್ನುಂಟುಮಾಡುವುದು.

ಚತುರ್ದಶ ಪ್ರಭೃತಿಭಿರ್ವಿಂಶತ್ಯಾ ಚಕ್ರಶೋಭಿತಃ ।
ನಾನಾ ವರ್ಣೋ ಹ್ಯನಂತಾತ್ಮಾ ನಾಗಭೋಗೇನ ಚಿಹ್ನಿತಃ ॥

ಅನೇಕಮೂರ್ತಿಸಂಯುಕ್ತಃ ಸರ್ವಕಾಮಫಲಪ್ರದಃ ।
ದಕ್ಷಿಣಾವರ್ತಸಹಿತೋ ವನಮಾಲಾವಿಭೂಷಿತಃ ॥

ಹದಿನಾಲ್ಕು ಚಕ್ರಗಳಿಂದ ತೊಡಗಿ ಇಪ್ಪತ್ತು ಚಕ್ರಪರ್ಯಂತ ಚಕ್ರಗಳಿದ್ದು ಅನೇಕವರ್ಣಗಳು ಸರ್ಪ ಶರೀರದ ಚಿಹ್ನೆ, ಬಲಭಾಗದಲ್ಲಿಯ ಸುಳಿಯ ಚಿಹ್ನೆ, ವನಮಾಲೆಯ ಚಿಹ್ನೆಗಳಿದ್ದರೆ ಅನಂತಮೂರ್ತಿಯು; ಅನೇಕಮೂರ್ತಿಸನ್ನಿಧಾನದಲ್ಲಿ ಪೂಜಕರಿಗೆ ಸರ್ವಾಭೀಷ್ಟಗಳನ್ನೀಯುವನು.

## ೨೪. ಅವ್ಯಯಮೂರ್ತಿ ಲಕ್ಷಣಮ್ :

**ಪೂಜನೀಯಃ ಪ್ರಯತ್ನೇನ ಸ್ಥಿರಃ ಸ್ನಿಗ್ಧಃ ಸುವರ್ತುಲಃ ।**
**ಬಹುವರ್ಣೋ ದ್ವಾರಚಕ್ರಃ ಪೂಜತಾಂ ಸೌಖ್ಯದೋಽವ್ಯಯಃ ॥**

ನುಣುಪಾಗಿ, ಉರುಟಾಗಿ, ಸ್ಥಿರವಾಗಿ ಬಹಳ ಬಣ್ಣವಿದ್ದು, ದ್ವಾರದಲ್ಲಿ ಚಕ್ರವಿದ್ದರೆ ಅವ್ಯಯನು; ಇದು ಪೂಜಿಸುವವರಿಗೆ ಸೌಖ್ಯವನ್ನು ಕೊಡುವುದು.

# ತ್ರಿಮೂರ್ತಿ ಲಕ್ಷಣಗಳು [22]

## ತ್ರಿಮೂರ್ತಿ ಲಕ್ಷಣಮ್ :

ಊರ್ಧ್ವಾಧಸ್ತಾತ್ತ್ರಿವದನಃ ಷಟ್ಚಕ್ರಃ ಶ್ಯಾಮಲಪ್ರಭಃ ।
ತ್ರಿಮೂರ್ತಿರಿತಿವಿಖ್ಯಾತಃ ಸರ್ವಸೌಭಾಗ್ಯದಾಯಕಃ ॥

ಮೇಲಿನಿಂದಲೂ ಕೆಳಗಿನಿಂದಲೂ ಮೂರು ವದನಗಳು ಆರು ಚಕ್ರಗಳು, ಕಪ್ಪುಬಣ್ಣವಿದ್ದರೆ ತ್ರಿಮೂರ್ತಿ; ಇದು ಸರ್ವಸೌಭಾಗ್ಯವನ್ನು ಕೊಡುವುದು.

ಚಕ್ರತ್ರಯಸಮೇತೋ ವಾ ವದನೇಷು ತ್ರಿಷುಕ್ರಮಾತ್ ।
ತ್ರಿಮೂರ್ತಿರಿತಿ ವಿಖ್ಯಾತಃ ಸರ್ವಸಂಪದ್ಪ್ರದೋಽರ್ಚತಾಮ್ ॥

ಕ್ರಮವಾಗಿ ಮೂರು ವದನಗಳಲ್ಲಿ ಮೂರು ಚಕ್ರಗಳಿದ್ದರೆ ತ್ರಿಮೂರ್ತಿ; ಇದು ಪೂಜಿಸುವವರಿಗೆ ಸರ್ವಸಂಪತ್ಪ್ರದವಾಗಿದೆ.

## ೧. ಸ್ವಯಂಭೂಮೂರ್ತಿ ಲಕ್ಷಣಮ್ :

ದೀರ್ಘಾಸ್ಯ ಪೃಥುಚಕ್ರಸ್ತು ಮೂರ್ಧ್ನಿ ವರ್ತುಲರೇಖವಾನ್ ।
ನೀಲವರ್ಣಸಮಾಯುಕ್ತಃ ಸ್ವಯಂಭೂಃ ಪರಿಕೀರ್ತಿತಃ ॥

ಉದ್ದವಾದ ವದನ, ದೊಡ್ಡದಾದ ಚಕ್ರ ಶಿರಸ್ಸಿನಲ್ಲಿದ್ದು ರೇಖೆ, ಕಪ್ಪುಬಣ್ಣವಿದ್ದರೆ ಸ್ವಯಂಭೂ ಎನಿಸುವುದು. ಇದನ್ನು ಕೇವಲ ಮೋಕ್ಷಾಪೇಕ್ಷಿಗಳು ಪೂಜಿಸತಕ್ಕದ್ದು.

ಸ್ವಯಂಭೂ–

ಮೂರ್ಧ್ನಿ ವರ್ತುಲಾ ರೇಖಾಭಿರಾಭೂತೋ ನೀಲವರ್ಣವಾನ್ ।
ದೀರ್ಘಾಸ್ಯೋ ಬಹುವಕ್ತ್ರಸ್ತು ಸ್ವಯಂಭೂರಿತಿ ವರ್ತುಲಃ ॥

ಕೇವಲಂ ಮೋಕ್ಷಫಲದೋ ಹ್ಯಾಚಕ್ರಸ್ಯ ನ ಸಂಶಯಃ ।
ಚತುರ್ದಶಪ್ರಕಾರಾಃ ಸ್ಯುಃ ಬ್ರಹ್ಮಮೂರ್ತಿರ್ಮಹಾಪ್ರಭುಃ ॥

ತತ್ರಾಪಿ ಪರಮೇಷ್ಠೀ ದ್ವೇ ಸ್ವರ್ಣ ಗರ್ಭಾಪ್ಪಭೇದನಃ ।
ಹಿರಣ್ಯಗರ್ಭಸ್ತನ್ಮಧ್ಯೇ ತ್ರಿಭಿರ್ದ್ರೋಽದ್ವರೇಖವಾನ್ ॥

ಅಮುಕ್ತಃ ಸ್ವರ್ಣಬಿಂದುಶ್ಚ ಸ್ವರ್ಣಗರ್ಭ ಪ್ರಕೀರ್ತಿತಃ ।
ಹಿರಣ್ಯಗರ್ಭೋ ಭಗವಾನ್ ಪವಿತ್ರಂ ಭುವಿ ದುರ್ಲಭಮ್ ।
ಚಕ್ರಯುಕ್ತಾಽಪಿ ರೇಖಾಸ್ತು ಚಕ್ರಹೀನೇ ತ್ರಯೋ ವಿದುಃ ॥

ಪಿತಾಮಹಸ್ತತುರ್ವಕ್ತ್ರಂ ನಾನಾಭೇದಃ ಸ ಉಚ್ಯತೇ ।
ಪರಮೇಷ್ಠೀ ತು ಶುಕ್ಲಾಭಮೇಕಚಕ್ರಂ ತಥಾ ಭುಜಮ್ ॥

ಸುವರ್ತುಲಂ ತಥಾ ಪೀತಂ ಪೃಷ್ಠೇ ತು ಸುಶಿರಂ ಭವೇತ್ ।
ಬ್ರಹ್ಮಮೂರ್ತಿಃ ಸ ವಿಜ್ಞೇಯೋ ಭೋಗಮೋಕ್ಷಫಲಪ್ರದಃ ॥

ಪರಮೇಷ್ಠೀ ತು ಶುಕ್ಲಾಭಮೇಕಚಕ್ರಂ ತಥಾಂಬುಜಮ್ ।
ಸುವರ್ತುಲಂ ತಥಾ ಪೀತಂ ಪೃಷ್ಠೇ ತು ಸುಶಿರಂ ಭವೇತ್ ॥

ಬ್ರಹ್ಮಮೂರ್ತಿಃ ಸ ವಿಜ್ಞೇಯೋ ಭೋಗಮೋಕ್ಷ ಫಲಪ್ರದಃ ।
ಪರಮೇಷ್ಠಿತು ಶುಕ್ಲಾಭಶ್ಚಕ್ರ ಪದ್ಮ ಸಮನ್ವಿತಃ ॥

ದ್ವಿಧಾSಕೃತಿಸ್ತಥಾ ಪೃಷ್ಠೇ ಸುಶಿರಂ ವಾSಪಿ ವರ್ತುಲಮ್ ।
ಪೀತವರ್ಣಾಯುಕ್ತಾ ವಾಪಿ ಭುಕ್ತಿಮುಕ್ತಿಫಲಪ್ರದಃ ॥

## ೧ಎ. ಬ್ರಹ್ಮಮೂರ್ತಿ ಲಕ್ಷಣಮ್ :

ಪರಮೇಷ್ಠೀ ತು ಶುಕ್ಲಾಭಶ್ಚಕ್ರಮೇಕಂ ತಥಾಂಬುಜಮ್ ॥

ಸುವರ್ತುಲಂ ತಥಾಪೀತಂ ಪುಷ್ಟಿತಸ್ಸುಷಿರಂ ಧ್ರುವಮ್ ।
ಬ್ರಹ್ಮಮೂರ್ತಿಸ್ತು ವಿಜ್ಞೇಯಾ ಭೋಗಮೋಕ್ಷಫಲಪ್ರದಾ ॥

ಶುಭ್ರವರ್ಣದ ಕಾಂತಿ ಇರುವ, ಒಂದು ಚಕ್ರವುಳ್ಳ, ಒಂದು ಕಮಲವುಳ್ಳ ವರ್ತುಲಾಕಾರವೂ ಹಳದಿ ಬಣ್ಣದ ಪೃಷ್ಠಭಾಗವಿರುವ ಮತ್ತು ರಂಧ್ರವುಳ್ಳ ಬ್ರಹ್ಮಮೂರ್ತಿ ಶಾಲಗ್ರಾಮವು ಭೋಗಮೋಕ್ಷಫಲಪ್ರದ ವಾಗಿರುವುದು.

## ೨. ಪರಮೇಷ್ಠೀಮೂರ್ತಿ ಲಕ್ಷಣಮ್ :

ಪರಮೇಷ್ಠೀತಿ ಶುಕ್ಲಾಭಶ್ಚಕ್ರಪದ್ಮಸಮನ್ವಿತಃ ।
ದ್ವಿಧಾಕೃತಸ್ತಥಾ ಪೃಷ್ಠೇ ಸುಕ್ಷೀರಂ ವಾSಪಿ ವರ್ತುಲವ್ ॥

ಪೀತವರ್ಣಾಯುತೋ ವಾSಪಿ ಭುಕ್ತಿಮುಕ್ತಿಫಲಪ್ರದಃ ॥

ಬಿಳಿದಾದ ಬಣ್ಣ, ಬೆನ್ನಿನಲ್ಲಿ ಚಕ್ರವೂ ಪದ್ಮವೂ ಎರಡು ಭಾಗವಾಗಿದ್ದರೆ, ಹಾಲಿನ ಬಣ್ಣದ ಉರುಟು ಚಿಪ್ಪೆಯಾಗಲಿ ಇಲ್ಲವೇ ಅರಸಿನ ವರ್ಣವಾಗಲೀ ಇದ್ದರೆ ಪರಮೇಷ್ಠಿಮೂರ್ತಿ; ಇದು ಪೂಜಕರಿಗೆ ಐಹಿಕ ಭೋಗ ಹಾಗೂ ಮೋಕ್ಷವನ್ನೀಯುವುದು.

## ೩. ಹಿರಣ್ಯಗರ್ಭಮೂರ್ತಿ ಲಕ್ಷಣಮ್ :

ದ್ವಾರಂ ನ ದೃಶ್ಯತೇ ಯಸ್ಯ ನೀಲವರ್ಣಾಸ್ಸುಶೀತಲಃ ।
ಹಿರಣ್ಯಗರ್ಭಃ ಖ್ಯಾತೋSಸೌ ಹೇಮಗರ್ಭಃ ಶುಭಪ್ರದಃ ॥

ನೀಲಬಣ್ಣದ, ಶೀತಲವಾದ ಮತ್ತು ದ್ವಾರವು ಸರಿಯಾಗಿ ಕಾಣದಿರುವ ಶುಭಪ್ರದವಾದ ಹೇಮಗರ್ಭಿತ ಶಾಲ ಗ್ರಾಮವು ಹಿರಣ್ಯಗರ್ಭಮೂರ್ತಿಶಾಲಗ್ರಾಮವೆಂದು ಖ್ಯಾತವಾಗಿದೆ. ಈ ಶಿಲೆಯ ಮಧ್ಯಭಾಗದಲ್ಲಿ ಚಿನ್ನದ ವರ್ಣವಿರುತ್ತದೆ.

ಹಿಮಾಂಶು ಸದೃಶಾಕಾರಂ ಕೃಷ್ಣಂ ಸ್ಥೂಲ ತಥೋಚ್ಛ್ರಿತವ್ ।
ಹಿರಣ್ಯಗರ್ಭವಾಹುಸ್ತಂ ದ್ವಾರದೃಷ್ಟೇ ಸುದರ್ಶನಮ್ ॥

ಚಂದ್ರನ ಆಕಾರದಂತಿರುವ, ದಪ್ಪವಾಗಿರುವ ಮತ್ತು ರಂಧ್ರವು ಚಂದ್ರನಂತೆ ಕಾಣಿಸುವ ಶಾಲಗ್ರಾಮವು ಹಿರಣ್ಯಗರ್ಭಮೂರ್ತಿ.

ಹಿರಣ್ಯಗರ್ಭೋ ವಿಜ್ಞೇಯಃ ಪೂಜಾಕರ್ತುಶ್ಚ ಶೋಭನಮ್ ।
ಶಿವನಾಮ ಸಹಸ್ರಂ ಚ ಶಾಲಗ್ರಾಮಸಹಸ್ರಕಮ್ ।
ಪೂಜಾಫಲೈಃ ಸಮಂ ಪ್ರೋಕ್ತಂ ಭಕ್ತಿಮುಕ್ತಿಪ್ರದಾಯಕಮ್ ॥

ಹಿರಣ್ಯಗರ್ಭಶಾಲಗ್ರಾಮವನ್ನು ಪೂಜಿಸುವುದರಿಂದ ಒಂದು ಸಾವಿರ ಶಾಲಗ್ರಾಮಗಳನ್ನು ಪೂಜಿಸಿದ ಫಲ ಮತ್ತು ಶಿವಸಹಸ್ರನಾಮಗಳನ್ನು ಪಠನ ಮಾಡಿದ ಫಲ –ಇವೆರಡರಿಂದ ಸಿಗುವಷ್ಟು ಫಲ ಪ್ರಾಪ್ತ ವಾಗುವುದು.

## ೪. ಅಮುಖಸ್ವರ್ಣಗರ್ಭಮೂರ್ತಿ ಲಕ್ಷಣಮ್ :

ಹಿರಣ್ಯಗರ್ಭೋ ಶುಭದೋಽಪ್ಯಮುಖಃ ಸ್ವರ್ಣಭೂಷಿತಃ ।
ಹಿರಣ್ಯಗರ್ಭೋ ವಿಖ್ಯಾತಃ ಶ್ರೀಪ್ರದೋ ಜ್ಞಾನವರ್ಧನಃ ॥

ಮುಖ ಇಲ್ಲದೆ ಇದ್ದದ್ದು ಅಮುಖಸ್ವರ್ಣಗರ್ಭಮೂರ್ತಿ. ಇದು ಸಂಪತ್ತನ್ನು ಕೊಡುವುದು. ಪೂಜಿಸು ವವನನ್ನು ಜ್ಞಾನಿಯನ್ನಾಗಿ ಮಾಡುವುದು.

## ೫. ಹರಿಹರಬ್ರಹ್ಮಮೂರ್ತಿ ಲಕ್ಷಣಮ್ :

ಶಂಖಚಕ್ರಾಹಿಕಮಲ ಕಮಂಡಲು ಪರಶ್ವಧೈಃ ।
ಮಾಲಾತ್ರಯೇಣ ಸಂಯುಕ್ತಂ ಮೂರ್ತಿತ್ರಯಮಿದಂ ವಿದುಃ ॥

ಶಂಖ, ಚಕ್ರ, ಸರ್ಪ, ಕಮಲ, ಕಮಂಡಲು, ಕೊಡಲಿಗಳನ್ನು ಧರಿಸಿ ೩ ಮಾಲೆಗಳನ್ನು ಧರಿಸಿರುವ ೩ ಮೂರ್ತಿಗಳಿಂದ ಕೂಡಿದ ಶಾಲಗ್ರಾಮವೇ ಹರಿಹರಬ್ರಹ್ಮಶಾಲಗ್ರಾಮ.

## ೬. ಚತುರ್ಮುಖ(ಬ್ರಹ್ಮ)ಮೂರ್ತಿ ಲಕ್ಷಣಮ್ :

ಚತುರಸ್ರಾಃ ಪ್ರದೃಶ್ಯಂತೇ ರೇಖಾಃ ಪೃಷ್ಠಸಮೀಪತಃ ।
ದ್ವಿಚಕ್ರೇ ಮಧ್ಯದೇಶೇ ತು ಸಾ ಶಿಲಾ ಸ್ಯಾಚ್ಚತುರ್ಮುಖಃ ॥

ಚಚ್ಚೌಕಗಳಾದ ರೇಖೆಗಳು ಬೆನ್ನಿನ ಸಮೀಪದಲ್ಲಿದ್ದು ಮಧ್ಯದಲ್ಲಿ ಎರಡು ಚಕ್ರಗಳಿದ್ದರೆ ಚತುರ್ಮುಖ ಬ್ರಹ್ಮ

## ೭. ಗರುಡಮೂರ್ತಿ ಲಕ್ಷಣಮ್ :

ದ್ವಿಪಕ್ಷಾಭ್ಯಾಂ ಸಮೋಪೇತಂ ಯದ್ಗರೂಢವಿಮೋಚನಮ್ ।
ದುರ್ಲಭಂ ಸಮಚಕ್ರಂ ತು ಕಾಲೌ ಕಲ್ಮಶನಾಶನಮ್ ॥

ಸ್ಥೂಲಚ್ಛಿನ್ನಮುಖಂ ಯಸ್ಯ ಕಲಶೇನ ಸಮನ್ವಿತಮ್ ।
ವೈನತೇಯಂ ವಿಜಾನೀಯಾಲ್ಲಾಂಛನೈಶ್ಚ ಸಮನ್ವಿತಮ್ ॥

## ೮. ಶೇಷಮೂರ್ತಿ ಲಕ್ಷಣಮ್ :

ಶೇಷಮೂರ್ತಿಸ್ತು ಭಗವಾನಶೇಷೈಶ್ವರ್ಯದಾಯಕಃ ।
ದೀರ್ಘಾಕಾರಂ ಬೃಹದ್ದ್ವಾರಂ ಪೃಥುಚಕ್ರಂ ತು ಯದ್ಭವೇತ್ ॥

ಶ್ವೇತಾಭ ಹಲಚಿಹ್ನಂ ತು ಮುಸಲಾಕೃತಿರೇಖಯಾ ।
ನೀಲೋತ್ಪಲಪ್ರಸೂನಾಭಂ ಪೃಷ್ಠೇ ವಾ ಚಾನತಂ ಪುನಃ ।
ಬಾಹುಶಾಲೀ ಭವೇದ್ರಾಮೋ ವಂಶೈಶ್ವರ್ಯವರ್ಧನಃ ॥

ಉದ್ದವಾದ ಆಕಾರ, ದೊಡ್ಡ ದ್ವಾರ, ವಿಶಾಲವಾದ ಚಕ್ರವಿರುವುದು ಶೇಷಮೂರ್ತಿ; ಇದು ಸಮಸ್ತ ಐಶ್ವರ್ಯವನ್ನು ಕೊಡುವುದು. ಜೊತೆಗೆ, ಬಿಳಿದಾದ ನೇಗಿಲಿನ ಚಿಹ್ನೆ ಮತ್ತು ಮುಸಲ(ಒನಕೆ)ದ ರೇಖೆಗಳಿಂದ ಕೂಡಿದ್ದರೆ ಆ ಶೇಷ ಮೂರ್ತಿಯು ಸಮಸ್ತಸಂಪತ್ತನ್ನೂ ಕೊಡುವುದು; ಹಾಗೆಯೇ ಕನ್ನೈದಿಲೆಯಂತಹ ವರ್ಣ ಬೆನ್ನಿನಲ್ಲಿ ಬಗ್ಗಿರುವ ಚಿಹ್ನೆ ಇದ್ದರೆ ಭುಜಬಲ ಪರಾಕ್ರಮಿಯಾದ ಬಲರಾಮಮೂರ್ತಿ; ಇದರಿಂದ ಸಂತತಿ, ಸಂಪತ್ತುಗಳು ವೃದ್ಧಿಯಾಗುವುದು.

## ೯. ಶಿವನಾಭಮೂರ್ತಿ ಲಕ್ಷಣಮ್ :

ಕೂರ್ಮಾಕೃತಿರಧೋ ಭಾಗೇ ಲಿಂಗಭಾಗೇ ಖುರಾನ್ವಿತಃ ।
ಶಿವನಾಭಿರಿತಿ ಖ್ಯಾತೋ ಭುಕ್ತಿಮುಕ್ತಿಫಲಪ್ರದಃ ॥

ಒಂದು ಭಾಗದಲ್ಲಿ ಕೂರ್ಮಾಕೃತಿ, ಲಿಂಗಭಾಗದಲ್ಲಿ ಗೊರಸಿನ ಚಿಹ್ನೆ ಇದ್ದಲ್ಲಿ ಇದಕ್ಕೆ ಶಿವನಾಭಿ ಎಂದು ಹೆಸರು. ಇದು ಭುಕ್ತಿಮುಕ್ತಿಫಲವನ್ನು ಕೊಡುವುದು.

## ೧೦. ಹರಮೂರ್ತಿ ಲಕ್ಷಣಮ್ :

ಹರಮೂರ್ತಿಸ್ತು ಭಗವಾನ್ ಅತಸೀಕುಸುಮಪ್ರಭಃ ।
ಏಕನಾಭಿಸಮೋಪೇತೋ ಹ್ಯಕ್ಷಸೂತ್ರಾನುವರ್ತಿತಃ ॥

ಕೂರ್ಮಾಕೃತಿರಧೋಭಾಗೇ ಲಿಂಗಭಾಗಃ ಪುರಾನ್ವಿತಃ ।
ಶಿವನಾಭಃರಿತಿಖ್ಯಾತೋ ಭುಕ್ತಿಮುಕ್ತಿಫಲಪ್ರದಃ ॥

ಅತಸೀ ಹೂವಿನಂತಹ ವರ್ಣವಿದ್ದು, ಅಕ್ಷಮಾಲೆಯ ಚಿಹ್ನೆ ಹಾಗೂ ಒಂದು ನಾಭಿ ಇದ್ದರೆ ಹರ ಮೂರ್ತಿ. ಕೆಳಗಡೆ ಆಮೆಯ ಆಕಾರ ಪೂರ್ವಭಾಗದಲ್ಲಿ ಲಿಂಗಾಕಾರವಿದ್ದರೆ ಶಿವನಾಭಿ; ಇದು ಪೂಜಕನಿಗೆ ಐಹಿಕ ಭೋಗವನ್ನೂ, ಪರತ್ರ ಮೋಕ್ಷವನ್ನೂ ಕೊಡುವುದು.

## ೧೧. ಅಘೋರಮೂರ್ತಿ ಲಕ್ಷಣಮ್ :

ಸರ್ವತ್ರಲೋಹಿತಾಕಾರಾ ಮೂರ್ಧ್ನಿಸಕ್ತಃ ಸದಾ ಶಶೀ ।
ಅಘೋರಾ ಸರ್ವದಾ ತ್ಯಾಜ್ಯಾ ಗೃಹಿಭಿರ್ಯತಿಪೂಜಿತಾ ॥

ಎಲ್ಲ ಕಡೆಯಲ್ಲಿ ಕೆಂಪುಬಣ್ಣ, ಶಿರಸ್ಸಿನಲ್ಲಿ ಚಂದ್ರನ ಚಿಹ್ನೆ ಇರುವ ಅಘೋರಮೂರ್ತಿಯು ಸಂನ್ಯಾಸಿಗಳಿಗೆ ಮಾತ್ರ ಪೂಜಿಸಲು ಯೋಗ್ಯವಾಗಿದ್ದು ಗೃಹಸ್ಥಾಶ್ರಮಿಗಳಿಗೆ ತ್ಯಾಜ್ಯವಾದುದು.

## ೧೨. ಹರಿಹರಮೂರ್ತಿ ಲಕ್ಷಣಮ್ :

ಚತುಶ್ಚಕ್ರೋ ಹರಿಹರೋ ದ್ವಿಮುಖೋರ್ಧ್ವಸ್ತಥಾವ್ಯಯಮ್ ।
ವಿನಶ್ಯತಿ ಗೃಹಸ್ಥಸ್ಯ ಧನಂ ಕ್ಷೇತ್ರಂ ಗೃಹಂ ಕುಲಮ್ ॥

ಮೇಲುಮುಖಿಗಳಾದ ಎರಡು ವದನಗಳು, ನಾಲ್ಕು ಚಕ್ರಗಳಿದ್ದರೆ ಹರಿಹರಮೂರ್ತಿ; ಗೃಹಸ್ಥನು ಪೂಜಿಸಿದರೆ ಆತನ ದ್ರವ್ಯ, ಭೂಮಿ, ಮನೆ, ವಂಶಗಳು ನಷ್ಟವಾಗುತ್ತವೆ.

ಶಿವನಾಭಿಯುತಂ ಮೂರ್ಧ್ನಿ ಪೃಷ್ಠೇ ವಾಽಪಿ ಭವೇದ್ಯದಿ ।
ಯತ್ತದ್ಧರಿಹರಂ ಪ್ರೋಕ್ತಂ ತತ್ಸೌಭಾಗ್ಯಸುಖಪ್ರದಮ್ ॥

ಶಿರಸ್ಸಿನಲ್ಲಾಗಲಿ ಬೆನ್ನಿನಲ್ಲಾಗಲಿ ಶಿವನಾಭಿಚಿಹ್ನೆ ಇದ್ದರೆ ಹರಿಹರಮೂರ್ತಿ; ಸೌಭಾಗ್ಯಸುಖಗಳನ್ನು ಕೊಡುವುದು.

ಅಧಶ್ಚೋರ್ಧ್ವಂ ಯದಿಭವೇದ್ದ್ವೇದ್ವೇ ಚಕ್ರೇ ಸುಶೋಭನೇ ।
ಯತ್ತದ್ಧರಿಹರಂ ವಿದ್ಯಾನ್ನೃಣಾಂ ದಾರಿದ್ರ್ಯದಂ ಕ್ರಮಾತ್ ॥

ಕೆಳಗಡೆ ಮತ್ತು ಮೇಲು ಭಾಗಗಳಲ್ಲಿ ಅಂದವಾದ ಎರಡೆರಡು ಚಕ್ರಗಳಿದ್ದರೆ ಹರಿಹರಮೂರ್ತಿ; ಪೂಜಕರಿಗೆ ದಾರಿದ್ರ್ಯವನ್ನು ಕೊಡುವುದು.

ಶಿವನಾಭಿಯುತಃ ಪಾರ್ಶ್ವೇ ವಾಮೇ ವಾ ದಕ್ಷಿಣೇಽಪಿ ವಾ ।
ಸ ತು ಶಂಕರಪೂರ್ವಾಖ್ಯೋ ನಾರಾಯಣ ಇತೀರಿತಃ ॥

ಎಡ ಪಾರ್ಶ್ವದಲ್ಲಾಗಲಿ, ಬಲಪಾರ್ಶ್ವದಲ್ಲಾಗಲಿ ಶಿವನಾಭಿಚಿಹ್ನೆ ಇದ್ದರೆ ಅದು ಹರಿಹರಮೂರ್ತಿಯು (ಶಂಕರನಾರಾಯಣಮೂರ್ತಿ).

## ೧೩. ಶಂಕರ(ಶಿವ)ನಾರಾಯಣಮೂರ್ತಿ ಲಕ್ಷಣಮ್ :

ಗಂಡಕೀಗರ್ಭಸಂಭೂತಂ ಧನುರಾಕಾರಶೋಭಿತಮ್ ।
ಶಂಖಂ ಪ್ರಥಮಪೂರ್ವಾರ್ಧಂ ಪಶ್ಚಾಚ್ಚ ಶ್ಯಾಮಲಪ್ರಭಮ್ ॥

ಸರೋಜಪಟಚಕ್ರಾಗ್ರಂ ಅಧಸ್ತಾದ್ರಕ್ತಬಿಂದುಮಾನ್ ।
ಶಿರಃಸ್ಥಿತಾ ಜಟಾರೇಖಾ ವನಮಾಲಾಪರಿಸ್ಫುಟಮ್ ॥

ಗೌರೀಲಕ್ಷ್ಮೀಸಮಾಯುಕ್ತಂ ಫಣಿಶ್ರೀವತ್ಸಸಂಯುತಮ್ ।
ಪಶ್ಚಾದ್ಭಾಗೇ ವಿಶಾಲಚಕ್ರಮೇಕಂ ಪರಿಸ್ಫುಟಮ್ ॥

ಶಿವನಾರಾಯಣೇತ್ಯುಕ್ತಂ ಪೂಜಕಾನಾಂ ಚ ಸಿದ್ಧಿದಮ್ ।
ಪ್ರಾಗ್ಜನ್ಮದುರಿತಂ ಹಂತಿ ಪೂಜಕಾನಾಂ ವಿಶೇಷತಃ ॥

## ೧೪. ಸದ್ಯೋಜಾತಮೂರ್ತಿ ಲಕ್ಷಣಮ್ :

ಹೇಮಬಿಂದುಸಮಾಯುಕ್ತಃ ಹೇಮವರ್ಣಸಮನ್ವಿತಃ ।
ಮಸ್ತಕೇ ಮೌಕ್ತಿಕಾಭಾಸೌ ಚಂದ್ರಗಂಗಾ ಸಮನ್ವಿತಃ ।
ಸದ್ಯೋಜಾತ ಇತಿ ಶ್ರೇಷ್ಠಃ ಪುತ್ರಪೌತ್ರಧನಪ್ರದಃ ॥

ಚಿನ್ನದಂತಹ ಬಿಂದು, ಚಿನ್ನದಂತಹ ಬಣ್ಣ, ಶಿರಸ್ಸಿನಲ್ಲಿ ಮುತ್ತಿನ ಕಾಂತಿ ಮತ್ತು ಚಂದ್ರಗಂಗೆಯರ ಚಿಹ್ನೆಗಳಿದ್ದರೆ ಸದ್ಯೋಜಾತಮೂರ್ತಿ; ಇದು ಅತಿಶ್ರೇಷ್ಠವಾದುದು ಹಾಗೂ ಪುತ್ರಪೌತ್ರಾದಿಸಂತತಿವೃದ್ಧಿಕರವಾದುದು.

ಶ್ವೇತಾಭ ಹಲಚಿಹ್ನಂ ತು ಮುಸಲಾಕೃತಿರೇಖಯಾ ।
ನೀಲೋತ್ಪಲಪ್ರಸೂನಾಭಂ ಪೃಷ್ಠೇ ವಾ ಚಾನತಂ ಪುನಃ ।
ಬಾಹುಶಾಲೀ ಭವೇದ್ರಾಮೋ ವಂಶೈಶ್ವರ್ಯವರ್ಧನಃ ॥

ಉದ್ದವಾದ ಆಕಾರ, ದೊಡ್ಡ ದ್ವಾರ, ವಿಶಾಲವಾದ ಚಕ್ರವಿರುವುದು ಶೇಷಮೂರ್ತಿ; ಇದು ಸಮಸ್ತ ಐಶ್ವರ್ಯವನ್ನು ಕೊಡುವುದು. ಜೊತೆಗೆ, ಬಿಳಿದಾದ ನೇಗಿಲಿನ ಚಿಹ್ನೆ ಮತ್ತು ಮುಸಲ(ಒನಕೆ)ದ ರೇಖೆಗಳಿಂದ ಕೂಡಿದ್ದರೆ ಆ ಶೇಷ ಮೂರ್ತಿಯು ಸಮಸ್ತಸಂಪತ್ತನ್ನೂ ಕೊಡುವುದು; ಹಾಗೆಯೇ ಕನ್ನೈದಿಲೆಯಂತಹ ವರ್ಣ ಬೆನ್ನಿನಲ್ಲಿ ಬಗ್ಗಿರುವ ಚಿಹ್ನೆ ಇದ್ದರೆ ಭುಜಬಲ ಪರಾಕ್ರಮಿಯಾದ ಬಲರಾಮಮೂರ್ತಿ; ಇದರಿಂದ ಸಂತತಿ, ಸಂಪತ್ತುಗಳು ವೃದ್ಧಿಯಾಗುವುದು.

## ೯. ಶಿವನಾಭಮೂರ್ತಿ ಲಕ್ಷಣಮ್ :

ಕೂರ್ಮಾಕೃತಿರಧೋ ಭಾಗೇ ಲಿಂಗಭಾಗೇ ಖುರಾನ್ವಿತಃ ।
ಶಿವನಾಭಿರಿತಿ ಖ್ಯಾತೋ ಭುಕ್ತಿಮುಕ್ತಿಫಲಪ್ರದಃ ॥

ಒಂದು ಭಾಗದಲ್ಲಿ ಕೂರ್ಮಾಕೃತಿ, ಲಿಂಗಭಾಗದಲ್ಲಿ ಗೊರಸಿನ ಚಿಹ್ನೆ ಇದ್ದಲ್ಲಿ ಇದಕ್ಕೆ ಶಿವನಾಭಿ ಎಂದು ಹೆಸರು. ಇದು ಭುಕ್ತಿಮುಕ್ತಿಫಲವನ್ನು ಕೊಡುವುದು.

## ೧೦. ಹರಮೂರ್ತಿ ಲಕ್ಷಣಮ್ :

ಹರಮೂರ್ತಿಸ್ತು ಭಗವಾನ್ ಅತಸೀಕುಸುಮಪ್ರಭಃ ।
ಏಕನಾಭಿಸಮೋಪೇತೋ ಹ್ಯಕ್ಷಸೂತ್ರಾನುವರ್ತಿತಃ ॥

ಕೂರ್ಮಾಕೃತಿರಧೋಭಾಗೇ ಲಿಂಗಭಾಗಃ ಪುರಾನ್ವಿತಃ ।
ಶಿವನಾಭಇರಿತಿಖ್ಯಾತೋ ಭುಕ್ತಿಮುಕ್ತಿಫಲಪ್ರದಃ ॥

ಅತಸೀ ಹೂವಿನಂತಹ ವರ್ಣವಿದ್ದು, ಅಕ್ಷಮಾಲೆಯ ಚಿಹ್ನೆ ಹಾಗೂ ಒಂದು ನಾಭಿ ಇದ್ದರೆ ಹರ ಮೂರ್ತಿ. ಕೆಳಗಡೆ ಆಮೆಯ ಆಕಾರ ಪೂರ್ವಭಾಗದಲ್ಲಿ ಲಿಂಗಾಕಾರವಿದ್ದರೆ ಶಿವನಾಭಿ; ಇದು ಪೂಜಕನಿಗೆ ಐಹಿಕ ಭೋಗವನ್ನೂ, ಪರತ್ರ ಮೋಕ್ಷವನ್ನೂ ಕೊಡುವುದು.

## ೧೧. ಅಘೋರಮೂರ್ತಿ ಲಕ್ಷಣಮ್ :

ಸರ್ವತ್ರಲೋಹಿತಾಕಾರಾ ಮೂರ್ಧ್ನಿಸಕ್ತಃ ಸದಾ ಶಶೀ ।
ಅಘೋರಾ ಸರ್ವದಾ ತ್ಯಾಜ್ಯಾ ಗೃಹಿಭಿರ್ಯತಿಪೂಜಿತಾ ॥

ಎಲ್ಲ ಕಡೆಯಲ್ಲಿ ಕೆಂಪುಬಣ್ಣ, ಶಿರಸ್ಸಿನಲ್ಲಿ ಚಂದ್ರನ ಚಿಹ್ನೆ ಇರುವ ಅಘೋರಮೂರ್ತಿಯು ಸಂನ್ಯಾಸಿಗಳಿಗೆ ಮಾತ್ರ ಪೂಜಿಸಲು ಯೋಗ್ಯವಾಗಿದ್ದು ಗೃಹಸ್ಥಾಶ್ರಮಿಗಳಿಗೆ ತ್ಯಾಜ್ಯವಾದುದು.

## ೧೨. ಹರಿಹರಮೂರ್ತಿ ಲಕ್ಷಣಮ್ :

ಚತುಶ್ಚಕ್ರೋ ಹರಿಹರೋ ದ್ವಿಮುಖೋರ್ಧ್ವಸ್ತಥಾವ್ಯಯಮ್ ।
ವಿನಶ್ಯತಿ ಗೃಹಸ್ಥಸ್ಯ ಧನಂ ಕ್ಷೇತ್ರಂ ಗೃಹಂ ಕುಲಮ್ ॥

ಮೇಲುಮುಖಿಗಳಾದ ಎರಡು ವದನಗಳು, ನಾಲ್ಕು ಚಕ್ರಗಳಿದ್ದರೆ ಹರಿಹರಮೂರ್ತಿ; ಗೃಹಸ್ಥನು ಪೂಜಿಸಿದರೆ ಆತನ ದ್ರವ್ಯ, ಭೂಮಿ, ಮನೆ, ವಂಶಗಳು ನಷ್ಟವಾಗುತ್ತವೆ.

**ಶಿವನಾಭಿಯುತಂ ಮೂರ್ಧ್ನಿ ಪೃಷ್ಠೇ ವಾಽಪಿ ಭವೇದ್ಯದಿ ।**
**ಯತ್ತದ್ಧರಿಹರಂ ಪ್ರೋಕ್ತಂ ತತ್ಸೌಭಾಗ್ಯಸುಖಪ್ರದಮ್ ॥**

ಶಿರಸ್ಸಿನಲ್ಲಾಗಲಿ ಬೆನ್ನಿನಲ್ಲಾಗಲಿ ಶಿವನಾಭಿಚಿಹ್ನೆ ಇದ್ದರೆ ಹರಿಹರಮೂರ್ತಿ; ಸೌಭಾಗ್ಯಸುಖಗಳನ್ನು ಕೊಡುವುದು.

**ಅಧಶ್ಚೋರ್ಧ್ವಂ ಯದಿಭವೇದ್ದ್ವೇದ್ವೇ ಚಕ್ರೇ ಸುಶೋಭನೇ ।**
**ಯತ್ತದ್ಧರಿಹರಂ ವಿದ್ಯಾನ್ನೃಣಾಂ ದಾರಿದ್ರ್ಯದಂ ಕ್ರಮಾತ್ ॥**

ಕೆಳಗಡೆ ಮತ್ತು ಮೇಲು ಭಾಗಗಳಲ್ಲಿ ಅಂದವಾದ ಎರಡೆರಡು ಚಕ್ರಗಳಿದ್ದರೆ ಹರಿಹರಮೂರ್ತಿ; ಪೂಜಕರಿಗೆ ದಾರಿದ್ರ್ಯವನ್ನು ಕೊಡುವುದು.

**ಶಿವನಾಭಿಯುತಃ ಪಾರ್ಶ್ವೇ ವಾಮೇ ವಾ ದಕ್ಷಿಣೇಽಪಿ ವಾ ।**
**ಸ ತು ಶಂಕರಪೂರ್ವಾಖ್ಯೋ ನಾರಾಯಣ ಇತೀರಿತಃ ॥**

ಎಡ ಪಾರ್ಶ್ವದಲ್ಲಾಗಲಿ, ಬಲಪಾರ್ಶ್ವದಲ್ಲಾಗಲಿ ಶಿವನಾಭಿಚಿಹ್ನೆ ಇದ್ದರೆ ಅದು ಹರಿಹರಮೂರ್ತಿಯು (ಶಂಕರನಾರಾಯಣಮೂರ್ತಿ).

## ೧೩. ಶಂಕರ(ಶಿವ)ನಾರಾಯಣಮೂರ್ತಿ ಲಕ್ಷಣಮ್ :

**ಗಂಡಕೀಗರ್ಭಸಂಭೂತಂ ಧನುರಾಕಾರಶೋಭಿತಮ್ ।**
**ಶಂಖಂ ಪ್ರಥಮಪೂರ್ವಾರ್ಧಂ ಪಶ್ಚಾಚ್ಚ ಶ್ಯಾಮಲಪ್ರಭಮ್ ॥**

**ಸರೋಜಪಟಚಕ್ರಾಗ್ರಂ ಅಧಸ್ತಾದ್ರಕ್ತಬಿಂದುಮಾನ್ ।**
**ಶಿರಃಸ್ಥಿತಾ ಜಟಾರೇಖಾ ವನಮಾಲಾಪರಿಸ್ಫುಟಮ್ ॥**

**ಗೌರೀಲಕ್ಷ್ಮೀಸಮಾಯುಕ್ತಂ ಫಣಿಶ್ರೀವತ್ಸಸಂಯುತಮ್ ।**
**ಪಶ್ಚಾದ್ಭಾಗೇ ವಿಶಾಲಚಕ್ರಮೇಕಂ ಪರಿಸ್ಫುಟಮ್ ॥**

**ಶಿವನಾರಾಯಣೇತ್ಯುಕ್ತಂ ಪೂಜಕಾನಾಂ ಚ ಸಿದ್ಧಿದಮ್ ।**
**ಪ್ರಾಗ್ಜನ್ಮದುರಿತಂ ಹಂತಿ ಪೂಜಕಾನಾಂ ವಿಶೇಷತಃ ॥**

## ೧೪. ಸದ್ಯೋಜಾತಮೂರ್ತಿ ಲಕ್ಷಣಮ್ :

**ಹೇಮಬಿಂದುಸಮಾಯುಕ್ತಃ ಹೇಮವರ್ಣಸಮನ್ವಿತಃ ।**
**ಮಸ್ತಕೇ ಮೌಕ್ತಿಕಾಭಾಸೌ ಚಂದ್ರಗಂಗಾ ಸಮನ್ವಿತಃ ।**
**ಸದ್ಯೋಜಾತ ಇತಿ ಶ್ರೇಷ್ಠಃ ಪುತ್ರಪೌತ್ರಧನಪ್ರದಃ ॥**

ಚಿನ್ನದಂತಹ ಬಿಂದು, ಚಿನ್ನದಂತಹ ಬಣ್ಣ, ಶಿರಸ್ಸಿನಲ್ಲಿ ಮುತ್ತಿನ ಕಾಂತಿ ಮತ್ತು ಚಂದ್ರಗಂಗೆಯರ ಚಿಹ್ನೆಗಳಿದ್ದರೆ ಸದ್ಯೋಜಾತಮೂರ್ತಿ; ಇದು ಅತಿಶ್ರೇಷ್ಠವಾದುದು ಹಾಗೂ ಪುತ್ರಪೌತ್ರಾದಿಸಂತತಿವೃದ್ಧಿಕರವಾದುದು.

## ೧೫. ವಾಮದೇವಮೂರ್ತಿ ಲಕ್ಷಣಮ್ :

ಲಿಂಗಾಕಾರೋ ರಕ್ತವರ್ಣಃ ಶ್ವೇತಚ್ಛತ್ರ ಜಟಾಯುತಃ ।
ವಾಮದೇವಾಭಿಧಃ ಶ್ರೇಷ್ಠೋ ಗೃಹಿಭಿಃ ಪೂಜಿತಃ ಸದಾ ॥

ಲಿಂಗದ ಆಕಾರ, ಕೆಂಪುಬಣ್ಣ, ಶ್ವೇತಛತ್ರಚಿಹ್ನೆ, ಜಟೆಯ ಚಿಹ್ನೆ ಇದ್ದರೆ ಅದು ವಾಮದೇವಮೂರ್ತಿ; ಇದು ಗೃಹಸ್ಥರಿಗೆ ಪೂಜಾರ್ಹವಾದುದು, ಅಂತೆಯೇ ಅತಿಶ್ರೇಷ್ಠವಾದುದೂ ಹೌದು.

## ೧೬. ಈಶಾನಮೂರ್ತಿ ಲಕ್ಷಣಮ್ :

ಕಿಂಚಿತ್ಕಪಿಲಸಂಯುಕ್ತಃ ಕೃಷ್ಣೋ ನೀಲಜಟೇಂದುಕಃ ।
ಪಾರ್ಶ್ವರೇಖಾಸಮಾಯುಕ್ತ ಈಶಾನೋ ಮುಕ್ತಿದೋ ಭವೇತ್ ॥

ಸ್ವಲ್ಪ ಕಪಿಲಮಿಶ್ರವಾದ ಕಪ್ಪುಬಣ್ಣ, ನೀಲವಾದ ಜಟೆ, ಚಂದ್ರಚಿಹ್ನೆ, ಪಾರ್ಶ್ವಗಳಲ್ಲಿ ರೇಖೆಗಳು ಇದ್ದರೆ ಈಶಾನಮೂರ್ತಿಯು; ಇದು ಪೂಜಕನಿಗೆ ಮೋಕ್ಷವನ್ನು ಕೊಡತಕ್ಕುದು.

## ೧೭. ತತ್ಪುರುಷಮೂರ್ತಿ ಲಕ್ಷಣಮ್ :

ಪೂರ್ವೇ ವಿದ್ಯಾ ಜಟಾಭಾನುರೂರ್ಧ್ವೇ ಲಿಂಗ ಜಟಾವಲೀ ।
ತತ್ಪುರುಷಾಭಿಧಃ ಸ ಸ್ಯಾತ್ ದುರ್ಲಭಃ ಸರ್ವಕಾಮದಃ ॥

ಪೂರ್ವಭಾಗದಲ್ಲಿ ವಿದ್ಯಾರೂಪವಾದ ಜಟೆ ಮತ್ತು ಸೂರ್ಯಚಿಹ್ನೆ, ಮೇಲ್ಭಾಗದಲ್ಲಿ ಕಪ್ಪು-ಕೆಂಪು ಮಿಶ್ರ ಬಣ್ಣದ ಜಟೆ ಮತ್ತು ಚಂದ್ರ ಚಿಹ್ನೆ ಇದ್ದರೆ ತತ್ಪುರುಷಮೂರ್ತಿ; ಇದು ಅತಿ ದುರ್ಲಭವಾದುದು ಮತ್ತು ಪೂಜಕನಿಗೆ ಸರ್ವಾಭೀಷ್ಟಗಳನ್ನು ಕೊಡುವುದು.

## ೧೮. ಶಂಕರಮೂರ್ತಿ ಲಕ್ಷಣಮ್ :

ದ್ವಿಲಿಂಗೋ ವಾ ತ್ರಿಲಿಂಗೋ ವಾ ಚತುಃಪಂಚಾದಿ ಲಿಂಗವಾನ್ ।
ಸ ಚ ಶಂಕರನಾಮಾ ಚ ದೇವೋ ದಿವ್ಯಫಲಪ್ರದಃ ॥

ಎರಡು, ಮೂರು, ನಾಲ್ಕು ಅಥವಾ ಐದು ಲಿಂಗಗಳ ಚಿಹ್ನೆಗಳಿದ್ದರೆ ಶಂಕರಮೂರ್ತಿ; ಇದು ಸ್ವರ್ಗ ಫಲವನ್ನು ಕೊಡುವುದು.

## ೧೯. ಸೂರ್ಯಮೂರ್ತಿ ಲಕ್ಷಣಮ್ :

ಷಡ್ಭಿರ್ವಕ್ತ್ರೈಶ್ಚ ಸಂಯುಕ್ತಃ ಪಾರ್ಶ್ವಯೋರುಭಯೋರಪಿ ।
ಸೂರ್ಯಮೂರ್ತಿಃ ಖಗೇಶಾನ ಸರ್ವವ್ಯಾಧಿವಿನಾಶನಃ ॥

ಎರಡು ಪಾರ್ಶ್ವಗಳಲ್ಲಿ ಆರು ವದನಗಳಿದ್ದರೆ ಸೂರ್ಯಮೂರ್ತಿಯು; ಇದು ಸರ್ವ ವ್ಯಾಧಿಗಳನ್ನು ನಾಶಮಾಡತಕ್ಕುದು.

## ೨೦. ಹೈಹಯ(ಕಾರ್ತವೀರ್ಯ)ಮೂರ್ತಿ ಲಕ್ಷಣಮ್ :

ಗರ್ಭಾಗಾರೇ ತು ಚಕ್ರೇ ತು ಪದ್ಮಂ ವೈ ದಕ್ಷಿಣೇ ತು ಹಿ ।

ಪದ್ಮಪತ್ರಾಕೃತಿರ್ವಾಪಿ ಹೇಮವರ್ಣಸಮಾಕುಲಃ ॥
ಹೈಹಯಾಖ್ಯಃ ಸದಾ ಗೋಪ್ತಾ ಸರ್ವಸಿದ್ಧಿಪ್ರದಾಯಕಃ ।

ಶಾಲಗ್ರಾಮದ ಮಧ್ಯದೊಳಗೆ ಎರಡು ಚಕ್ರಗಳು, ಬಲಭಾಗದಲ್ಲಿ ಪದ್ಮಚಿಹ್ನೆ, ಪದ್ಮಪತ್ರದಂತಹ ಆಕಾರ, ಚಿನ್ನದ ಬಣ್ಣವಿದ್ದರೆ ಹೈಹಯ(ಕಾರ್ತವೀರ್ಯ)ಮೂರ್ತಿ; ಸರ್ವಕಾಲದಲ್ಲಿಯೂ ರಕ್ಷಣೆ ಮಾಡುತ್ತಾ ಸರ್ವಸಿದ್ಧಿ ಯನ್ನು ಕೊಡತಕ್ಕುದು.

## ೨೧. ಹವ್ಯವಾಹನ(ಅಗ್ನಿ)ಮೂರ್ತಿ ಲಕ್ಷಣಮ್ :

ಅಗ್ನಿವರ್ಣೋ ಮಹಾತೇಜಃ ಸಪ್ತರೇಖಾ ಸಮಾಯುತಃ ।
ಹವ್ಯವಾಹನಸಂಜ್ಞೋಽಸೌ ಶ್ರೀಪ್ರದೋ ನಾತ್ರ ಸಂಶಯಃ ॥

## ೨೨. ದತ್ತಾತ್ರೇಯಮೂರ್ತಿ ಲಕ್ಷಣಮ್ :

ಕೃಷ್ಣವರ್ಣಯುತಶ್ಚಾಪಿ ದತ್ತಾತ್ರೇಯಾಭಿಧೋ ಭವೇತ್ ॥

ಕಾರ್ತವೀರ್ಯ ಶಾಲಗ್ರಾಮದಲ್ಲಿ ಇರುವಂತೆ ಎರಡು ಚಕ್ರಗಳು, ಬಲಭಾಗದಲ್ಲಿ ಪದ್ಮಚಿಹ್ನೆ, ಪದ್ಮಪತ್ರದಂತಹ ಆಕಾರಗಳಿದ್ದು, ಕಪ್ಪುಬಣ್ಣವಿದ್ದರೆ ಅದು ದತ್ತಾತ್ರೇಯಮೂರ್ತಿ.

## ಮೂರ್ತಿಭೇದಗಳ ವಿಶೇಷಲಕ್ಷಣಗಳು

ಏತೇಷಾಮೇವ ಕೇಷಾಂಚಿತ್ ಸ್ಪಷ್ಟಭೇದಂ ಪ್ರಕಲ್ಪಯೇತ್ ।
ಸಂಸ್ಥಾನಭೇದಂ ಚಕ್ರಾಣಾಂ ಸಂಖ್ಯಾಭೇದೈಶ್ಚ ಕಥ್ಯತೇ ॥

ಇಷ್ಟರವರೆಗೆ ಹೇಳಿದ ಮೂರ್ತಿಗಳಿಗೆ ಆಕಾರಭೇದಗಳಿಂದಲೂ ಚಕ್ರಗಳ ಸಂಖ್ಯಾಭೇದಗಳಿಂದಲೂ ಸ್ಪಷ್ಟವಾಗುವ ಭೇದಗಳನ್ನು ತಿಳಿದುಕೊಳ್ಳತಕ್ಕದ್ದು.

ದ್ವಾರದಲ್ಲಿ ಚಕ್ರ–

ವಾಸುದೇವೋ ಜಗದ್ಯೋನಿಃ ಕೃಷ್ಣಃ ಪೀತಾಂಬರೋಽವ್ಯಯಃ ।
ಸೀರಪಾಣಿಃ ಸಮೇ ಕಕ್ಷೇ ದ್ವಾರಚಕ್ರಾಃ ಪ್ರಕೀರ್ತಿತಾಃ ॥

ವಾಸುದೇವ, ಜಗದ್ಯೋನಿ, ಕೃಷ್ಣ, ಪೀತಾಂಬರ, ಅವ್ಯಯ, ಸೀರಪಾಣಿ – ಈ ಮೂರ್ತಿಗಳು ಸಮಾನ ವಾಗಿ ದ್ವಾರದಲ್ಲಿಯೇ ಚಕ್ರವಿರುವಂತಹವು.

ಬಲಪಾರ್ಶ್ವದಲ್ಲಿ ಚಕ್ರ–

ಅನಿರುದ್ಧೋ ಹರಿಃ ಕೃಷ್ಣೋ ಜಾಮದಗ್ನ್ಯಸ್ತಥೈವ ಚ ।
ವಾಮೇ ವಾ ದಕ್ಷಿಣೇ ವಾಽಪಿ ಪಾರ್ಶ್ವೇ ಚಕ್ರಸಮನ್ವಿತಃ ॥

ಅನಿರುದ್ಧ, ಹರಿ, ಕೃಷ್ಣ, ಜಾಮದಗ್ನ್ಯ – ಈ ಮೂರ್ತಿಗಳು ಎಡದಲ್ಲಿ ಅಥವಾ ಬಲಪಾರ್ಶ್ವದಲ್ಲಿ ಚಕ್ರವಿರುವಂತಹವುಗಳು.

ಎಡ ಪಾರ್ಶ್ವದಲ್ಲಿ ಚಕ್ರ–

ಲಕ್ಷ್ಮೀನೃಸಿಂಹೋ ವಿಷ್ಣುಶ್ಚ ನಾರಸಿಂಹಶ್ಚ ಭೇದತಃ ।
ಬಲರಾಮೋ ಭೂವರಾಹಃ ಸಯಜ್ಞೋ ವಾಮಚಕ್ರಕಾಃ ॥

ಲಕ್ಷ್ಮೀನೃಸಿಂಹ, ವಿಷ್ಣು, ನಾರಸಿಂಹ, ಬಲರಾಮ, ಭೂವರಾಹ, ಯಜ್ಞಮೂರ್ತಿಗಳು ಎಡ ಪಾರ್ಶ್ವದಲ್ಲಿ ಚಕ್ರವಿರುವಂತಹವುಗಳು.

ಒಂದು ಚಕ್ರ– ಪುಂಡರೀಕಃ ಪ್ರಲಂಬಘ್ನೋ ವೈಕುಂಠೋ ಮಧುಸೂದನಃ ।
ನರಃ ಸುದರ್ಶನೋ ರಾಮಶ್ಚೈಕಚಕ್ರಸಮನ್ವಿತಃ ॥

ಪುಂಡರೀಕ, ಪ್ರಲಂಬಘ್ನ, ವೈಕುಂಠ, ಮಧುಸೂದನ, ನರ, ಸುದರ್ಶನ, ರಾಮ – ಈ ಮೂರ್ತಿಗಳು ಒಂದು ಚಕ್ರವುಳ್ಳವುಗಳು.

ಎರಡು ಚಕ್ರ, ಮೂರು ಚಕ್ರ–

ದ್ವಿಚಕ್ರಮೂರ್ತಯಸ್ತತ್ರ ನಗಣ್ಯಂ ತೇ ಬಹುತ್ವತಃ ।
ಅಧೋಮುಖ ನೃಸಿಂಹಶ್ಚ ಶಿಂಶುಮಾರಸ್ತ್ರಿವಿಕ್ರಮಃ ॥
ಮತ್ಸ್ಯಃ ತ್ರಿಮೂರ್ತಿಃ ಪಂಚೈತೇ ತ್ರಿಚಕ್ರಃ ಪರಿಕೀರ್ತಿತಃ ।

